# ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು?

ಡಿ. ಎನ್. ಶಂಕರ ಭಟ್

ಪಾರಿಭಾಷಿಕ ಪದಗಳ ಬಳಕೆ
ವರ್ಣಗಳ ಬಳಕೆ
ಪದವರ್ಗಗಳು
ಪದಗಳ ಒಳರಚನೆ
ನಾಮಪದಗಳ ಸ್ವರೂಪ
ವಿಭಕ್ತಿಗಳು ಮತ್ತು ಕಾರಕಗಳು
ಲಿಂಗ ಮತ್ತು ವಚನಗಳು
ಕ್ರಿಯಾರೂಪಗಳು
ವಿಷಯವಾಕ್ಯಗಳು

ಸುವರ್ಣ ಸಂಭ್ರಮ

# ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು?

ಡಿ. ಎನ್. ಶಂಕರ ಭಟ್

ಪ್ರಕಾಶಕರು
ರವೀಂದ್ರ ಪುಸ್ತಕಾಲಯ
ಚಾಮರಾಜಪೇಟೆ, ಸಾಗರ – 577 401
ಶಿವಮೊಗ್ಗ ಜಿಲ್ಲೆ, ಕರ್ನಾಟಕ

**NIJAKKU HALEGANNADA VYAKARANA ENTAHADU?** (What really is the grammar of Old Kannada?) by **D.N.Shankara Bhat,** Mungaravalli, P.O. Bhimanakone, Honnesara, Sagara 577417. E-mail:<bhatdns@gmail.com>. Published by **Raveendra Pustakalaya,** Chamarajapete, Sagar - 577401, Shimoga Dist. Karnataka. Ph: 08183-228616 (O) 221064 (R)

ISBN: 978-81-925238-7-3

Price : Rs. 200/- Pages: 224

Paper Used: 70 GSM. NS Maplitho

Size: Demy 1/8

First Impression: 2005

Second Impression: 2015



ಮೊದಲನೆಯ ಮುದ್ರಣ: 2005
ಎರಡನೆಯ ಮುದ್ರಣ: 2015

ಪುಟಗಳು: ೨೨೪

ಬೆಲೆ: ೨೦೦ ರೂ.

ಅಕ್ಷರ ಜೋಡಣೆ: ಶ್ರೀಧರ್

ಪ್ರಕಾಶಕರು
ರವೀಂದ್ರ ಪುಸ್ತಕಾಲಯ
ಚಾಮರಾಜಪೇಟೆ
ಸಾಗರ - 577 401
ಶಿವಮೊಗ್ಗ ಜಿಲ್ಲೆ, ಕರ್ನಾಟಕ
ದೂರವಾಣಿ: 08183-228616 (ಕಛೇರಿ) 221064 (ಮನೆ)

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
**Chamarajpet, Bangalore-18**
**e-mail: lakshmimudra@gmail.com**

# ಮುನ್ನುಡಿ

ನಾವು ನಮ್ಮ ಪ್ರೌಢಶಾಲೆ ಮತ್ತು ಕಾಲೇಜುಗಳಲ್ಲಿ ಇವತ್ತು ಬಳಸುತ್ತಿರುವ ಕನ್ನಡ ವ್ಯಾಕರಣಗಳು ನಿಜಕ್ಕೂ ಕನ್ನಡದ ವ್ಯಾಕರಣವೆಂತಹದು ಎಂಬುದನ್ನು ತಿಳಿಸುವುದಿಲ್ಲ; ಕನ್ನಡದ ಪದ, ಪದರೂಪ ಮತ್ತು ವಾಕ್ಯಗಳ ಹಿಂದಿರುವ ನಿಯಮಗಳೆಂತಹವು ಎಂಬುದನ್ನು ವಿವರಿಸುವ ಬದಲು, ಇವು ಸಂಸ್ಕೃತದ ವ್ಯಾಕರಣ ನಿಯಮಗಳನ್ನು ಕನ್ನಡಕ್ಕೆ ಅಳವಡಿಸಲು ಪ್ರಯತ್ನಿಸುತ್ತವೆ; ಕನ್ನಡಕ್ಕೆ ಇವು ತಿಳಿಸುವ ವ್ಯಾಕರಣ ನಿಯಮಗಳಿಗಿಂತ ತೀರ ಭಿನ್ನವಾದ ಮತ್ತು 'ಕನ್ನಡದ್ದೇ ಆದ' ವ್ಯಾಕರಣ ನಿಯಮಗಳಿವೆ; ಅವನ್ನೇ ಇಂತಹ ಕನ್ನಡ ವ್ಯಾಕರಣಗಳು ತಿಳಿಸಬೇಕು ಎಂಬುದನ್ನು ನಾನು ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ ಎಂಬ ಪುಸ್ತಕದಲ್ಲಿ ವಿವರಿಸಿದ್ದೆ.

ಕನ್ನಡದ ವ್ಯಾಕರಣ ಪುಸ್ತಕಗಳಲ್ಲಿ ಈ ತಪ್ಪನ್ನು ಯಾಕೆ ಮಾಡಲಾಗುತ್ತದೆ ಎಂಬುದಕ್ಕೆ ವಿವರಣೆ ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ ಮೊದಲಾದ ಪ್ರಾಚೀನ ವೈಯಾಕರಣಿಗಳು ಹಳೆಗನ್ನಡದ ಮೇಲೆ ಬರೆದಿರುವ ವ್ಯಾಕರಣ ಗ್ರಂಥಗಳಲ್ಲಿದೆ. ಈ ವೈಯಾಕರಣಿಗಳು ಮೊದಲಿಗೆ ಸಂಸ್ಕೃತ ವ್ಯಾಕರಣಗಳನ್ನು ಆಳವಾಗಿ ಅಭ್ಯಸಿಸಿದ್ದರು; ಅನಂತರ, ಕನ್ನಡಕ್ಕೂ ಅಂತಹವೇ ಆದ ವ್ಯಾಕರಣಗಳ ಅವಶ್ಯಕತೆಯಿದೆ ಎಂಬುದನ್ನು ಮನಗಂಡು ಈ ಗ್ರಂಥಗಳನ್ನು ಬರೆದಿದ್ದರು.

ಆದರೆ, ನಿಜಕ್ಕೂ ಹಳೆಗನ್ನಡ ವ್ಯಾಕರಣವೊಂದನ್ನು ರಚಿಸುವಲ್ಲಿ ಸಂಸ್ಕೃತ ವ್ಯಾಕರಣ ಅಷ್ಟೊಂದು ಉತ್ತಮವಾದ ಮಾದರಿಯಲ್ಲ. ಇದಕ್ಕೆ ಕಾರಣವೇನೆಂದರೆ, ಸಂಸ್ಕೃತ ಇಂಡೋ–ಆರ್ಯನ್ ಭಾಷಾಕುಟುಂಬಕ್ಕೆ ಸೇರಿದೆ, ಮತ್ತು ಕನ್ನಡ ಅದಕ್ಕಿಂತ ತೀರ ಭಿನ್ನವಾದ ದ್ರಾವಿಡ ಭಾಷಾಕುಟುಂಬಕ್ಕೆ ಸೇರಿದೆ; ಈ ಎರಡು ಭಾಷಾಕುಟುಂಬಗಳ ನಡುವೆ ವ್ಯಾಕರಣದ ಮೂಲತತ್ವಗಳಲ್ಲೇನೇ ಹಲವು ಮುಖ್ಯವಾದ ವ್ಯತ್ಯಾಸಗಳಿವೆ.

ಎರಡು ಭಾಷಾಕುಟುಂಬಗಳು ಮತ್ತು ಅವುಗಳಿಂದ ಬೆಳೆದು ಬಂದಿರುವ ಭಾಷೆಗಳು ಈ ರೀತಿ ವ್ಯಾಕರಣದ ಮೂಲತತ್ವಗಳಲ್ಲೇನೇ ಭಿನ್ನವಾಗಿರಲು ಸಾಧ್ಯ ಎಂಬುದನ್ನು ಕಂಡುಕೊಳ್ಳಲು ವೈಯಾಕರಣಿಗಳಿಗೆ (ಎಂದರೆ ಭಾಷಾವಿಜ್ಞಾನಿಗಳಿಗೆ) ಇತ್ತೀಚೆಗಷ್ಟೇ ಸಾಧ್ಯವಾಗಿದೆ. ಹೀಗಿರುವಾಗ, ಕೇಶಿರಾಜನೇ ಮೊದಲಾದ ಪ್ರಾಚೀನ ವೈಯಾಕರಣಿಗಳಿಗೆ ಈ ವಿಷಯವನ್ನು ಊಹಿಸಲೂ ಸಾಧ್ಯವಾಗಿರಲಿಲ್ಲ ಎಂಬುದರಲ್ಲಿ ಆಶ್ಚರ್ಯವೇನೂ ಇಲ್ಲ. ಸಂಸ್ಕೃತದ ವ್ಯಾಕರಣ ನಿಯಮಗಳೇ ಹಳೆಗನ್ನಡದವೂ ಆಗಿರಬೇಕೆಂದು ಅವರು ಭಾವಿಸಿದ್ದರು.

ಕೇಶಿರಾಜನೇ ಮೊದಲಾದ ಪ್ರಾಚೀನ ವಿದ್ವಾಂಸರು ಹಳೆಗನ್ನಡದ ಮೇಲೆ ವ್ಯಾಕರಣ ಗ್ರಂಥಗಳನ್ನು ತಯಾರಿಸುವಾಗ, ಸಂಸ್ಕೃತ ವ್ಯಾಕರಣಗಳನ್ನು ಮಾದರಿಯಾಗಿರಿಸಿಕೊಂಡುದರಿಂದಾಗಿ ಹೇಗೆ ದಾರಿತಪ್ಪಿದ್ದಾರೆ ಎಂಬುದನ್ನು ವಿವರಿಸುವುದೇ ಈ ಪುಸ್ತಕದ ಮುಖ್ಯ ಉದ್ದೇಶವಾಗಿದೆ. ಇದನ್ನು ತಿಳಿದುಕೊಂಡಾಗ, ಇವತ್ತಿನ ಹೊಸಗನ್ನಡ ವ್ಯಾಕರಣಗಳೂ ಯಾಕೆ ಕನ್ನಡದ್ದೇ ಆದ ವ್ಯಾಕರಣ ನಿಯಮಗಳನ್ನು ವಿವರಿಸುವಲ್ಲಿ ದಾರಿತಪ್ಪಿವೆ ಎಂಬ ವಿಷಯ ಸ್ಪಷ್ಟವಾಗುತ್ತದೆ.

ಮೇಲೆ ವಿವರಿಸಿದ ಉದ್ದೇಶವನ್ನು ಸಾಧಿಸುವುದಕ್ಕಾಗಿ, ಈ ಪುಸ್ತಕದಲ್ಲಿ ಮೊದಲಿಗೆ

ನಿಜಕ್ಕೂ ಹಳೆಗನ್ನಡದ ವ್ಯಾಕರಣ ನಿಯಮಗಳು ಎಂತಹವು, ಎಂದರೆ ಹಳೆಗನ್ನಡದ ಪದ, ಪದರೂಪ, ಪದಕಂತೆ, ವಾಕ್ಯ ಮೊದಲಾದವುಗಳ ರಚನೆಯ ಹಿಂದೆ ನಿಜಕ್ಕೂ ಎಂತಹ ನಿಯಮಗಳು ಅಡಗಿವೆ, ಮತ್ತು ಈ ನಿಯಮಗಳು ಸಂಸ್ಕೃತದ ಪದ, ಪದರೂಪ, ಪದಕಂತೆ ಮತ್ತು ವಾಕ್ಯ ಮೊದಲಾದವುಗಳ ರಚನೆಯ ಹಿಂದಿರುವ ನಿಯಮಗಳಿಂದ ಹೇಗೆ ಭಿನ್ನವಾಗಿವೆ ಎಂಬುದನ್ನು ಪರಿಶೀಲಿಸಲಾಗಿದೆ.

ಈ ಪರಿಶೀಲನೆಯ ಅನಂತರ, ಕೇಶಿರಾಜನೇ ಮೊದಲಾದ ಹಳೆಗನ್ನಡದ ವೈಯಾಕರಣಿಗಳು ಸಂಸ್ಕೃತದ ವ್ಯಾಕರಣ ನಿಯಮಗಳಿಗೂ ಹಳೆಗನ್ನಡದ ವ್ಯಾಕರಣ ನಿಯಮಗಳಿಗೂ ನಡುವಿರುವ ಈ ಮೂಲಭೂತ ವ್ಯತ್ಯಾಸಗಳನ್ನು ಕಂಡುಕೊಳ್ಳುವಲ್ಲಿ ಹೇಗೆ ಅಡಿಗಡಿಗೂ ಸೋತಿದ್ದಾರೆ, ಮತ್ತು ಇದರಿಂದಾಗಿ, ಅವರ ವ್ಯಾಕರಣ ಗ್ರಂಥಗಳು ಹೇಗೆ ಹಲವು ಸಮಸ್ಯೆಗಳ ಮತ್ತು ಗೊಂದಲಗಳ ಆಗರವಾಗಿವೆ ಎಂಬುದನ್ನು ಅಲ್ಲಲ್ಲೇ ತೋರಿಸಿಕೊಡಲಾಗಿದೆ.

ಹೊಸಗನ್ನಡ ವೈಯಾಕರಣಿಗಳಲ್ಲಿ ಹೆಚ್ಚಿನವರೂ ಕೇಶಿರಾಜನೇ ಮೊದಲಾದ ಪ್ರಾಚೀನ ವೈಯಾಕರಣಿಗಳ ಗ್ರಂಥಗಳನ್ನು ಮಾದರಿಯಾಗಿರಿಸಿಕೊಂಡಿದ್ದಾರೆ. ಹಾಗಾಗಿ, ಅವರ ವ್ಯಾಕರಣಗಳಲ್ಲಿದ್ದ ಸಮಸ್ಯೆ ಮತ್ತು ಗೊಂದಲಗಳು ಇವರ ವ್ಯಾಕರಣಗಳಲ್ಲಿಯೂ ಕಾಣಿಸುತ್ತವೆ. ಇಂತಹ ಸಮಸ್ಯೆ ಮತ್ತು ಗೊಂದಲಗಳ ಮೂಲವೇನೆಂಬುದನ್ನು ಈ ಪುಸ್ತಕ ತೋರಿಸಿಕೊಡುತ್ತಿದೆ ಯಾದ ಕಾರಣ, ಇದನ್ನು ಹಳೆಗನ್ನಡದ ವ್ಯಾಕರಣವೆಂತಹದು ಎಂಬುದನ್ನು ತಿಳಿಯ ಬಯಸುವವರು ಮಾತ್ರವಲ್ಲದೆ, ಹೊಸಗನ್ನಡದ ವ್ಯಾಕರಣಗಳು ಯಾಕೆ ಕಗ್ಗಂಟುಗಳಾಗಿವೆ ಎಂಬುದನ್ನು ತಿಳಿಯಬಯಸುವವರೂ ಸ್ವಾಗತಿಸಬಲ್ಲರು.

ಈ ಪುಸ್ತಕದ ಎರಡನೆಯ ಮುದ್ರಣವನ್ನು ಹೊರತರುತ್ತಿರುವ ರವೀಂದ್ರ ಪ್ರಕಾಶನದ ಶ್ರೀ ವೈ. ಎ. ದಂತಿ ಅವರಿಗೆ ಮತ್ತು ಇದನ್ನು ಅಂದವಾಗಿ ಮುದ್ರಿಸಿರುವ ಲಕ್ಷ್ಮೀ ಮುದ್ರಣಾಲಯದವರಿಗೆ ನಾನು ಆಭಾರಿ.

ಸಾಗರ **ಡಿ. ಎನ್. ಶಂಕರಭಟ್**

ಮೇ ೧, ೨೦೧೪

# ಅನುಕ್ರಮಣಿಕೆ

## ಅಧ್ಯಾಯ ೧: ಪೀಠಿಕೆ



## ಅಧ್ಯಾಯ ೨: ಪಾರಿಭಾಷಿಕ ಪದಗಳ ಬಳಕೆ



## ಅಧ್ಯಾಯ ೩: ವರ್ಣಗಳ ಬಳಕೆ

## ಅಧ್ಯಾಯ ೬: ನಾಮಪದಗಳ ಸ್ವರೂಪ



## ಅಧ್ಯಾಯ ೭: ಲಿಂಗ ಮತ್ತು ವಚನಗಳು

## ಅಧ್ಯಾಯ ೮: ವಿಭಕ್ತಿಗಳು ಮತ್ತು ಕಾರಕಗಳು



## ಅಧ್ಯಾಯ ೯: ಕ್ರಿಯಾರೂಪಗಳು



## ಅಧ್ಯಾಯ ೧೦: ವಾಕ್ಯಗಳ ಜೋಡಣೆ

## ಅಧ್ಯಾಯ ೧೧: ವಿಷಯವಾಕ್ಯಗಳು



## ಅಧ್ಯಾಯ ೧೨: ಮುಕ್ತಾಯ

# ಪ್ರಕಾಶಕರ ಮಾತು

೫೦ ವರ್ಷಗಳ ಹಿಂದೆ ಸರಕಾರಿ ನೌಕರಿ ಮಾಡಿಕೊಂಡಿದ್ದ ನಾನು ಅದರ ಜೊತೆಗೆ ಸಾಹಿತ್ಯದ ಗೀಳನ್ನು ಹಚ್ಚಿಸಿಕೊಂಡು ನನ್ನದೇ ಒಂದು ಪ್ರಕಾಶನ ಸಂಸ್ಥೆಯ ಮೂಲಕ ಹಲವಾರು ಮೌಲ್ಯಾಧಾರಿತ ಕೃತಿಗಳನ್ನು ಪ್ರಕಟಿಸಿ ನಾಡಿನ ಮೂಲೆ ಮೂಲೆಗೂ ತಲುಪಿಸಲು ಪ್ರಯತ್ನಿಸುತ್ತಿದ್ದೇನೆ. ಕಳೆದ ಒಂದು ವರ್ಷದಿಂದ ಹೇಳಿಕೊಳ್ಳುವಂತಹ ಯಾವುದೇ ಪ್ರಕಟಣೆಗೆ ನಾನು ಕೈ ಹಾಕಿರಲಿಲ್ಲ. ಕೆಲ ದಿನಗಳ ಹಿಂದೆ ನಾನು ನನ್ನ ಮಗಳ ಮನೆಗೆ ತೀರ್ಥಹಳ್ಳಿಗೆ ಹೋಗಿದ್ದಾಗ ಪುಟ್ಟ ಶಾಲಾ ಬಾಲಾಕಿಯೊಬ್ಬಳು ಒಂದು ಹಳೆಯ ಚಲನಚಿತ್ರಗೀತೆ ಅ ಆ ಇ ಈ ಕನ್ನಡದ ಅಕ್ಷರಮಾಲೆ ಎಂಬ ಹಾಡನ್ನು ತನ್ನಷ್ಟಕ್ಕೇ ತಾನೇ ಗುನುಗುನಿಸುತ್ತಾ ದಾರಿಯಲ್ಲಿ ಹೋಗುತ್ತಿದ್ದಳು. ಎಷ್ಟು ಸುಂದರವಾದ ಅರ್ಥಗರ್ಭಿತ ಹಾಡು. ಕನ್ನಡದ ಅಕ್ಷರಗಳಿಗೆ ತಮ್ಮದೇ ಆದ ವಿವರಣೆಯನ್ನು ಕೊಡುವ ಆ ಹಾಡು ಮತ್ತೆ ಮತ್ತೆ ನನ್ನ ಮನಸ್ಸಿನಲ್ಲಿ ಮೂಡಿ ಕನ್ನಡ ಭಾಷೆಯ ಬಗ್ಗೆ ಮತ್ತಷ್ಟು ಹೆಮ್ಮೆಪಡುವಂತೆ ಮಾಡಿತು. ಈಗಾಗಲೇ ಕನ್ನಡದ ಹಲವಾರು ಹಿರಿಯ ಸಾಹಿತಿಗಳ ಪುಸ್ತಕಗಳನ್ನು ಪ್ರಕಟಿಸಿದ ಸಂತೋಷ ಒಮ್ಮೆ ಮನಸ್ಸಿನಲ್ಲಿ ಮೂಡಿಸಿತು. ಮತ್ತೆ ನನ್ನಲ್ಲಿ ಪ್ರಕಟಣೆಯ ಗರಿಗೆದರಿಸಿತು.

ಹೀಗೆ ನನ್ನಲ್ಲಿ ಮೂಡಿದ ಭಾಷೆಯ ಅಭಿಮಾನ ನನ್ನನ್ನು ಈ ಕೃತಿಯ ಪ್ರಕಟಣೆಗೆ ಕೈ ಹಾಕುವಂತೆ ಮಾಡಿತು. ನಾಡೋಜ ಮತ್ತು ಪಂಪ ಪ್ರಶಸ್ತಿ ಪಡೆದ ಶ್ರೀಯುತ ಡಿ. ಎನ್. ಶಂಕರ ಭಟ್ ಅವರು ಈಗಾಗಲೇ ಸುಮಾರು ೨೦ ಮೌಲ್ಯಯುತ ಕೃತಿಗಳನ್ನು ಕನ್ನಡ ಸಾಹಿತ್ಯಲೋಕಕ್ಕೆ ಕೊಟ್ಟಿದ್ದಾರೆ. ಅವೆಲ್ಲವೂ ಕನ್ನಡ ಭಾಷೆಯ ಕುರಿತಾದ ಕೃತಿಗಳೇ ಆಗಿರುವುದು ಹೆಮ್ಮೆಯ ವಿಷಯ. ಅಷ್ಟೇ ಅಲ್ಲದೆ ಅಷ್ಟೂ ಕೃತಿಗಳನ್ನು ಅವರೇ ಕಷ್ಟಪಟ್ಟು ಪ್ರಕಟಪಡಿಸಿದ್ದಾರೆ ಕೂಡ. ಇಂತಹ ವಿದ್ವಾಂಸರ ಒಂದು ಕೃತಿಯನ್ನು ನಮ್ಮ ಪ್ರಕಾಶನದಿಂದ ಪ್ರಕಟಪಡಿಸಬೇಕೆಂಬ ಹಂಬಲ ನನ್ನದಾಗಿತ್ತು. ಈ ಆಸೆಗೆ ಅವರು ನೀರೆರೆದು ಈ ಮೊದಲೇ ೨೦೦೫ರಲ್ಲಿ ಪ್ರಕಟವಾಗಿದ್ದ 'ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು?' ಎಂಬ ಕೃತಿಯನ್ನು ಮರು ಪ್ರಕಟಿಸಲು ಹೇಳಿ ನಮಗೆ ಪ್ರೋತ್ಸಾಹಿಸಿದ್ದಾರೆ. ಪ್ರಕಾಶನ ಸಂಸ್ಥೆಯ ೫೦ನೇ ವರ್ಷದ ಸುವರ್ಣ ಸಂಭ್ರಮೋತ್ಸವದಲ್ಲಿ ಈ ಕೃತಿ ಪ್ರಕಟವಾಗುತ್ತಿರುವುದು ನಮಗೆ ಮತ್ತಷ್ಟು ಸಂತಸ ತಂದಿದೆ. ಈ ನಿಟ್ಟಿನಲ್ಲಿ ಸಹಕರಿಸಿದ ಶ್ರೀಮತಿ ಮತ್ತು ಶ್ರೀ ಡಿ. ಎನ್. ಶಂಕರ ಭಟ್ ಅವರಿಗೆ ಪ್ರಕಾಶನ ಸಂಸ್ಥೆಯಿಂದ ತುಂಬು ಹೃದಯದ ವಂದನೆಗಳು.

ಎಂದಿನಂತೆ ಕೃತಿಯನ್ನು ಅಂದವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದವರಿಗೆ, ಪುಸ್ತಕ ವಿನ್ಯಾಸ ಮಾಡಿದ ಆರ್.ಎಸ್. ಶ್ರೀಧರ ಅವರಿಗೆ ಮತ್ತು ನಮ್ಮ ಕೃತಿಗಳನ್ನು ಕೊಂಡು ಓದಿ ಬೆಂಬಲಿಸುತ್ತಿರುವ ಎಲ್ಲ ಓದುಗರಿಗೂ ಅನಂತಾನಂತ ಧನ್ಯವಾದಗಳು.

**ವೈ. ಎ. ದಂತಿ**<br>
ಪ್ರಕಾಶನದ ಪರವಾಗಿ

## ಅಧ್ಯಾಯ ಒಂದು
# ಪೀಠಿಕೆ

### ೧.೧ ವ್ಯಾಕರಣದ ಉದ್ದೇಶ

ಒಂದು ಭಾಷೆಯಲ್ಲಿ ಬಳಕೆಯಲ್ಲಿರುವ ಪದ, ಪದರೂಪ, ಪದಕಂತೆ ಮತ್ತು ವಾಕ್ಯಗಳ ರಚನೆಯೆಂತಹದು ಎಂಬುದನ್ನು ವಿವರಿಸಿ ಹೇಳುವುದೇ ವ್ಯಾಕರಣದ ಮುಖ್ಯ ಉದ್ದೇಶ. ಈ ರಚನೆ ಭಾಷೆಯಿಂದ ಭಾಷೆಗೆ ಬೇರೆ ಬೇರೆಯಾಗಿರುತ್ತದೆ. ಒಂದು ಭಾಷೆಯನ್ನು ಚನ್ನಾಗಿ ತಿಳಿದಿದ್ದರೂ ಇನ್ನೊಂದು ಭಾಷೆಯಲ್ಲಿ ಬಳಸಿದ ವಾಕ್ಯಗಳನ್ನು ಅರ್ಥ ಮಾಡಿಕೊಳ್ಳಲು ನಮಗೆ ಸಾಧ್ಯವಾಗದಿರುವುದಕ್ಕೆ ಆ ಎರಡು ಭಾಷೆಗಳ ನಡುವಿರುವ ಇಂತಹ ವ್ಯತ್ಯಾಸಗಳೇ ಮುಖ್ಯ ಕಾರಣ.

ಉದಾಹರಣೆಗಾಗಿ, ಸಂಸ್ಕೃತದಲ್ಲಿ ಬರೆದ ಗ್ರಂಥಗಳನ್ನು ಸುಲಭವಾಗಿ ಓದಿ ಅರ್ಥಮಾಡಿಕೊಳ್ಳಬಲ್ಲ ಒಬ್ಬ ವ್ಯಕ್ತಿ ಹಳೆಗನ್ನಡದಲ್ಲಿ ಬರೆದ ಗ್ರಂಥಗಳನ್ನು ಓದಿ ಅರ್ಥ ಮಾಡಿಕೊಳ್ಳಬೇಕಿದ್ದಲ್ಲಿ, ಆ ಭಾಷೆಯನ್ನು ಪ್ರತ್ಯೇಕವಾಗಿ ಕಲಿತುಕೊಳ್ಳುವ ಅವಶ್ಯಕತೆಯಿದೆ. ಹಳೆಗನ್ನಡದ ಪದ, ಪದರೂಪ, ಪದಕಂತೆ ಮತ್ತು ವಾಕ್ಯಗಳ ರಚನೆ ಸಂಸ್ಕೃತದ ಪದ, ಪದರೂಪ, ಪದಕಂತೆ ಮತ್ತು ವಾಕ್ಯಗಳ ರಚನೆಗಿಂತ ತೀರ ಭಿನ್ನವಾಗಿರುವುದೇ ಇದಕ್ಕೆ ಕಾರಣ.

ಎಲ್ಲಾ ಭಾಷೆಗಳಲ್ಲೂ ಸ್ವರ ಮತ್ತು ವ್ಯಂಜನಗಳನ್ನು ಒಟ್ಟು ಸೇರಿಸಿ ಪದಗಳನ್ನು ರಚಿಸಲಾಗುತ್ತದೆ. ಆದರೆ, ಇದಕ್ಕಾಗಿ ಬಳಕೆಯಾಗುವ ಸ್ವರ ಮತ್ತು ವ್ಯಂಜನಗಳು, ಮತ್ತು ಅವುಗಳ ಸಂಖ್ಯೆ ಭಾಷೆಯಿಂದ ಭಾಷೆಗೆ ಬೇರೆ ಬೇರೆಯಾಗಿರುತ್ತದೆ. ಉದಾಹರಣೆಗಾಗಿ, ಸಂಸ್ಕೃತದ ಪದಗಳಲ್ಲಿ ಬಳಕೆಯಾಗುವ ಮಹಾಪ್ರಾಣಾಕ್ಷರಗಳು, ಮತ್ತು ಋಕಾರ, ಶಕಾರ, ಷಕಾರ ಮೊದಲಾದವುಗಳು ಹಳೆಗನ್ನಡದ ಪದಗಳಲ್ಲಿ ಬಳಕೆಯಾಗುವುದಿಲ್ಲ. ಇದೇ ರೀತಿಯಲ್ಲಿ, ಹಳೆಗನ್ನಡದ ಪದಗಳಲ್ಲಿ ಬಳಕೆಯಾಗುವ ಗಿಡ್ಡ (ಹ್ರಸ್ವ) ಎಕಾರ–ಒಕಾರಗಳು ಮತ್ತು ಱಕಾರ–ೞಕಾರಗಳು ಸಂಸ್ಕೃತದ ಪದಗಳಲ್ಲಿ ಬಳಕೆಯಾಗುವುದಿಲ್ಲ.

ಇದಲ್ಲದೆ, ಯಾವ ಸ್ವರ ಮತ್ತು ವ್ಯಂಜನಗಳ ಸೇರಿಕೆಯಿಂದ ಒಂದು ಪದ ಮತ್ತು ಅದರ ಪದರೂಪಗಳು ಸಿದ್ಧವಾಗುತ್ತವೆ ಎಂಬುದೂ ಭಾಷೆಯಿಂದ ಭಾಷೆಗೆ ಬೇರೆ ಬೇರೆಯಾಗಿರುತ್ತದೆ. ಉದಾಹರಣೆಗಾಗಿ 'ಹತ್ತು' ಎಂಬ ಅರ್ಥ ಕೊಡುವ ಪದ ಹಳೆಗನ್ನಡದಲ್ಲಿ ಪತ್ತು ಎಂಬುದಾಗಿ ಪಕಾರ–ಅಕಾರ–ತಕಾರ–ಉಕಾರಗಳ ಸೇರಿಕೆಯಿಂದ ತಯಾರಾಗಿದೆಯಾದರೆ, ಸಂಸ್ಕೃತದಲ್ಲಿ ದಶ ಎಂಬುದಾಗಿ ದಕಾರ–ಅಕಾರ–ಶಕಾರ–ಅಕಾರಗಳ ಸೇರಿಕೆಯಿಂದ ತಯಾರಾಗಿದೆ.

ಈ ರೀತಿ, ಎರಡು ಭಾಷೆಗಳ ನಡುವೆ ಪದಗಳ ರಚನೆಯಲ್ಲಿ ಯಾವ ಸ್ವರ ಮತ್ತು ವ್ಯಂಜನಗಳು ಹೇಗೆ ಬಳಕೆಯಾಗುತ್ತವೆ ಎಂಬ ವಿಷಯದಲ್ಲಿ ವ್ಯತ್ಯಾಸಗಳು ಕಾಣಿಸಿಕೊಳ್ಳುತ್ತವೆ ಮಾತ್ರವಲ್ಲ, ಅಂತಹ ಪದಗಳ ಮೂಲಕ ಹೊಸ ಹೊಸ ಪದಗಳನ್ನು ಹೇಗೆ ತಯಾರಿಸಲಾಗುತ್ತದೆ ಎಂಬ ವಿಷಯದಲ್ಲೂ ವ್ಯತ್ಯಾಸಗಳು ಕಾಣಿಸಿಕೊಳ್ಳುತ್ತವೆ. ಇದಕ್ಕಾಗಿ ಬಳಕೆಯಾಗುವ ಪ್ರತ್ಯಯಗಳು ಬೇರೆ ಬೇರೆಯಾಗಿರುತ್ತವೆ ಮತ್ತು ಆ ಪ್ರತ್ಯಯಗಳನ್ನು ಬಳಸಿ ಪದಗಳನ್ನು ತಯಾರಿಸುವ ವಿಧಾನಗಳೂ

ಬೇರೆ ಬೇರೆಯಾಗಿರುತ್ತವೆ. ಇದಲ್ಲದೆ, ಎರಡು ಅಥವಾ ಹೆಚ್ಚು ಪದಗಳನ್ನು ಒಟ್ಟು ಸೇರಿಸಿ ಜೋಡುಪದ (ಸಮಸ್ತಪದ)ಗಳನ್ನು ತಯಾರಿಸುವ ವಿಧಾನಗಳೂ ಈ ಭಾಷೆಗಳಲ್ಲಿ ಬೇರೆ ಬೇರೆಯಾಗಿರುತ್ತವೆ.

ಉದಾಹರಣೆಗಾಗಿ, ಕ್ರಿಯಾಪದಗಳಿಂದ ನಾಮಪದಗಳನ್ನು ತಯಾರಿಸುವುದಕ್ಕಾಗಿ ಹಳೆಗನ್ನಡದಲ್ಲಿ ಕೆ(ಗೆ), ಎ, ಅಲ್ ಮೊದಲಾದ ಕೆಲವು ಪ್ರತ್ಯಯಗಳನ್ನು ಬಳಸಲಾಗುತ್ತದೆ (ಅಗಲ್–ಅಗಲ್ಕೆ, ಏಟ್–ಏಟ್ಗೆ, ಉಡು–ಉಡೆ, ಬೀಟ್–ಬೀಟಲ್ ಇತ್ಯಾದಿ). ಆದರೆ, ಸಂಸ್ಕೃತದಲ್ಲಿ ಇವಕ್ಕಿಂತ ಭಿನ್ನವಾಗಿರುವ ಅನ, ಮನ್, ತ್ರ, ತೃ, ಇತ ಯ, ಮೊದಲಾದ ಪ್ರತ್ಯಯಗಳನ್ನು ಬಳಸಲಾಗುತ್ತದೆ (ವಚ್–ವಚನ, ಕೃ–ಕರ್ಮನ್, ವಸ್–ವಸ್ತ್ರ, ದಾ–ದಾತೃ, ಪುಷ್ಪ–ಪುಷ್ಪಿತ, ದರಿದ್ರ–ದಾರಿದ್ರ್ಯ ಇತ್ಯಾದಿ).

ಇದಲ್ಲದೆ, ಹಳೆಗನ್ನಡದಲ್ಲಿ ಇಂತಹ ಪ್ರತ್ಯಯಗಳನ್ನು ಪದಗಳ ಕೊನೆಯಲ್ಲಿ ಮಾತ್ರ ಸೇರಿಸಲು ಸಾಧ್ಯ; ಆದರೆ, ಸಂಸ್ಕೃತದಲ್ಲಿ ಅವನ್ನು ಪದಗಳ ಆದಿಯಲ್ಲೂ ಸೇರಿಸಲು ಸಾಧ್ಯವಿದೆ. ಸಂಸ್ಕೃತದ ಕೃತಿ–ಪ್ರಕೃತಿ, ಭಾವ–ಅಭಾವ, ನಾಶ–ವಿನಾಶ, ಭಾವ–ಪ್ರಭಾವ, ರೂಪ–ಸ್ವರೂಪ ಎಂಬವುಗಳಲ್ಲಿ ಪ್ರ, ಅ, ವಿ ಮತ್ತು ಸ್ವ ಪ್ರತ್ಯಯಗಳು ಪದಗಳ ಆದಿಯಲ್ಲಿ ಸೇರಿರುವುದನ್ನು ಕಾಣಬಹುದು.

ಎರಡು ಅಥವಾ ಜಾಸ್ತಿ ಪದಗಳನ್ನು ಒಟ್ಟು ಸೇರಿಸಿ ಹೊಸ ಪದಗಳನ್ನು ತಯಾರಿಸುವ ವಿಧಾನಗಳೂ ಈ ಎರಡು ಭಾಷೆಗಳಲ್ಲಿ ಬೇರೆ ಬೇರೆಯಾಗಿವೆ, ಮತ್ತು ಈ ರೀತಿ ಪದಗಳಿಗೆ ಪ್ರತ್ಯಯಗಳನ್ನು ಇಲ್ಲವೇ ಬೇರೆ ಪದಗಳನ್ನು ಸೇರಿಸಿ ಹೊಸ ಪದಗಳನ್ನು ತಯಾರಿಸುವಾಗ ಅವುಗಳಲ್ಲಿ ನಡೆಯುವ ಸೇರಿಕೆಯ (ಸಂಧಿಯ) ಬದಲಾವಣೆಗಳೂ ಈ ಎರಡು ಭಾಷೆಗಳಲ್ಲಿ ಬೇರೆ ಬೇರೆಯಾಗಿವೆ.

ಉದಾಹರಣೆಗಾಗಿ, ಇಕಾರದಲ್ಲಿ ಕೊನೆಗೊಳ್ಳುವ ಒಂದು ಪದಕ್ಕೆ ಇಕಾರದಲ್ಲಿ ಸುರುವಾಗುವ ಬೇರೊಂದು ಪದ ಸೇರಿದಾಗ, ಸಂಸ್ಕೃತದಲ್ಲಿ ಅವೆರಡು ಸ್ವರಗಳ ಬದಲು ದೀರ್ಘಸ್ವರ (ಉದ್ದ ಈಕಾರ) ಬರುತ್ತದೆ (ಕವಿ+ಇಂದ್ರ–ಕವೀಂದ್ರ, ಅಸ್ತಿ+ಇಹ–ಅಸ್ತೀಹ). ಆದರೆ, ಹಳೆಗನ್ನಡದಲ್ಲಿ ಒಂದು ಇಕಾರ ಬಿದ್ದು ಹೋಗಿ ಇನ್ನೊಂದು ಹಾಗೆಯೇ ಉಳಿಯುತ್ತದೆ (ಇಲ್ಲಿ+ಇರಲ್–ಇಲ್ಲಿರಲ್, ಆಗಿ+ಇರೆ–ಆಗಿರೆ).

ಪದಗಳನ್ನು ಬಳಸಿ ವಾಕ್ಯಗಳನ್ನು ತಯಾರಿಸುವ ಬಗೆ ಹೇಗೆ ಎಂಬ ವಿಷಯದಲ್ಲೂ ಭಾಷೆಗಳ ನಡುವೆ ವ್ಯತ್ಯಾಸಗಳು ಕಾಣಿಸುತ್ತವೆ. ಹಳೆಗನ್ನಡದ ಪದಗಳನ್ನು ಕೆಲವು ಸಂದರ್ಭಗಳಲ್ಲಿ ಹಾಗೆಯೇ ವಾಕ್ಯಗಳಲ್ಲಿ ಬಳಸಬಹುದು, ಮತ್ತು ಬೇರೆ ಕೆಲವು ಸಂದರ್ಭಗಳಲ್ಲಿ ಅವಕ್ಕೆ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ 'ಪದರೂಪ'ಗಳನ್ನು ತಯಾರಿಸಿ ಬಳಸಬಹುದು. ಇದಲ್ಲದೆ, ಬೇರೆ ಕೆಲವು ಸಂದರ್ಭಗಳಲ್ಲಿ ಎರಡು ಅಥವಾ ಹೆಚ್ಚು ಪದಗಳನ್ನು ಒಟ್ಟು ಸೇರಿಸಿ 'ಪದಕಂತೆ'ಗಳನ್ನು ಇಲ್ಲವೇ 'ಕೂಡುಪದ'ಗಳನ್ನು ತಯಾರಿಸಬಹುದು.

ಸಂಸ್ಕೃತದಲ್ಲಿ ಅವ್ಯಯಗಳನ್ನು ಬಿಟ್ಟರೆ ಉಳಿದ ಯಾವ ಪದ(ಶಬ್ದ)ವನ್ನೂ ಹಾಗೆಯೇ ವಾಕ್ಯದಲ್ಲಿ ಬಳಸಲು ಸಾಧ್ಯವಾಗದು. ಅವುಗಳೊಂದಿಗೆ ಕೆಲವು ವಿಶಿಷ್ಟವಾದ ಪ್ರತ್ಯಯಗಳನ್ನು ('ಸುಬಂತ' ಇಲ್ಲವೇ 'ತಿಜಂತ' ಪ್ರತ್ಯಯಗಳನ್ನು) ಸೇರಿಸಿಯೇ ಅವನ್ನು ಬಳಸಬೇಕಾಗುತ್ತದೆ. ಆದರೆ, ಹಳೆಗನ್ನಡದಲ್ಲಿ ನಾಮಪದಗಳನ್ನು ಇಲ್ಲವೇ ಕ್ರಿಯಾಪದಗಳನ್ನು ಯಾವ ಪ್ರತ್ಯಯದ ಸಹಾಯವೂ ಇಲ್ಲದೆ ವಾಕ್ಯಗಳಲ್ಲಿ ಬಳಸಲು ಸಾಧ್ಯವಿದೆ (ಅ.೨ ನೋಡಿ).

ಇದಲ್ಲದೆ, ಇಂತಹ ಪ್ರತ್ಯಯಗಳ ಸಂಖ್ಯೆ ಮತ್ತು ಸ್ವರೂಪಗಳೂ ಸಂಸ್ಕೃತ ಮತ್ತು

ಹಳೆಗನ್ನಡಗಳಲ್ಲಿ ಬೇರೆ ಬೇರೆಯಾಗಿವೆ. ಪದಕಂತೆ ಮತ್ತು ಕೂಡು ಪದಗಳ ತಯಾರಿಕೆಯಲ್ಲೂ ಈ ಎರಡು ಭಾಷೆಗಳ ನಡುವೆ ಹಲವು ರೀತಿಯ ವ್ಯತ್ಯಾಸಗಳನ್ನು ಕಾಣಬಹುದು.

ಹಳೆಗನ್ನಡದ ಗ್ರಂಥಗಳಲ್ಲಿ ಹಲವಾರು ಪದಗಳನ್ನು ಸಂಸ್ಕೃತದಿಂದ ಎರವಲಾಗಿ ಪಡೆದು ಬಳಸಲಾಗಿದ್ದು, ಇದರಿಂದಾಗಿ ಈ ಎರಡು ಭಾಷೆಗಳಲ್ಲಿ ಬಳಕೆಯಾಗುವ ವಾಕ್ಯಗಳ ನಡುವೆ ಕೆಲವು ಸಾಮ್ಯಗಳನ್ನು ಕಾಣಬಹುದು.

ಆದರೆ, ಈ ರೀತಿ ಹಳೆಗನ್ನಡಕ್ಕೆ ಎರವಲಾಗಿ ಬಂದಿರುವ ಪದಗಳಿಗೂ ಹಳೆಗನ್ನಡದವೇ ಆದ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ಪದರೂಪಗಳನ್ನು ಸಾಧಿಸಬೇಕಾಗುತ್ತದೆ, ಮತ್ತು ಈ ಪದರೂಪಗಳನ್ನು ವಾಕ್ಯಗಳಲ್ಲಿ ಬಳಸುವುದಕ್ಕಾಗಿ ಹಳೆಗನ್ನಡದ್ದೇ ಆದ ವಿಧಾನಗಳನ್ನೂ ಬಳಸಬೇಕಾಗುತ್ತದೆ.

ಉದಾಹರಣೆಗಾಗಿ, ಸಂಸ್ಕೃತದಿಂದ ಎರವಲಾಗಿ ಬಂದಿರುವ ಅಶ್ವ 'ಕುದುರೆ' ಪದವನ್ನು ಹಳೆಗನ್ನಡ ವಾಕ್ಯಗಳಲ್ಲಿ ಬಳಸುವವರು ಅದಕ್ಕೆ ಹಳೆಗನ್ನಡದವೇ ಆದ ಪ್ರತ್ಯಯಗಳನ್ನು ಸೇರಿಸಿ ಅಶ್ವಂಗಳ್, ಅಶ್ವಂಗಳಂ, ಅಶ್ವಕ್ಕೆ ಮೊದಲಾದ ಪದರೂಪಗಳನ್ನು ರಚಿಸಿಕೊಳ್ಳಬೇಕಲ್ಲದೆ ಸಂಸ್ಕೃತದ ಅಶ್ವಾಃ, ಅಶ್ವಾನ್, ಅಶ್ವಾಯ ಮೊದಲಾದ ಪದರೂಪಗಳನ್ನು ಹಾಗೆಯೇ ಬಳಸಲು ಸಾಧ್ಯವಾಗದು.

ಹಾಗಾಗಿ, ಇಂತಹ ಎರವಲಾಗಿ ಬಂದ ಸಂಸ್ಕೃತ ಪದಗಳ ಬಳಕೆಯಲ್ಲೂ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ವ್ಯಾಕರಣ ನಿಯಮಗಳಲ್ಲಿ ಹಲವು ವ್ಯತ್ಯಾಸಗಳನ್ನು ಕಾಣಬಹುದು.

ಈ ಎಲ್ಲಾ ಕಾರಣಗಳಿಂದಾಗಿ, ಹಳೆಗನ್ನಡದಲ್ಲಿ ಬಳಕೆಯಾಗುವ ಪದ, ಪದರೂಪ, ಪದಕಂತೆ ಮತ್ತು ವಾಕ್ಯಗಳ ಸ್ವರೂಪವನ್ನು ವರ್ಣಿಸಬೇಕಾಗಿರುವ ಹಳೆಗನ್ನಡ ವ್ಯಾಕರಣಗಳು ಸಂಸ್ಕೃತದ ಪದ, ಪದರೂಪ, ಪದಕಂತೆ ಮತ್ತು ವಾಕ್ಯಗಳ ಸ್ವರೂಪವನ್ನು ವರ್ಣಿಸಬೇಕಾಗಿರುವ ಸಂಸ್ಕೃತ ವ್ಯಾಕರಣಗಳಿಗಿಂತ ತೀರಾ ಭಿನ್ನವಾಗಿರುವುದು ಅತ್ಯವಶ್ಯ. ಹಾಗಾಗಿ, ಸಂಸ್ಕೃತದ ವ್ಯಾಕರಣ ನಿಯಮಗಳನ್ನು ಹಾಗೆಯೇ ಹಳೆಗನ್ನಡಕ್ಕೆ ಅಳವಡಿಸಲು ಪ್ರಯತ್ನಿಸಿದಲ್ಲಿ ಅದು ಎಂದಿಗೂ ಸಮಾಧಾನಕರವಾದ ಹಳೆಗನ್ನಡ ವ್ಯಾಕರಣವಾಗಲಾರದು.

## ೧.೨ ಎರಡು ರೀತಿಯ ವ್ಯಾಕರಣಗಳು

'ವ್ಯಾಕರಣ' ಎಂಬ ಪದವನ್ನು 'ಅರಿವಿಗೆ ಎಟಕದ ನಿಯಮಾವಳಿ' ಮತ್ತು 'ಅರಿವಿಗೆ ಎಟಕುವ ನಿಯಮಾವಳಿ' ಎಂಬುದಾಗಿ ಎರಡು ಅರ್ಥಗಳಲ್ಲಿ ಬಳಸಲು ಸಾಧ್ಯವಿದೆ. ಇವುಗಳಲ್ಲಿ ಮೊದಲನೆಯ ಅರ್ಥವಿರುವ 'ವ್ಯಾಕರಣ'ವನ್ನು ಭಾಷೆಯನ್ನು ಬಳಸುವವರೆಲ್ಲರೂ ತಿಳಿದಿರುತ್ತಾರೆ ಮತ್ತು ಇಂತಹ ವ್ಯಾಕರಣಗಳು ಎಲ್ಲಾ ಭಾಷೆಗಳಿಗೂ ಇದ್ದೇ ಇರುತ್ತವೆ.

ಅರಿವಿಗೆ ಎಟಕದ ನಿಯಮಾವಳಿಯನ್ನು ಅರಿವಿಗೆ ಎಟಕುವಂತೆ ಮಾಡುವುದಕ್ಕಾಗಿ ವಿದ್ವಾಂಸರು ವ್ಯಾಕರಣ ಗ್ರಂಥಗಳನ್ನು ರಚಿಸುತ್ತಾರೆ. ಈ ಗ್ರಂಥಗಳಲ್ಲಿ ಒಂದು ಭಾಷೆಯ ಪದ, ಪದರೂಪ, ವಾಕ್ಯ ಮೊದಲಾದವುಗಳ ತಯಾರಿಕೆಯಲ್ಲಿ ಎಂತಹ ನಿಯಮಗಳನ್ನೆಲ್ಲ ಬಳಸಬೇಕಾಗುತ್ತದೆ ಎಂಬುದನ್ನು ವಿವರಿಸಿ ಹೇಳಲಾಗುತ್ತದೆ. ಇವು ಮೇಲೆ ಸೂಚಿಸಿರುವ ಎರಡನೆಯ ಅರ್ಥದ ವ್ಯಾಕರಣಗಳು. ಇಂತಹ ವ್ಯಾಕರಣ ಗ್ರಂಥಗಳನ್ನು ಸದ್ಯಕ್ಕೆ ಕೆಲವೇ ಕೆಲವು ಭಾಷೆಗಳಿಗೆ ಮಾತ್ರ ಬರೆಯಲು ಸಾಧ್ಯವಾಗಿದೆ.

ಮೇಲೆ ಸೂಚಿಸಿದ ಹಾಗೆ, ಪ್ರತಿಯೊಂದು ಭಾಷೆಗೂ ಅದನ್ನು ಬಳಸುವ ಜನರ ಅರಿವಿಗೆ ಎಟಕದಂತಹ ಒಂದು 'ವ್ಯಾಕರಣ' ಇದ್ದೇ ಇರುತ್ತದೆ ಎಂಬುದನ್ನು ಕೆಳಗಿನ ವಿಷಯದಿಂದ

ಊಹಿಸಬಹುದು: ಒಂದು ಭಾಷೆಯನ್ನು ಬಳಸುವವರೆಲ್ಲರೂ ಅದರಲ್ಲಿ ವಾಕ್ಯಗಳನ್ನು ರಚಿಸುವುದಕ್ಕಾಗಿ, ಮತ್ತು ಬೇರೆಯವರು ರಚಿಸಿದ ವಾಕ್ಯಗಳನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ಕೆಲವು ನಿಯಮಗಳನ್ನು ತಿಳಿದುಕೊಂಡಿರಬೇಕಾಗುತ್ತದೆ. ಬೇರೆ ಬೇರೆ ರೀತಿಯ ಪದಗಳಿಗೆ ಬೇರೆ ಬೇರೆ ರೀತಿಯ ಪದರೂಪಗಳಿದ್ದು, ಇವನ್ನು ತಯಾರಿಸುವುದು ಹೇಗೆ ಮತ್ತು ವಾಕ್ಯಗಳಲ್ಲಿ ಬಳಸುವುದು ಹೇಗೆ ಎಂಬುದನ್ನೂ ಅವರೆಲ್ಲರೂ ಸರಿಯಾಗಿಯೇ ತಿಳಿದುಕೊಂಡಿರಬೇಕಾಗುತ್ತದೆ.

ಆದರೆ, ಈ ತಿಳುವಳಿಕೆ ಅವರ ಮಿದುಳಿನಲ್ಲಿ ಅರಿವಿಗೆ ಎಟಕದ ರೂಪದಲ್ಲಿರುತ್ತದೆ, ಮತ್ತು ಅದರ ಬಳಕೆಯೂ ಅರಿವಿಗೆ ಎಟಕದ ರೂಪದಲ್ಲೇ ನಡೆಯುತ್ತಿರುತ್ತದೆ. ತಮ್ಮ ಭಾಷೆಗೆ ಸಂಬಂಧಿಸಿದ ಈ ವಾಕ್ಯರಚನೆಯ ನಿಯುಮಗಳನ್ನು ಅವರು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಳ್ಳಬಲ್ಲರೇನೋ ನಿಜ; ಆದರೆ, ಅವುಗಳ ನಿಜವಾದ ಸ್ವರೂಪ, ಮತ್ತು ಅವನ್ನು ಯಾವಾಗ ಎಲ್ಲಿ ಮತ್ತು ಹೇಗೆ ಬಳಸಿಕೊಳ್ಳಬೇಕು ಎಂಬ ಸಂಗತಿ ಅವರ ಮಿದುಳಿನಲ್ಲಿ ಈ ರೀತಿ ಅರಿವಿಗೆ ಎಟಕದ ರೂಪದಲ್ಲಿರುವ ಕಾರಣ, ಅದನ್ನು ಅವರು ಇನ್ನೊಬ್ಬರಿಗೆ ವಿವರಿಸಿ ಹೇಳಲಾರರು.

ಉದಾಹರಣೆಗಾಗಿ, ಹೊಸಗನ್ನಡದಲ್ಲಿ ಇಬ್ಬರು ವ್ಯಕ್ತಿ ಇಲ್ಲವೇ ವಸ್ತುಗಳ ನಡುವಿರುವ ಸಂಬಂಧವನ್ನು ಸೂಚಿಸಲು ಅ ಎಂಬ ಪ್ರತ್ಯಯವನ್ನು ಬಳಸಬೇಕಾಗುತ್ತದೆ. ಅಣ್ಣನ ಮಗ, ಮರದ ಮೇಜು, ಮಗುವಿನ ನಗು, ಹೂವಿನ ವಾಸನೆ ಮೊದಲಾದ ಪದಕಂತೆಗಳಲ್ಲಿ ಬರುವ ಎರಡು ಪದಗಳಲ್ಲಿ ಮೊದಲನೆಯದರ ಕೊನೆಯಲ್ಲಿ ಈ ಪ್ರತ್ಯಯವನ್ನು ಕಾಣಬಹುದು. ಇದನ್ನು ಸರಿಯಾಗಿ ಬಳಸಬೇಕಿದ್ದಲ್ಲಿ ಹಲವಾರು ನಿಯಮಗಳನ್ನು ಪಾಲಿಸಬೇಕಾಗುತ್ತದೆ.

ಹೊಸಗನ್ನಡವನ್ನು ಬಳಸುವವರೆಲ್ಲರೂ ಅ ಪ್ರತ್ಯಯದ ಬಳಕೆಯ ನಿಯಮಗಳನ್ನೆಲ್ಲ ಅವಶ್ಯವಾಗಿಯೂ ತಿಳಿದಿರುತ್ತಾರೆ. ಯಾಕೆಂದರೆ, ಅವರು ವ್ಯಕ್ತಿ ಇಲ್ಲವೇ ವಸ್ತುಗಳ ನಡುವಿನ ಸಂಬಂಧವನ್ನು ತಿಳಿಸಬೇಕಿದ್ದಾಗಲೆಲ್ಲ ಈ ಪ್ರತ್ಯಯವನ್ನು ಸರಿಯಾಗಿಯೇ ಬಳಸಬಲ್ಲರು, ಮತ್ತು ಯಾರಾದರೂ ಅದನ್ನು ತಪ್ಪಾಗಿ ಬಳಸಿದಲ್ಲಿ ಅಲ್ಲೇನೋ ತಪ್ಪಾಗಿದೆ ಎಂಬುದನ್ನೂ ಸೂಚಿಸಬಲ್ಲರು.

ಆದರೆ, ಈ ನಿಯಮಗಳು ಎಂತಹವು ಎಂಬುದನ್ನು ಅವರು ವಿವರಿಸಿ ಹೇಳಲಾರರು; ಏನೋ ತಪ್ಪಾಗಿದೆಯೆಂದು ಹೇಳಬಲ್ಲರು, ಆದರೆ ಅದು ಎಂತಹ ತಪ್ಪು ಎಂಬುದನ್ನು ವಿವರಿಸಲಾರರು. ಅವರ ಮಿದುಳಿನಲ್ಲಿ ಈ ನಿಯಮಗಳು ಅರಿವಿಗೆ ಎಟಕದ ರೂಪದಲ್ಲಿರುವುದೇ ಇದಕ್ಕೆ ಕಾರಣ.

ಸಂಬಂಧವನ್ನು ಸೂಚಿಸುವ ಅ ಪ್ರತ್ಯಯದ ಬಳಕೆಯಲ್ಲಿ ಬರುವ ನಿಯಮಗಳಲ್ಲಿ ಮುಖ್ಯವಾದ ಕೆಲವನ್ನು ಕೆಳಗೆ ಕೊಡಲಾಗಿದೆ.

(೧) ಪದಗಳು ಉಕಾರದಲ್ಲಿ ಕೊನೆಗೊಳ್ಳುತ್ತಿವೆಯಾದರೆ, ಈ ಪ್ರತ್ಯಯದೊಂದಿಗೆ ಇನ್ ಎಂಬುದು ಸೇರಿಕೊಳ್ಳುತ್ತದೆ, ಮತ್ತು ಪದಗಳ ಕೊನೆಯ ಉಕಾರ ಬಿದ್ದುಹೋಗುತ್ತದೆ (ಕಾಡು–ಕಾಡಿನ, ಹಣ್ಣು–ಹಣ್ಣಿನ, ತೆಂಗು–ತೆಂಗಿನ, ಕೂದಲು–ಕೂದಲಿನ).

(೨) ಇಂತಹ ಉಕಾರದಲ್ಲಿ ಕೊನೆಗೊಳ್ಳುವ ಪದಗಳಲ್ಲಿ ಎರಡು ಅಕ್ಷರಗಳು ಮಾತ್ರ ಇದ್ದು ಅವೆರಡೂ ಲಘುವಾಗಿದ್ದಲ್ಲಿ, ಪದಗಳ ಕೊನೆಯ ಉಕಾರ ಬಿದ್ದು ಹೋಗುವುದಿಲ್ಲ; ಅದಕ್ಕೆ ಬದಲು, ಇನ್ ಎಂಬುದರ ಮೊದಲು ವಕಾರವೊಂದು ಸೇರಿಕೊಳ್ಳುತ್ತದೆ (ಮಗು–ಮಗುವಿನ, ಹಸು–ಹಸುವಿನ).

(೩) ಪದಗಳ ಕೊನೆಯ ಉಕಾರ 'ಮನುಷ್ಯೇತರ' ಎಂಬ ಅರ್ಥ ಕೊಡುವ ದು ಪ್ರತ್ಯಯದ ಭಾಗವಾಗಿದೆಯಾದಲ್ಲಿ, ಇನ್ ಎಂಬುದರ ಬದಲು ರ್ ಎಂಬುದು ಬರುತ್ತದೆ (ನಮ್ಮದು–ನಮ್ಮದರ, ಕೆಟ್ಟದು–ಕೆಟ್ಟದರ, ಅಷ್ಟು–ಅಷ್ಟರ, ಒಂದು–ಒಂದರ).

(೪) ಹೆಂಗಸರನ್ನು ಸೂಚಿಸುವ ಳು ಪ್ರತ್ಯಯದಲ್ಲಿ ಇಲ್ಲವೇ ಬಹುವಚನವನ್ನು ಸೂಚಿಸುವ ರು ಇಲ್ಲವೇ ಗಳು ಪ್ರತ್ಯಯದಲ್ಲಿ ಕೊನೆಗೊಳ್ಳುವ ಪದಗಳೊಂದಿಗೆ ಬಂದಾಗ, ಆ ಪದಗಳ ಕೊನೆಯಲ್ಲಿರುವ ಉಕಾರ ಬಿದ್ದುಹೋಗುತ್ತದೆ, ಆದರೆ ಇನ್ ಎಂಬುದು ಸೇರುವುದಿಲ್ಲ; ಅ ಪ್ರತ್ಯಯವೇ ನೇರವಾಗಿ ಸೇರುತ್ತದೆ (ಅವಳು–ಅವಳ, ಹುಡುಗರು–ಹುಡುಗರ, ಜನರು–ಜನರ, ಮರಗಳು–ಮರಗಳ).

(೫) ಪದಗಳು ಇಕಾರ ಇಲ್ಲವೇ ಎಕಾರದಲ್ಲಿ ಕೊನೆಗೊಳ್ಳುತ್ತಿವೆಯಾದರೆ, ಅ ಪ್ರತ್ಯಯದೊಂದಿಗೆ ಯಕಾರ ಸೇರಿಕೊಳ್ಳುತ್ತದೆ (ಗುಡಿ–ಗುಡಿಯ, ರೋಗಿ–ರೋಗಿಯ, ಮನೆ–ಮನೆಯ, ಹಟ್ಟಿ–ಹಟ್ಟಿಯ, ಕಾಗೆ–ಕಾಗೆಯ).

(೬) ಪದಗಳು ಅಕಾರದಲ್ಲಿ ಕೊನೆಗೊಳ್ಳುತ್ತಿದ್ದು (ಕ) ಮನುಷ್ಯರನ್ನು ಸೂಚಿಸುತ್ತಿವೆಯಾದರೆ ನಕಾರವೂ (ಅಣ್ಣ–ಅಣ್ಣನ, ಅಕ್ಕ–ಅಕ್ಕನ), ಮತ್ತು (ಖ) ಇತರ ಸಂದರ್ಭಗಳಲ್ಲಿ ದಕಾರವೂ (ಮರ–ಮರದ, ಹಗ್ಗ–ಹಗ್ಗದ) ಈ ಪ್ರತ್ಯಯದೊಂದಿಗೆ ಸೇರಿಕೊಳ್ಳುತ್ತವೆ. ಗರುಡ, ಕೋಣ ಮೊದಲಾದ ಬೇರೆ ಕೆಲವು ಅಕಾರದಲ್ಲಿ ಕೊನೆಗೊಳ್ಳುವ ಪದಗಳು ಮನುಷ್ಯರನ್ನು ಸೂಚಿಸದಿದ್ದರೂ ನಕಾರದೊಂದಿಗೆ ಬರುತ್ತಿದ್ದು, ಈ ನಿಯಮಕ್ಕೆ ಅಪವಾದಗಳಾಗಿವೆ.

ಕನ್ನಡ ಭಾಷೆಯನ್ನು ಬಳಸುವವರೆಲ್ಲರೂ ಮೇಲೆ ಕೊಟ್ಟಿರುವ ಅ ಪ್ರತ್ಯಯದ ನಿಯಮಗಳನ್ನು ತಿಳಿದಿರಲೇಬೇಕು. ಯಾಕೆಂದರೆ ಅವರೆಲ್ಲರೂ ಈ ಪ್ರತ್ಯಯವನ್ನು ಸರಿಯಾಗಿಯೇ ಬಳಸಬಲ್ಲರು. ಎರಡೂವರೆ ಮೂರು ವರ್ಷದ ಚಿಕ್ಕ ಮಗುವೂ ಇದನ್ನು ಸರಿಯಾಗಿಯೇ ಬಳಸಬಲ್ಲುದು. ಈ ನಿಯಮಗಳನ್ನು ಮತ್ತು ಅವನ್ನು ಬಳಸುವ ಕ್ರಮವನ್ನು ಇವರೆಲ್ಲರೂ ಭಾಷೆಯನ್ನು ಕಲಿತುಕೊಳ್ಳುವ ಸಮಯದಲ್ಲೇನೇ ಪಡೆದಿರುತ್ತಾರೆ. ಆದರೆ, ಇವು ಅವರ ಮಿದುಳಿನಲ್ಲಿ ಅರಿವಿಗೆ ಎಟಕದ ರೂಪದಲ್ಲಿ ಮಾತ್ರವೇ ಸಂಗ್ರಹಿತವಾಗಿರುತ್ತವೆ.

ಈ ನಿಯಮಗಳನ್ನು ಅರಿವಿಗೆ ಎಟಕುವ ರೂಪಕ್ಕೆ ತರಬೇಕಿದ್ದಲ್ಲಿ, ಅದಕ್ಕಾಗಿ ಕನ್ನಡದ ವ್ಯಾಕರಣವನ್ನು ಬರೆಯುವವರು ಕನ್ನಡಿಗರ ಮಾತನ್ನು (ಇಲ್ಲವೇ ಬರಹವನ್ನು) ಪರಿಶೀಲಿಸಬೇಕು, ಮತ್ತು ಅವರ ಮಾತಿನಲ್ಲಿ ಅ ಪ್ರತ್ಯಯ ಬೇರೆ ಬೇರೆ ರೀತಿಯ ನಾಮಪದಗಳೊಂದಿಗೆ ಬರುವಾಗ ಅವುಗಳಲ್ಲಿ ಯಾವ ಯಾವ ರೀತಿಯ ಬದಲಾವಣೆಗಳೆಲ್ಲ ನಡೆಯುತ್ತವೆ ಎಂಬುದನ್ನು ಕಂಡುಹಿಡಿದು, ಮೇಲೆ ಸೂಚಿಸಿದ ಹಾಗೆ ಪಟ್ಟಿಮಾಡಬೇಕು.

ಇಂತಹ ಭಾಷೆಗೆ ಸಂಬಂಧಿಸಿದ ನಿಯಮಗಳನ್ನು ಮಾತ್ರವಲ್ಲದೆ, ನಮ್ಮ ದೇಹಕ್ಕೆ ಸಂಬಂಧಿಸಿದ ಬೇರೆಯೂ ಹಲವು ನಿಯಮಗಳನ್ನು ನಾವು ಈ ರೀತಿ ಅರಿವಿಗೆ ಎಟಕದ ರೂಪದಲ್ಲಿ ಪಡೆದಿರುತ್ತೇವೆ. ಉದಾಹರಣೆಗಾಗಿ, ನಾವು ನಮ್ಮ ಕೈಯನ್ನು ಮೇಲೆ ಇಲ್ಲವೇ ಕೆಳಗೆ, ಆಚೆ ಇಲ್ಲವೇ ಈಚೆ ಬಾಗಿಸಿ, ಬೇರೆ ಬೇರೆ ರೀತಿಯ ಕೆಲಸಗಳನ್ನು ನಡೆಸಬಲ್ಲೆವು. ಇದಕ್ಕಾಗಿ ನಾವು ನಮ್ಮ ಮಿದುಳಿನಿಂದ ಕೈಗಳಲ್ಲಿರುವ ಸ್ನಾಯುಗಳಿಗೆ ಅವು ಯಾವಾಗ ಮತ್ತು ಎಷ್ಟು ಕುಗ್ಗಬೇಕು ಇಲ್ಲವೇ ಹಿಗ್ಗಬೇಕು ಎಂಬುದನ್ನು ಸ್ಪಷ್ಟವಾಗಿ ಸೂಚಿಸಬಲ್ಲ ಸಂಕೇತಗಳನ್ನು ಕಳುಹಿಸಬೇಕು.

ಎಂದರೆ, ಕೈಯನ್ನು ಬೇರೆ ಬೇರೆ ರೀತಿಯಲ್ಲಿ ಬಾಗಿಸಬೇಕಿದ್ದಲ್ಲಿ, ಅದಕ್ಕೆ ಸಂಬಂಧಿಸಿದ ಸ್ನಾಯುಗಳ ಹಿಗ್ಗುವಿಕೆ ಮತ್ತು ಕುಗ್ಗುವಿಕೆಗೆ ಸಂಬಂಧಿಸಿದಂತೆ ಹಲವಾರು 'ನಿಯಮ'ಗಳನ್ನು ನಾವು ತಿಳಿದಿರಬೇಕು, ಮತ್ತು ಅವನ್ನು ಸರಿಯಾಗಿ ಬಳಸಬೇಕು.

ಆದರೆ ಈ ನಿಯಮಗಳು ಎಂತಹವು ಎಂಬುದನ್ನು ನಾವು ವಿವರಿಸಿ ಹೇಳಲಾರೆವು. ಅಂತಹ ನಿಯಮಗಳನ್ನು ನಾವು ಪಾಲಿಸುತ್ತೇವೆ ಎಂಬುದೇ ನಮ್ಮ ಗಮನಕ್ಕೆ ಬರುವುದಿಲ್ಲ. ಅವುಗಳ

ತಿಳಿವು ನಮ್ಮಲ್ಲಿ ಅರಿವಿಗೆ ಎಟಕದ ರೂಪದಲ್ಲಿರುವುದೇ ಇದಕ್ಕೆ ಕಾರಣ. ಅವುಗಳ ಬಳಕೆಯೂ ನಮ್ಮಲ್ಲಿ ಅರಿವಿಗೆ ಎಟಕದ ರೂಪದಲ್ಲೇ ನಡೆಯುತ್ತದೆ.

ಕೈಗಳ ಚಲನೆ ನಡೆಯಬೇಕಿದ್ದಲ್ಲಿ ಅದಕ್ಕಾಗಿ ಹೇಗೆ ಬೇರೆ ಬೇರೆ ಸ್ನಾಯುಗಳು ಹಿಗ್ಗಬೇಕು ಇಲ್ಲವೇ ಕುಗ್ಗಬೇಕು, ಮತ್ತು ಇದಕ್ಕಾಗಿ ಹೇಗೆ ಬೇರೆ ಬೇರೆ ರೀತಿಯ ಸಂಕೇತಗಳು ಮಿದುಳಿನಿಂದ ನರಗಳ ಮೂಲಕ ಆ ಸ್ನಾಯುಗಳನ್ನು ತಲಪಬೇಕು ಎಂಬುದನ್ನು ಸಂಶೋಧನೆಗಳ ಮೂಲಕ ಕಂಡುಹಿಡಿದಿರುವ ವಿಜ್ಞಾನಿಗಳಲ್ಲಿ ಮತ್ತು ಅವರು ಬರೆದಿರುವ ಗ್ರಂಥಗಳನ್ನು ಓದಿ ತಿಳಿದುಕೊಂಡಿರುವ ವಿದ್ವಾಂಸರಲ್ಲಿ ಮಾತ್ರ ಈ ನಿಯಮಗಳು ಅರಿವಿಗೆ ಎಟಕುವ ರೂಪದಲ್ಲಿರುತ್ತವೆ.

ಇದೇ ರೀತಿಯಲ್ಲಿ, ಮೇಲೆ ಸೂಚಿಸಿದ ಹಾಗೆ ಎಲ್ಲಾ ಭಾಷೆಗಳಿಗೂ ಅವನ್ನು ಬಳಸುವ ಜನರಲ್ಲಿ ಅರಿವಿಗೆ ಎಟಕದಂತಹ ರೂಪದಲ್ಲಿರುವ 'ವ್ಯಾಕರಣ'ಗಳು ಇಲ್ಲವೇ ನಿಯಮಾವಳಿಗಳು ಇದ್ದೇ ತೀರಬೇಕು. ಅವು ಎಂತಹವು ಎಂಬುದನ್ನು ಕಂಡುಹಿಡಿದು, ಅವನ್ನು ಅರಿವಿಗೆ ಎಟಕುವ ರೂಪಕ್ಕೆ ತರುವ ಕೆಲಸವನ್ನು ಮಾತ್ರ ಭಾಷೆಗಳ ಮೇಲೆ ವ್ಯಾಕರಣಗಳನ್ನು ಬರೆಯುವ ವೈಯಾಕರಣಿಗಳು ನಡೆಸುತ್ತಾರೆ.

ಅರಿವಿಗೆ ಎಟಕದ ವ್ಯಾಕರಣ ತಪ್ಪಾಗಿರಲು ಸಾಧ್ಯವಿಲ್ಲ. ಯಾಕೆಂದರೆ, ಒಂದು ಭಾಷೆ ಎಂತಹದು ಎಂಬುದು ಅದನ್ನಾಡುವ ಜನರ ಮಿದುಳಿನಲ್ಲಿ ಎಂತಹ ನಿಯಮಾವಳಿ ಸಿದ್ಧವಾಗಿದೆ ಎಂಬುದನ್ನು ಅವಲಂಬಿಸಿದೆ.

ಆದರೆ, ಅದನ್ನು ಅರಿವಿಗೆ ಎಟಕುವಂತೆ ಮಾಡುವ ವಿದ್ವಾಂಸನೊಬ್ಬನ ಕೆಲಸ ಸರಿಯಾಗಿಯೂ ಇರಬಲ್ಲುದು, ಸರಿಯಾಗಿಲ್ಲದೆಯೂ ಇರಬಲ್ಲುದು. ಆ ಭಾಷೆಯಲ್ಲಿ ಬರುವ ಪದ, ಪದರೂಪ, ಪದಕಂತೆ ಮತ್ತು ವಾಕ್ಯಗಳನ್ನು ಸರಿಯಾಗಿ ವಿವರಿಸಲು ಶಕ್ತವಾಗಿದೆಯಾದಲ್ಲಿ ಮಾತ್ರ ಆತ ಸಿದ್ಧಪಡಿಸಿರುವ ಅರಿವಿಗೆ ಎಟಕುವ ನಿಯಮಾವಳಿ (ಎಂದರೆ ಆ ಭಾಷೆಯ ಮೇಲೆ ಆತ ರಚಿಸಿರುವ 'ವ್ಯಾಕರಣ') ಸರಿಯಾದುದೆಂದು ಹೇಳಲು ಸಾಧ್ಯ.

## ೧.೩ ಹಳೆಗನ್ನಡದ ವ್ಯಾಕರಣ

ಹಳೆಗನ್ನಡದಲ್ಲಿ ಪದ, ಪದರೂಪ, ಪದಕಂತೆ ಮತ್ತು ವಾಕ್ಯಗಳನ್ನು ರಚಿಸಬೇಕಾದಲ್ಲಿ ಎಂತಹ ನಿಯಮಗಳನ್ನು ಬಳಸಬೇಕಾಗುತ್ತದೆ ಎಂಬುದನ್ನು ಹಳೆಗನ್ನಡದ ವ್ಯಾಕರಣ ವಿವರಿಸಿ ಹೇಳಬೇಕು. ಆದರೆ ಇಂತಹ ನಿಯಮಗಳನ್ನು ಯಾರೂ ಹೊಸದಾಗಿ ಸೃಷ್ಟಿಸಬೇಕಾಗಿಲ್ಲ ಎಂಬುದನ್ನು ಇಲ್ಲಿ ಗಮನಿಸುವುದು ಅವಶ್ಯ. ಹಳೆಗನ್ನಡವನ್ನು ಸರಿಯಾಗಿ ಬಳಸಬಲ್ಲವರೆಲ್ಲರೂ ಅದಕ್ಕೆ ಬೇಕಾಗುವ ವ್ಯಾಕರಣ ನಿಯಮಗಳನ್ನು ಅರಿವಿಗೆ ಎಟಕದ ರೂಪದಲ್ಲಿ ಆ ಭಾಷೆಯನ್ನು ಕಲಿತುಕೊಳ್ಳುವಾಗಲೇನೇ ಪಡೆದಿರುತ್ತಾರೆ.

ಎಂದರೆ, ಹಳೆಗನ್ನಡದ ವ್ಯಾಕರಣ ನಿಯಮಗಳೆಲ್ಲ ಆ ಭಾಷೆ ಬಳಕೆಯಾಗುವ ಸಂದರ್ಭದಲ್ಲೇನೇ ಬಳಕೆಗೆ ಬಂದಿರುತ್ತವೆ. ಹಾಗಾಗಿ, ಹಳೆಗನ್ನಡ ವ್ಯಾಕರಣವನ್ನು ಬರೆಯುವವರು ಮಾಡಬೇಕಾಗಿರುವ ಕೆಲಸವೇನೆಂದರೆ, ಅರಿವಿಗೆ ಎಟಕದ ರೂಪದಲ್ಲಿರುವ ಈ ವ್ಯಾಕರಣ ನಿಯಮಗಳನ್ನು ಅರಿವಿಗೆ ಎಟಕುವ ರೂಪಕ್ಕೆ ತಂದುಕೊಡುವುದು ಮಾತ್ರ.

ಈ ವ್ಯಾಕರಣ ನಿಯಮಗಳು ಎಂತಹವು? ಇವನ್ನು ಕಂಡುಹಿಡಿಯುವಲ್ಲಿ ಹಳೆಗನ್ನಡದ ವ್ಯಾಕರಣಗಳು ಎಷ್ಟರ ಮಟ್ಟಿಗೆ ಯಶಸ್ವಿಯಾಗಿವೆ ಎಂಬುದನ್ನು ಪರಿಶೀಲಿಸುವುದೇ ಈ ಪುಸ್ತಕದ

ಮುಖ್ಯ ಉದ್ದೇಶ. ಈ ವಿಷಯದಲ್ಲಿ ಹಳೆಗನ್ನಡ ವ್ಯಾಕರಣವನ್ನು ಬರೆದಿರುವವರೆಲ್ಲರೂ ಒಂದು ದೊಡ್ಡ ತಪ್ಪು ಮಾಡಿದ್ದಾರೆ.

ನೇರವಾಗಿ ಹಳೆಗನ್ನಡದ ವ್ಯಾಕರಣ ನಿಯಮಗಳು ಎಂತಹವು ಎಂಬುದನ್ನು ಹಳೆಗನ್ನಡದ ಬರಹಗಳಲ್ಲಿ ಬರುವ ಪದ, ಪದರೂಪ, ಪದಕಂತೆ ಮತ್ತು ವಾಕ್ಯಗಳನ್ನು ಪರಿಶೀಲಿಸುವುದರ ಮೂಲಕ ಕಂಡುಹಿಡಿಯಲು ಪ್ರಯತ್ನಿಸುವ ಬದಲು, ಇವರೆಲ್ಲ ಆಗಲೇ ಸಿದ್ಧವಾಗಿರುವ ಸಂಸ್ಕೃತದ (ಇಲ್ಲವೇ ಪ್ರಾಕೃತದ) ವ್ಯಾಕರಣ ನಿಯಮಗಳನ್ನು ಹಳೆಗನ್ನಡಕ್ಕೆ ಅಳವಡಿಸುವ ಪ್ರಯತ್ನ ಮಾಡಿದ್ದಾರೆ, ಮತ್ತು ಇದರಿಂದಾಗಿ, ಇವರು ಬರೆದಿರುವ ಹಳೆಗನ್ನಡ ವ್ಯಾಕರಣಗಳೆಲ್ಲ ಅನವಶ್ಯಕವಾಗಿ ಬಹಳ ತೊಡಕು ತೊಡಕಿನದಾಗಿವೆ, ಮತ್ತು ಹಲವೆಡೆಗಳಲ್ಲಿ ತಪ್ಪು ತಪ್ಪಾಗಿವೆ.

ಸಂಸ್ಕೃತದ ವ್ಯಾಕರಣ ಸಂಸ್ಕೃತ ಭಾಷೆಯ ಪದ, ಪದರೂಪ ಮತ್ತು ವಾಕ್ಯಗಳನ್ನು ರಚಿಸಬೇಕಿದ್ದಲ್ಲಿ ಎಂತಹ ನಿಯಮಗಳನ್ನು ಪಾಲಿಸಬೇಕು ಎಂಬುದನ್ನು ಸರಿಯಾಗಿಯೇ ವಿವರಿಸುತ್ತಿರಬಹುದು. ಆದರೆ ಹಳೆಗನ್ನಡದ ಪದ, ಪದರೂಪ ಮತ್ತು ವಾಕ್ಯಗಳು ಸಂಸ್ಕೃತದ ಪದ, ಪದರೂಪ ಮತ್ತು ವಾಕ್ಯಗಳಿಗಿಂತ ಬಹಳಷ್ಟು ಭಿನ್ನವಾಗಿವೆಯಾದ ಕಾರಣ, ಆ ನಿಯಮಗಳನ್ನು ಹಾಗೆಯೇ ಹಳೆಗನ್ನಡಕ್ಕೆ ಅಳವಡಿಸಲು ಸಾಧ್ಯವಾಗದು. ಈ ಎರಡು ಭಾಷೆಗಳು ಎರಡು ತೀರ ಭಿನ್ನವಾದ ಮೂಲಗಳಿಂದ ಬೆಳೆದು ಬಂದಿದ್ದು, ಇವು ಬಳಸುವ ನಿಯಮಾವಳಿಗಳ ನಡುವೆ ಹಲವು ಮೂಲಭೂತವಾದ ವ್ಯತ್ಯಾಸಗಳಿವೆ.

ಪ್ರಪಂಚದ ಭಾಷೆಗಳಲ್ಲಿ ಹೆಚ್ಚಿನವನ್ನೂ ಇಂಡೋ–ಯುರೋಪಿಯನ್, ಟಿಬೆಟೋ–ಬರ್ಮನ್, ಆಫ್ರೋ–ಏಶಿಯಾಟಿಕ್, ಆಸ್ಟ್ರಿಕ್, ಇಂಡೋ–ಪೆಸಿಫಿಕ್ ಮೊದಲಾದ ಹದಿನೈದಿಪ್ಪತ್ತು ಭಾಷಾಕುಟುಂಬಗಳಲ್ಲಿ ವಿಂಗಡಿಸಿ ಹೇಳಲು ಸಾಧ್ಯ ಎಂಬುದಾಗಿ ಭಾಷಾವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ (ಭಟ್ ೨೦೦೨:೧೫೩ ನೋಡಿ). ಎಂದರೆ, ಪ್ರಪಂಚದ ಭಾಷೆಗಳಲ್ಲಿ ಹೆಚ್ಚಿನವೂ ಈ ಹದಿನೈದಿಪ್ಪತ್ತು ಮೂಲಗಳಿಂದ ಬೆಳೆದು ಬಂದವುಗಳು, ಮತ್ತು ಹಾಗೆ ಬೆಳೆದು ಬರುವಾಗ ಕವಲು ಕವಲುಗಳಾಗಿ ಒಡೆದು ಇವತ್ತಿನ ಐದಾರು ಸಾವಿರ ಭಾಷೆಗಳಾಗಿ ಸಿದ್ಧವಾದವುಗಳು ಎಂಬುದು ಈ ವಿದ್ವಾಂಸರ ಅಭಿಪ್ರಾಯವಾಗಿದೆ.

ಒಂದು ಭಾಷೆಯು ಬಳಸುವ ವ್ಯಾಕರಣದ ಮೂಲತತ್ವಗಳಲ್ಲಿ ಹೆಚ್ಚಿನವನ್ನೂ ಆ ಭಾಷೆ ಅದು ಯಾವ ಭಾಷಾಕುಟುಂಬಕ್ಕೆ ಸೇರಿದೆಯೋ ಆ ಕುಟುಂಬದ ಮೂಲಭಾಷೆಯಿಂದ ಆನುವಂಶಿಕವಾಗಿ ಪಡೆದಿರುತ್ತದೆ. ಕನ್ನಡ ಮತ್ತು ಸಂಸ್ಕೃತ ಭಾಷೆಗಳು ಬೇರೆ ಬೇರೆ ಭಾಷಾಕುಟುಂಬಗಳಿಗೆ ಸೇರಿರುವ ಭಾಷೆಗಳು; ಸಂಸ್ಕೃತ ಭಾಷೆ ಇಂಡೋ–ಯುರೋಪಿಯನ್ ಭಾಷಾಕುಟುಂಬಕ್ಕೆ ಸೇರಿದೆಯಾದರೆ, ಕನ್ನಡ ಭಾಷೆ ದ್ರಾವಿಡ ಭಾಷಾಕುಟುಂಬಕ್ಕೆ ಸೇರಿದೆ; ಇವೆರಡು ಒಂದಕ್ಕಿಂತ ಒಂದು ತೀರ ಭಿನ್ನವಾಗಿರುವ ಭಾಷಾಕುಟುಂಬಗಳು.

ಸಂಸ್ಕೃತ ಭಾಷೆಯಲ್ಲಿ ಬಳಕೆಯಾಗುವ ವ್ಯಾಕರಣದ ಮೂಲತತ್ವಗಳಲ್ಲಿ ಹೆಚ್ಚಿನವನ್ನೂ ಅದು ಇಂಡೋ–ಯುರೋಪಿಯನ್ ಮೂಲಭಾಷೆಯಿಂದ ಆನುವಂಶಿಕವಾಗಿ ಪಡೆದಿದೆ ಮತ್ತು ಕನ್ನಡ ಭಾಷೆಯಲ್ಲಿ ಬಳಕೆಯಾಗುವ ವ್ಯಾಕರಣದ ಮೂಲತತ್ವಗಳಲ್ಲಿ ಹೆಚ್ಚಿನವನ್ನೂ ಅದು ದ್ರಾವಿಡ ಮೂಲಭಾಷೆಯಿಂದ ಆನುವಂಶಿಕವಾಗಿ ಪಡೆದಿದೆ. ಈ ಎರಡು ಮೂಲಭಾಷೆಗಳು ಒಂದಕ್ಕಿಂತ ಒಂದು ತೀರ ಭಿನ್ನವಾಗಿದ್ದುವಾದ ಕಾರಣ, ಅವುಗಳಿಂದ ಈ ಭಾಷೆಗಳು ಪಡೆದಿರುವ ವ್ಯಾಕರಣದ ಮೂಲತತ್ವಗಳೂ ಒಂದಕ್ಕಿಂತ ಒಂದು ತೀರ ಭಿನ್ನವಾಗಿವೆ.

ಪ್ರತಿಯೊಂದು ಭಾಷೆಯಲ್ಲೂ ಈ ಮೂಲತತ್ವಗಳ ಬಳಕೆ ಸಾವಿರಾರು ವರ್ಷಗಳಷ್ಟು

ದೀರ್ಘವಾದ ಅವಧಿಯಲ್ಲಿ ನಡೆದಿರುತ್ತದೆ, ಮತ್ತು ಈ ಅವಧಿಯಲ್ಲಿ ಆ ಭಾಷೆಯನ್ನಾಡುವ ಜನರು ಬೇರೆ ಬೇರೆ ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಗಿದ್ದು, ಅವನ್ನು ಪರಿಹರಿಸುವುದಕ್ಕಾಗಿ ತಮ್ಮ ಭಾಷೆಯಲ್ಲಿ ಹಲವಾರು ರೀತಿಯ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾ ಇರಬೇಕಾಗುತ್ತದೆ.

ಇಂತಹ ಬದಲಾವಣೆಗಳಲ್ಲಿ ಕೆಲವು ಆ ಭಾಷೆಯ ಮೂಲತತ್ವಗಳ ಮೇಲೂ ಪರಿಣಾಮವನ್ನು ಬೀರಲು ಸಾಧ್ಯವಿದೆ. ಮೂಲಭಾಷೆಯಿಂದ ಬೆಳೆದು ಬರುವಂತಹ ಈ ಸಾವಿರಾರು ವರ್ಷಗಳ ಅವಧಿಯಲ್ಲಿ ನಡೆಯುವ ಬದಲಾವಣೆಗಳೇ ಒಂದೇ ಕುಟುಂಬಕ್ಕೆ ಸೇರಿದ ಭಾಷೆಗಳ ನಡುವೆ ಕಾಣಿಸುವ ವ್ಯತ್ಯಾಸಗಳಿಗೆ ಮೂಲ ಕಾರಣ.

ಉದಾಹರಣೆಗಾಗಿ, ಸಂಸ್ಕೃತ ಭಾಷೆಗೂ ಲ್ಯಾಟಿನ್, ಗ್ರೀಕ್, ಪರ್ಶಿಯನ್, ಇಂಗ್ಲಿಷ್ ಮೊದಲಾದ ಇತರ ಇಂಡೋ-ಯುರೋಪಿಯನ್ ಭಾಷೆಗಳಿಗೂ ನಡುವೆ ಕಾಣಿಸುವ ವ್ಯತ್ಯಾಸಗಳಿಗೆ ಅವು ತಮ್ಮ ಮೂಲಭಾಷೆಯಿಂದ ಆನುವಂಶಿಕವಾಗಿ ಪಡೆದಿರುವ ವ್ಯಾಕರಣದ ಮೂಲತತ್ವಗಳಲ್ಲಿ ಮತ್ತು ಇತರ ವ್ಯಾಕರಣ ನಿಯಮಗಳಲ್ಲಿ ಈ ರೀತಿ ಬದಲಾವಣೆಗಳನ್ನು ಮಾಡಿಕೊಂಡಿರುವುದೇ ಮುಖ್ಯ ಕಾರಣ.

ಇದೇ ರೀತಿಯಲ್ಲಿ ಕನ್ನಡ ಭಾಷೆಗೂ ತಮಿಳು, ಮಲಯಾಳ, ತೆಲುಗು, ತುಳು ಮೊದಲಾದ ಇತರ ದ್ರಾವಿಡ ಭಾಷೆಗಳಿಗೂ ನಡುವೆ ಕಾಣಿಸುವ ವ್ಯತ್ಯಾಸಗಳಿಗೆ ಅವು ತಮ್ಮ ಮೂಲ ಭಾಷೆಯಿಂದ ಆನುವಂಶಿಕವಾಗಿ ಪಡೆದ ವ್ಯಾಕರಣದ ಮೂಲತತ್ವಗಳಲ್ಲಿ ಮತ್ತು ವ್ಯಾಕರಣ ನಿಯಮಗಳಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿರುವುದೇ ಮುಖ್ಯ ಕಾರಣ.

ಎಲ್ಲಾ ಭಾಷೆಗಳೂ ತಮ್ಮ ಸಂಪರ್ಕಕ್ಕೆ ಬರುವ ಇತರ ಭಾಷೆಗಳಿಂದ ಪದಗಳನ್ನು ಎರವಲಾಗಿ ಪಡೆಯುತ್ತಿರುತ್ತವೆ. ಹೀಗೆ ಸಂಪರ್ಕಕ್ಕೆ ಬರುವ ಭಾಷೆಗಳು ಒಂದೇ ಭಾಷಾಕುಟುಂಬಕ್ಕೆ ಸೇರಿದವುಗಳಿರಬಹುದು, ಇಲ್ಲವೇ ಬೇರೆ ಬೇರೆ ಭಾಷಾಕುಟುಂಬಗಳಿಗೆ ಸೇರಿದವುಗಳಿರಬಹುದು. ಆದರೆ, ಈ ರೀತಿ ಎರವಲಾಗಿ ಬರುವ ಪದಗಳೆಲ್ಲ ಸಾಮಾನ್ಯವಾಗಿ ಅವನ್ನು ಪಡೆದಿರುವ ಭಾಷೆಯ ವ್ಯಾಕರಣ ನಿಯಮಗಳಿಗನುಸಾರವಾಗಿ ಬದಲಾಗದಿರುವುದಿಲ್ಲ.

ಹಳೆಗನ್ನಡದ ಕಾಲದಲ್ಲೇನೇ ಕನ್ನಡ ಭಾಷೆ ಸಂಸ್ಕೃತದಿಂದ ಸಾಕಷ್ಟು ಪದಗಳನ್ನು ಎರವಲಾಗಿ ಪಡೆದುಕೊಂಡಿದೆ. ಆದರೆ ಈ ಪದಗಳಲ್ಲಿ ಹೆಚ್ಚಿನವೂ ಕನ್ನಡ ವ್ಯಾಕರಣದ ಮೂಲತತ್ವಗಳಿಗೆ ಹೊಂದಿಕೆಯಾಗುವಂತೆ ಬದಲಾವಣೆಗಳಿಗೊಳಗಾಗಿ 'ತದ್ಭವ'ಗಳೆನಿಸಿವೆ (ಶ್ರೀ-ಸಿರಿ, ವರ್ಷ-ಬರಿಸ, ಅಕ್ಷರ-ಅಕ್ಕರ, ನಿತ್ಯ-ನಿಚ್ಚ ಇತ್ಯಾದಿ). ಇದಲ್ಲದೆ, ಹಾಗೆ ಬದಲಾಗದೆ ಉಳಿದಿರುವ ಸಂಸ್ಕೃತ ಪದಗಳೂ ಕನ್ನಡ ವಾಕ್ಯಗಳಲ್ಲಿ ಬಳಕೆಯಾಗಬೇಕಿದ್ದಲ್ಲಿ ಕನ್ನಡದವೇ ಆದ ವ್ಯಾಕರಣ ನಿಯಮಗಳಿಗೆ ಒಳಪಡಬೇಕಾಗುತ್ತದೆ.

ಉದಾಹರಣೆಗಾಗಿ, ಸಂಸ್ಕೃತದಿಂದ ಕನ್ನಡಕ್ಕೆ ಕ್ರಿಯಾಪದಗಳು ಎರವಲಾಗಿ ಬಂದಿವೆಯಾದರೆ, ಅವು ತತ್ಸಮಗಳಾಗಿರಲಿ ಇಲ್ಲವೇ ತದ್ಭವಗಳಾಗಿರಲಿ, ಅವನ್ನು ನೇರವಾಗಿ ಕನ್ನಡ ವಾಕ್ಯಗಳಲ್ಲಿ ಕ್ರಿಯಾಪದಗಳಾಗಿ ಬಳಸಲು ಸಾಧ್ಯವಾಗದು. ಅವಕ್ಕೆ ಇಸು ಪ್ರತ್ಯಯವನ್ನು ಸೇರಿಸುವುದರ ಮೂಲಕ ಅವನ್ನು ಕನ್ನಡದವನ್ನಾಗಿ ಮಾಡಿದ ಮೇಲೇನೇ ಕನ್ನಡ ವಾಕ್ಯಗಳಲ್ಲಿ ಅವನ್ನು ಕ್ರಿಯಾಪದಗಳಾಗಿ ಬಳಸಲು ಸಾಧ್ಯ (ನಟಿಸು-ನಟಿಸುತ್ತಾನೆ, ರಕ್ಷಿಸು-ರಕ್ಷಿಸಿದ, ಆಲೋಚಿಸು-ಆಲೋಚಿಸಿದ್ದೇನೆ ಇತ್ಯಾದಿ).

ಸಂಸ್ಕೃತದ ನಾಮಪದಗಳನ್ನು ಕನ್ನಡದಲ್ಲಿ ಹಾಗೆಯೇ ಬಳಸಬಲ್ಲೆವೇನೋ ನಿಜ; ಆದರೆ ಅವಕ್ಕೆ ಕನ್ನಡದವೇ ಆದ ವಚನ ಮತ್ತು ವಿಭಕ್ತಿ ಪ್ರತ್ಯಯಗಳನ್ನು ಸೇರಿಸಬೇಕಾಗುತ್ತದೆ

(ಸಂಸ್ಕೃತಿಯನ್ನು, ಸಂಸ್ಕೃತಿಯಿಂದ, ಸಂಸ್ಕೃತಿಗೆ, ಕೃತಿಗಳು ಇತ್ಯಾದಿ). ಓೀಗೆ, ಸಂಸ್ಕೃತದಿಂದ ಬಂದ ಈ ಎಲ್ಲಾ ಎರವಲುಗಳ ನಡುವೆಯೂ ಕನ್ನಡ ಭಾಷೆ ವ್ಯಾಕರಣದ ಮಟ್ಟಿಗೆ ತನ್ನ ಸ್ವಂತಿಕೆಯನ್ನು ಉಳಿಸಿಕೊಂಡಿದೆ.

ಹಿಂದಿನ ಕಾಲದಲ್ಲಿ ಪ್ರಾಕೃತ, ಪಾಲಿ, ಅಪಭ್ರಂಶ ಮೊದಲಾದವುಗಳ ಹಾಗೆ ಕನ್ನಡವೂ ಸಂಸ್ಕೃತದ ಒಂದು 'ವಿಕೃತ' ರೂಪವೆಂಬ ಅಭಿಪ್ರಾಯ ವಿದ್ವಾಂಸರಲ್ಲಿತ್ತು. ಆದರೆ, ಈ ಅಭಿಪ್ರಾಯ ತಪ್ಪು, ಕನ್ನಡ ಸಂಸ್ಕೃತಕ್ಕಿಂತ ತೀರ ಭಿನ್ನವಾಗಿರುವ ದ್ರಾವಿಡ ಮೂಲದಿಂದ ಬೆಳೆದು ಬಂದಿರುವ ಭಾಷೆ ಎಂಬುದನ್ನು ಹತ್ತೊಂಬತ್ತನೇ ಶತಮಾನದಲ್ಲಿ ಕಾಲ್ಡ್‌ವೆಲ್ (ಕಾಲ್ಡ್‌ವೆಲ್ ೧೮೫೬) ತೋರಿಸಿಕೊಟ್ಟಿದ್ದರು.

ಅನಂತರ ನಡೆದ ಭಾಷಾಭ್ಯಾಸಗಳು, ಅದರಲ್ಲೂ ಎಮೆನೋ ಮತ್ತು ಬರೋ ರಚಿಸಿದ ದ್ರಾವಿಡ ಜ್ಞಾತಿಪದಕೋಶ (ಎಮೆನೋ ಮತ್ತು ಬರೋ ೧೯೬೧), ಮತ್ತು ಕೃಷ್ಣಮೂರ್ತಿ ಇತ್ತೀಚೆಗೆ ಪ್ರಕಟಿಸಿದ ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನ (ಕೃಷ್ಣಮೂರ್ತಿ ೨೦೦೩) ಈ ವಿಷಯವನ್ನು ಇನ್ನಷ್ಟು ಸ್ಪಷ್ಟವಾಗಿಸಿವೆ.

ಹಳೆಗನ್ನಡದಲ್ಲಿ ಗ್ರಂಥಗಳನ್ನು ರಚಿಸಿರುವವರೆಲ್ಲ ಸಂಸ್ಕೃತದಿಂದ ಧಾರಾಳವಾಗಿ ಪದಗಳನ್ನು ಎರವಲು ಪಡೆದುಕೊಂಡಿದ್ದಾರೆ. ಇವುಗಳಲ್ಲಿ ಕೆಲವು ಸಂಸ್ಕೃತದಲ್ಲಿರುವಂತೆಯೇ ಇವೆಯಾದರೆ, ಇನ್ನು ಕೆಲವು ಹಲವು ರೀತಿಯ ಬದಲಾವಣೆಗಳ ಮೂಲಕ ಕನ್ನಡತನವನ್ನು ಪಡೆದಿವೆ. ಕನ್ನಡ ಭಾಷೆ ಸಂಸ್ಕೃತದ ವಿಕೃತ ರೂಪವೆಂಬ ಅಭಿಪ್ರಾಯ ಮೂಡಿಬರಲು ಹಳೆಗನ್ನಡ ಗ್ರಂಥಗಳಲ್ಲಿ ಇಂತಹ ಎರವಲಾಗಿ ಬಂದ ಸಂಸ್ಕೃತ ಪದಗಳು ಜಾಸ್ತಿಯಿರುವುದೂ ಒಂದು ಕಾರಣವಿರಬಹುದು.

ಆದರೆ, ಹಳೆಗನ್ನಡದ ಈ ಗ್ರಂಥಗಳಲ್ಲಿ ಕನ್ನಡದವೇ ಆದ (ಎಂದರೆ ದ್ರಾವಿಡ ಮೂಲದಿಂದ ಬಂದ) ಪದಗಳೂ ಸಾಕಷ್ಟು ಕಾಣಿಸಿಕೊಳ್ಳುತ್ತವೆ. ಇದಲ್ಲದೆ, ಮೇಲೆ ಸೂಚಿಸಿದ ಹಾಗೆ, ಸಂಸ್ಕೃತದಿಂದ ಎರವಲಾಗಿ ಬಂದ ಪದಗಳನ್ನು ಕನ್ನಡ ವಾಕ್ಯಗಳಲ್ಲಿ ಬಳಸಬೇಕಿದ್ದಾಗ ಅವಕ್ಕೆ ಕನ್ನಡದವೇ ಆದ ಪದರೂಪಗಳನ್ನು ಸಾಧಿಸಿಕೊಡಬೇಕಾಗುತ್ತದೆ. ಈ ಪದರೂಪಗಳನ್ನು ಬಳಸಿ ವಾಕ್ಯಗಳನ್ನು ತಯಾರಿಸಬೇಕಾದಾಗಲೂ, ಅದಕ್ಕಾಗಿ ಕನ್ನಡದ ವಾಕ್ಯರಚನೆಯ ನಿಯಮಗಳನ್ನು ಬಳಸಬೇಕಾಗುತ್ತದಲ್ಲದೆ ಸಂಸ್ಕೃತದ ವಾಕ್ಯರಚನೆಯ ನಿಯಮಗಳನ್ನು ಬಳಸಲು ಸಾಧ್ಯವಾಗುವುದಿಲ್ಲ.

ಈ ಎಲ್ಲಾ ಕಾರಣಗಳಿಂದಾಗಿ, ಹಳೆಗನ್ನಡದ ವ್ಯಾಕರಣವನ್ನು ಬರೆಯುವವರು ಮೊದಲಿಗೆ ಕನ್ನಡದವೇ ಆದ ಪದಗಳ, ಪದರೂಪಗಳ ಮತ್ತು ವಾಕ್ಯಗಳ ರಚನೆಯೆಂತಹದು, ಮತ್ತು ಅದಕ್ಕಾಗಿ ಎಂತಹ ನಿಯಮಗಳನ್ನು ಬಳಸಬೇಕಾಗುತ್ತದೆ ಎಂಬುದನ್ನು ವಿವರಿಸುವುದೊಳ್ಳೆಯದು. ಇವು ಎಲ್ಲಾ ರೀತಿಯ ಹಳೆಗನ್ನಡ ಬರಹಗಳಿಗೂ ಸಮಾನವಾಗಿ ಅನ್ವಯಿಸುವ ನಿಯಮಗಳಾಗಿರುತ್ತವೆ.

ಸಂಸ್ಕೃತದಿಂದ ಎರವಲಾಗಿ ಬಂದಿರುವ ಪದಗಳು ಈ ಸನ್ನಿವೇಶದಲ್ಲಿ ಹೇಗೆ ಹೊಂದಿಕೊಳ್ಳುತ್ತವೆ ಎಂಬುದನ್ನು ಅನಂತರ ವಿವರಿಸಿ ಹೇಳಬಹುದು. ಇಂತಹ ಪದಗಳು ಕೆಲವು ಬರಹಗಳಲ್ಲಿ ಜಾಸ್ತಿಯಿರಬಹುದು, ಮತ್ತು ಬೇರೆ ಕೆಲವು ಬರಹಗಳಲ್ಲಿ ಕಡಿಮೆಯಿರಬಹುದು. ಉದಾಹರಣೆಗಾಗಿ, ಆಂಡಯ್ಯನ ಬರಹಗಳಲ್ಲಿ ಕನ್ನಡಕ್ಕೆ ಅಳವಡಿಸದಿರುವ ಸಂಸ್ಕೃತ ಪದಗಳನ್ನು (ಎಂದರೆ ತತ್ಸಮ ಪದಗಳನ್ನು) ಆದಷ್ಟು ಕಡಿಮೆ ಬಳಸಲಾಗಿದೆ. ಕನ್ನಡದವೇ ಆದ ಪದಗಳಿಗೆ ಅನ್ವಯಿಸುವ ವ್ಯಾಕರಣ ನಿಯಮಗಳು ಈ ರೀತಿ ಎರವಲಾಗಿ ಬಂದಿರುವ ಪದಗಳಿಗೆ ಹೇಗೆ ಅನ್ವಯಿಸುತ್ತವೆ ಎಂಬುದನ್ನು ಪ್ರತ್ಯೇಕವಾಗಿ ತಿಳಿದುಕೊಳ್ಳುವ ಅವಶ್ಯಕತೆಯಿದೆ.

## ೧.೪ ಸಿದ್ಧವಾಗಿರುವ ವ್ಯಾಕರಣಗಳು

ಹಳೆಗನ್ನಡದ ಮೇಲೆ ಹಿಂದಿನ ಕಾಲದವರು ರಚಿಸಿದ ವ್ಯಾಕರಣಗಳಲ್ಲಿ ನಮಗೆ ದೊರೆತಿರುವವುಗಳು ಮುಖ್ಯವಾಗಿ ಮೂರು. ೧೧ನೇ ಶತಮಾನದಲ್ಲಿ ಸಂಸ್ಕೃತ ಭಾಷೆಯಲ್ಲಿ ರಚಿತವಾಗಿರುವ ನಾಗವರ್ಮನ ಕರ್ಣಾಟಕ ಭಾಷಾಭೂಷಣ, ೧೩ನೇ ಶತಮಾನದಲ್ಲಿ ಕನ್ನಡದಲ್ಲೇನೇ ರಚಿತವಾಗಿರುವ ಕೇಶಿರಾಜನ ಶಬ್ದಮಣಿದರ್ಪಣ, ಮತ್ತು ೧೭ನೇ ಶತಮಾನದ ಆದಿಯಲ್ಲಿ ಸಂಸ್ಕೃತದಲ್ಲಿ ರಚಿತವಾಗಿರುವ ಭಟ್ಟಾಕಳಂಕನ ಶಬ್ದಾನುಶಾಸನ. ನಾಗವರ್ಮನೇ ಬರೆದಿರುವ ಕಾವ್ಯಾವಲೋಕನವೆಂಬ ಇನ್ನೊಂದು ಗ್ರಂಥದಲ್ಲೂ ಶಬ್ದಸ್ಮೃತಿ ಎಂಬ ಭಾಗದಲ್ಲಿ ಹಳೆಗನ್ನಡ ವ್ಯಾಕರಣವನ್ನು ಚುಟುಕಾಗಿ ವಿವರಿಸಲಾಗಿದೆ (ಹೆಚ್ಚಿನ ವಿವರಗಳಿಗೆ ಸೀತಾರಾಮಯ್ಯ ೧೯೭೯ ನೋಡಿ).

ಈ ಮೂರು ವ್ಯಾಕರಣಗಳಲ್ಲಿ ಅತ್ಯಂತ ಜನಪ್ರಿಯವಾಗಿರುವ ವ್ಯಾಕರಣವೆಂದರೆ, ಹಳೆಗನ್ನಡದಲ್ಲಿ ರಚಿತವಾಗಿರುವ ಕೇಶಿರಾಜನ ಶಬ್ದಮಣಿದರ್ಪಣ. ಇದರಲ್ಲಿ ವ್ಯಾಕರಣ ನಿಯಮಗಳನ್ನು ಚುಟುಕಾಗಿ ಕಂದಪದ್ಯಗಳ ಮೂಲಕವೂ, ಮತ್ತು ಹೆಚ್ಚು ಸ್ಪಷ್ಟವಾಗಿ ಈ ಪದ್ಯಗಳ ಅನಂತರ ವೃತ್ತಿರೂಪದಲ್ಲಿ ಬರುವ ಗದ್ಯಗಳ ಮೂಲಕವೂ ತಿಳಿಸಲಾಗಿದೆ. ಅವು ತಿಳಿಸುವ ವ್ಯಾಕರಣ ನಿಯಮಗಳಿಗೆ ಉದಾಹರಣೆಗಳನ್ನು ಇತರ ಕವಿಗಳ ಪ್ರಯೋಗಗಳನ್ನು ಎತ್ತಿಹೇಳುವುದರ ಮೂಲಕ ಅಲ್ಲಲ್ಲೇ ಕೊಡಲಾಗಿದೆ.

ಪ್ರಾಚೀನವೆಂದು ಹೇಳಬಹುದಾದ ಈ ಮೂರು ವ್ಯಾಕರಣಗಳಲ್ಲೂ ಸಂಸ್ಕೃತ ವ್ಯಾಕರಣವನ್ನು ಮಾದರಿಯಾಗಿರಿಸಿಕೊಂಡು ಹಳೆಗನ್ನಡದ ವ್ಯಾಕರಣವನ್ನು ವಿವರಿಸಿ ಹೇಳುವ ಪ್ರಯತ್ನ ನಡೆಸಲಾಗಿದೆ. ಆದರೆ, ಮೇಲೆ ವಿವರಿಸಿದ ಹಾಗೆ, ಸಂಸ್ಕೃತ ಮತ್ತು ಕನ್ನಡ ಭಾಷೆಗಳ ನಡುವೆ ವ್ಯಾಕರಣದ ಮೂಲತತ್ವಗಳಲ್ಲೇನೇ ಹಲವು ಮುಖ್ಯವಾದ ವ್ಯತ್ಯಾಸಗಳಿವೆಯಾದ ಕಾರಣ, ಕನ್ನಡ ವ್ಯಾಕರಣವನ್ನು ತಯಾರಿಸುವ ಕೆಲಸಕ್ಕೆ ಸಂಸ್ಕೃತ ವ್ಯಾಕರಣ ಅಷ್ಟೊಂದು ಉತ್ತಮವಾದ ಮಾದರಿಯಲ್ಲ.

ಈ ಮೂರು ಪ್ರಾಚೀನ ವ್ಯಾಕರಣಗಳ ಅನಂತರ, ಹಳೆಗನ್ನಡದ ಮೇಲೆ ರಚಿತವಾಗಿರುವ ಒಂದು ಒಳ್ಳೆಯ ವ್ಯಾಕರಣವೆಂದರೆ ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಪ್ರಕಟಗೊಂಡಿರುವ ಕಿಟ್ಟೆಲ್ ಅವರ ಕನ್ನಡ ವ್ಯಾಕರಣ (ಕಿಟ್ಟೆಲ್ ೧೯೦೩). ಇದು ಇಂಗ್ಲಿಷ್ ಭಾಷೆಯಲ್ಲಿದ್ದು, ಹಳೆಗನ್ನಡದ ವ್ಯಾಕರಣವೆಂತಹದು ಎಂಬುದನ್ನು ತಿಳಿಸುವುದು ಮಾತ್ರವಲ್ಲದೆ, ಅದಕ್ಕೂ ಮತ್ತು ನಡುಗನ್ನಡ–ಹೊಸಗನ್ನಡಗಳಿಗೂ ನಡುವೆ ಎಂತಹ ವ್ಯತ್ಯಾಸಗಳೆಲ್ಲ ಇವೆ ಎಂಬುದನ್ನೂ ತಿಳಿಸುತ್ತದೆ.

ಆದರೆ, ಇದನ್ನು ಬರೆಯುವಲ್ಲಿ ಕೇಶಿರಾಜನ ಶಬ್ದಮಣಿದರ್ಪಣವನ್ನು ಆಧಾರವಾಗಿರಿಸಿಕೊಳ್ಳಲಾಗಿದೆ. ಹಾಗಾಗಿ, ಆ ವ್ಯಾಕರಣದ ಹಲವು ಕೊರತೆಗಳು ಇದರಲ್ಲೂ ಸೇರಿಕೊಂಡಿವೆ.

ಕನ್ನಡ ವ್ಯಾಕರಣವನ್ನು ಯುರೋಪಿನ ವ್ಯಾಕರಣಗಳಿಗೆ ಹೊಂದಿಸಿ ಹೇಳುವ ಪ್ರಯತ್ನವನ್ನೂ ಕಿಟ್ಟೆಲರು ಈ ವ್ಯಾಕರಣದಲ್ಲಿ ನಡೆಸಿದ್ದಾರೆ. ಆದರೆ, ಸಂಸ್ಕೃತ ವ್ಯಾಕರಣದ ಹಾಗೆ ಯುರೋಪಿನ ವ್ಯಾಕರಣಗಳೂ ಗ್ರೀಕ್, ಲ್ಯಾಟಿನ್ ಮೊದಲಾದ ಇಂಡೋ–ಯುರೋಪಿಯನ್ ಭಾಷಾಕುಟುಂಬಕ್ಕೆ ಸೇರಿದ ಭಾಷೆಗಳ ನಿಯಮಾವಳಿಗಳನ್ನು ವರ್ಣಿಸುತ್ತಿವೆಯಾದ ಕಾರಣ, ಮತ್ತು ಅವೆರಡರೊಳಗೆ ಮೂಲಭೂತ ವ್ಯತ್ಯಾಸಗಳೇನೂ ಇಲ್ಲ; ಹಾಗಾಗಿ, ಹಳೆಗನ್ನಡದ ವ್ಯಾಕರಣ ತತ್ವಗಳನ್ನು ಹೊರಗೆಡಹುವಲ್ಲಿ ಹಲವೆಡೆ ಈ ವ್ಯಾಕರಣವೂ ಸೋತುಹೋಗಿದೆ.

ಇತ್ತೀಚೆಗೆ ಹಳೆಗನ್ನಡವನ್ನು ಆಧುನಿಕ ಭಾಷಾಶಾಸ್ತ್ರದ ದೃಷ್ಟಿಕೋನದಿಂದ ಪರಿಶೀಲಿಸುವ ಕೆಲವು ಪ್ರಯತ್ನಗಳೂ ನಡೆದಿವೆ. ಉದಾಹರಣೆಗಾಗಿ, ರಾಮಚಂದ್ರ ರಾವ್ ಅವರ ಪಂಪಭಾರತ

ವ್ಯಾಕರಣ (ರಾಮಚಂದ್ರ ರಾವ್ ೧೯೭೨) ಇಂತಹ ಒಂದು ಪ್ರಯತ್ನ. ಆದರೆ ಇಲ್ಲೂ ಹಳೆಗನ್ನಡವನ್ನು ಅದರದೇ ಆದ ಒಳರಚನೆಯ ದೃಷ್ಟಿಕೋನದಿಂದ ಪರಿಶೀಲಿಸುವ ಪ್ರಯತ್ನ ನಡೆದಿಲ್ಲ.

ಇದಕ್ಕೆ ಕಾರಣವೇನೆಂದರೆ, ಆಧುನಿಕ ಭಾಷಾಶಾಸ್ತ್ರವೂ ಇಂಗ್ಲಿಷ್, ಫ್ರೆಂಚ್, ಜರ್ಮನ್, ರಷ್ಯನ್ ಮೊದಲಾದ ಇಂಡೋ-ಯುರೋಪಿಯನ್ ಭಾಷೆಗಳ ಪರಿಶೀಲನೆಯ ಆಧಾರದ ಮೇಲೆ ಬೆಳೆದುಬಂದಿದೆ. ಅದರ ಮೂಲತತ್ವಗಳೆಲ್ಲ ಹೆಚ್ಚುಕಡಿಮೆ ಇಂಡೋ-ಯುರೋಪಿಯನ್ ಭಾಷೆಗಳ ಮೂಲತತ್ವಗಳೇ. ಹಾಗಾಗಿ, ಈ ಭಾಷೆಗಳಿಂದ ತೀರ ಭಿನ್ನವಾಗಿರುವ ಭಾಷೆಗಳಿಗೆ ಅವನ್ನು ನೇರವಾಗಿ ಅನ್ವಯಿಸಲು ಸಾಧ್ಯವಾಗುವುದಿಲ್ಲ.

ಇಂಡೋ-ಯುರೋಪಿಯನ್ ಭಾಷೆಗಳಿಂದ ತೀರ ಭಿನ್ನವಾಗಿರುವ ಭಾಷೆಗಳಿಗೆ ವ್ಯಾಕರಣವನ್ನು ಸಿದ್ಧಪಡಿಸಲು ಪ್ರಯತ್ನಿಸುವವರೆಲ್ಲರೂ ಈ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಅವರಿಗೆ ಮಾದರಿಯಾಗಿ ಸಿಗುವ ವ್ಯಾಕರಣ ಇಂಡೋ-ಯುರೋಪಿಯನ್ ಭಾಷಾಕುಟುಂಬಕ್ಕೆ ಸೇರಿರುವ ಸಂಸ್ಕೃತ, ಲ್ಯಾಟಿನ್, ಇಂಗ್ಲಿಷ್ ಮೊದಲಾದವುಗಳಂತಹ ಯಾವುದಾದರೊಂದು ಜನಪ್ರಿಯ ಭಾಷೆಯ ವ್ಯಾಕರಣ; ಇಲ್ಲವೇ, ಅಂತಹ ವ್ಯಾಕರಣದ ಮೂಲತತ್ವಗಳನ್ನು ಹಾಗೆಯೇ ಬಳಸಿ ತಯಾರಿಸಿದ ಬೇರೊಂದು ಭಾಷೆಯ ವ್ಯಾಕರಣ. ತಾವು ವರ್ಣಿಸುವ ಭಾಷೆ ಇವಕ್ಕಿಂತ ತೀರ ಭಿನ್ನವಾದ ಮೂಲತತ್ವಗಳನ್ನು ಬಳಸಿಕೊಳ್ಳುತ್ತಿದೆ ಎಂಬುದನ್ನು ಕಂಡುಹಿಡಿಯುವುದೇ ಇವರಿಗೆ ಒಂದು ದೊಡ್ಡ ಸಮಸ್ಯೆಯಾಗಿರುತ್ತದೆ.

ಹೆಚ್ಚಿನವರಿಗೂ ಈ ಸಮಸ್ಯೆಯನ್ನು ತೃಪ್ತಿಕರವಾಗಿ ಬಗೆಹರಿಸಲು ಸಾಧ್ಯವಾಗುವುದಿಲ್ಲ. ಹಾಗಾಗಿ, ಹೆಚ್ಚಿನವರೂ ತಾವು ವರ್ಣಿಸುತ್ತಿರುವ ಭಾಷೆಗೆ ಜನಪ್ರಿಯ ವ್ಯಾಕರಣವೊಂದರ ಪಡಿಯಚ್ಚನ್ನು ಮಾತ್ರವೇ ತಯಾರಿಸಿ ಕೊಡಲು ಶಕ್ತರಾಗುತ್ತಾರೆ. ಕೆಲವೇ ಕೆಲವು ವಿದ್ವಾಂಸರು ಮಾತ್ರ, ತಾವು ವಿವರಿಸುವ ಭಾಷೆಯ ವ್ಯಾಕರಣ ಮೂಲತತ್ವಗಳಲ್ಲೇನೇ ಜನಪ್ರಿಯ ವ್ಯಾಕರಣಗಳಿಗಿಂತ ಭಿನ್ನವಾಗಿದೆಯೆಂಬುದನ್ನು ಗಮನಿಸಿ, ಅದನ್ನು ಭಿನ್ನವಾಗಿ ವಿವರಿಸಿ ಹೇಳಲು ಶಕ್ತರಾಗಿರುತ್ತಾರೆ.

ಹಳೆಗನ್ನಡದ ಮೇಲೆ ಸಿದ್ಧವಾಗಿರುವ ವ್ಯಾಕರಣಗಳೆಲ್ಲ ಈ ಮೇಲಿನ ಕಾರಣಕ್ಕಾಗಿ ಅಸಮರ್ಪಕವಾಗಿವೆ. ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ ಮೊದಲಾದ ಹಿಂದಿನ ಕಾಲದ ವಿದ್ವಾಂಸರು ಬರೆದ ವ್ಯಾಕರಣಗಳೆಲ್ಲ ಆ ಸಮಯದಲ್ಲಿ ಜನಪ್ರಿಯವಾಗಿದ್ದ ಸಂಸ್ಕೃತ ಭಾಷೆಯ ವ್ಯಾಕರಣಗಳ ಪಡಿಯಚ್ಚುಗಳಾಗಿವೆ.

ಇವುಗಳಲ್ಲಿ ಕೇಶಿರಾಜನ ವ್ಯಾಕರಣ ಮಾತ್ರ ಕೆಲವು ವಿಷಯಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವಿರುವ ವ್ಯತ್ಯಾಸಗಳನ್ನು ಗಮನಿಸಿರುವುದು ಕಂಡುಬರುತ್ತದೆ. ಆದರೆ ಆತನು ಗಮನಿಸಿರುವುದು ಮೇಲಿನಿಂದ ಮೇಲೆ ನೋಡುವಾಗ ಹಳೆಗನ್ನಡ ಮತ್ತು ಸಂಸ್ಕೃತಗಳ ನಡುವೆ ಕಾಣಿಸುವ ವ್ಯತ್ಯಾಸಗಳು ಮಾತ್ರ. ಈ ಎರಡು ಭಾಷೆಗಳ ನಡುವೆ ವ್ಯಾಕರಣದ ಮೂಲತತ್ವಗಳಲ್ಲೇನೇ ಹಲವು ವ್ಯತ್ಯಾಸಗಳಿದ್ದು, ಇವನ್ನು ಗಮನಿಸುವಲ್ಲಿ ಈ ವ್ಯಾಕರಣವೂ ಸೋತುಹೋಗಿದೆ.

## ೧.೫ ಪುಸ್ತಕದ ಸ್ವರೂಪ

ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು, ಅದು ಬಳಸುವ ವ್ಯಾಕರಣದ ಮೂಲತತ್ವಗಳು ಎಂತಹವು, ಇದುವರೆಗೆ ಸಿದ್ಧವಾಗಿರುವ, ಮತ್ತು ಈಗ ಜನಪ್ರಿಯವಾಗಿರುವ ವ್ಯಾಕರಣ ಗ್ರಂಥಗಳು ಈ ಮೂಲತತ್ವಗಳನ್ನು ಕಂಡುಹಿಡಿಯುವಲ್ಲಿ ಹೇಗೆ ಅಸಮರ್ಥವಾಗಿವೆ, ಮತ್ತು ಇದರಿಂದಾಗಿ

ಅವುಗಳಲ್ಲಿ ಬರುವ ವ್ಯಾಕರಣ ನಿಯಮಗಳು ಹೇಗೆ ಹಳೆಗನ್ನಡದ ಪದರಚನೆ ಮತ್ತು ವಾಕ್ಯರಚನೆಗಳನ್ನು ವಿವರಿಸುವಲ್ಲಿ ಸೋತುಹೋಗಿವೆ ಎಂಬುದನ್ನು ತೋರಿಸಿಕೊಡುವುದೇ ಈ ಪುಸ್ತಕದ ಮುಖ್ಯ ಉದ್ದೇಶ.

ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳಿಗೆಲ್ಲ ಸಂಸ್ಕೃತ ವ್ಯಾಕರಣವೇ ಮಾದರಿಯಾಗಿತ್ತು. ಸಂಸ್ಕೃತಕ್ಕೆ ಪಾಣಿನಿ ರಚಿಸಿದ ಅತ್ಯುತ್ತಮ ವ್ಯಾಕರಣವಿದ್ದುದು ಇದಕ್ಕೆ ಒಂದು ಕಾರಣ; ಆಗಿನ ಕಾಲದಲ್ಲಿ ಭಾರತದ ಎಲ್ಲಾ ವಿದ್ವಾಂಸರಿಗೂ ಸಂಸ್ಕೃತವೇ ಶಾಸ್ತ್ರಾಭ್ಯಾಸಕ್ಕೆ ಮಾಧ್ಯಮವಾಗಿದ್ದುದು ಇನ್ನೊಂದು ಕಾರಣ; ಹಳೆಗನ್ನಡಕ್ಕೆ ವ್ಯಾಕರಣವನ್ನು ರಚಿಸಲು ಹೊರಡುವ ಮೊದಲು ಇವರೆಲ್ಲರೂ ಸಂಸ್ಕೃತ ವ್ಯಾಕರಣದಲ್ಲಿ ಸಂಪೂರ್ಣವಾದ ಪರಿಣತಿಯನ್ನು ಪಡೆಯುವುದು ಅತ್ಯವಶ್ಯವಾಗಿತ್ತು ಎಂಬುದು ಮತ್ತೊಂದು ಕಾರಣ. ಈ ಎಲ್ಲಾ ಕಾರಣಗಳಿಂದಾಗಿ, ಅವರು ರಚಿಸಿದ ಹಳೆಗನ್ನಡ ವ್ಯಾಕರಣಗಳೆಲ್ಲ ಸಂಸ್ಕೃತ ವ್ಯಾಕರಣದ ಪಡಿಯಚ್ಚುಗಳಾಗಿಬಿಟ್ಟಿವೆ.

ಸಂಸ್ಕೃತ ವ್ಯಾಕರಣಕ್ಕೆ ಹಲವು ಶತಮಾನಗಳಷ್ಟು ದೀರ್ಘವಾದ ಚರಿತ್ರೆಯಿದೆ. ವೇದಗಳನ್ನು ಬದಲಾಗದಂತೆ ಉಳಿಸುವುದಕ್ಕಾಗಿ ಅವುಗಳಲ್ಲಿ ಬಳಕೆಯಾಗುವ ವರ್ಣಗಳ ಮತ್ತು ಪದಗಳ ವ್ಯಾಸಂಗದಿಂದ ಪ್ರಾರಂಭವಾದ ಈ ಶಾಸ್ತ್ರ ಸಂಪೂರ್ಣವಾಗಿ ಸಂಸ್ಕೃತ ಭಾಷೆಯ ಪರಿಶೀಲನೆಯ ಮೇಲೆಯೇ ಬೆಳೆದು ಬಂದಿದೆ. ಹಾಗಾಗಿ, ಅದರ ಮೂಲತತ್ವಗಳು, ಪಾರಿಭಾಷಿಕ ಪದಗಳು, ವ್ಯಾಕರಣ ಸಂಪ್ರದಾಯಗಳು, ವ್ಯಾಕರಣಾಂಶಗಳನ್ನು ಪ್ರಕರಣಗಳಾಗಿ ವಿಭಜಿಸಿ ಹೇಳುವ ಕ್ರಮ, ಇವೆಲ್ಲವೂ ಸಂಸ್ಕೃತ ಭಾಷೆಯ ವ್ಯಾಕರಣವನ್ನು ವಿವರಿಸಿ ಹೇಳಲು ಅನುಕೂಲವಾಗಿವೆ.

ಆದರೆ, ಹಳೆಗನ್ನಡದ ವ್ಯಾಕರಣಕ್ಕೆ ಇಂತಹ ದೀರ್ಘವಾದ ಚರಿತ್ರೆ ಇಲ್ಲವೇ ವಿಕಾಸ ಇರುವ ಹಾಗೆ ಕಾಣಿಸುವುದಿಲ್ಲ. ಅದು ನೇರವಾಗಿ ಸಂಸ್ಕೃತ ವ್ಯಾಕರಣವನ್ನು ಕನ್ನಡಕ್ಕೆ ಅಳವಡಿಸುವಂತಹ ಕೆಲವು ಪ್ರಯತ್ನಗಳ ಫಲ ಮಾತ್ರ. ಅದರ ಪಾರಿಭಾಷಿಕ ಪದಗಳೆಲ್ಲ ನೂರಕ್ಕೆ ನೂರೂ ಸಂಸ್ಕೃತದವೇ. ಅವು ಹಳೆಗನ್ನಡದವೇ ಆದ ವ್ಯಾಕರಣ ನಿಯಮಗಳನ್ನು ವಿವರಿಸಿ ಹೇಳುವುದಕ್ಕಾಗಿ ವಿಕಸಿತವಾದುವೇನಲ್ಲ. ಈ ವ್ಯಾಕರಣಗಳಲ್ಲಿ ಕಂಡುಬರುವ ವ್ಯಾಕರಣ ಸಂಪ್ರದಾಯವೂ ಸಂಸ್ಕೃತ (ಇಲ್ಲವೇ ಅದರಿಂದ ಬೆಳೆದು ಬಂದಿರುವ ಪ್ರಾಕೃತ) ವ್ಯಾಕರಣದ ಸಂಪ್ರದಾಯವೇ.

ಈ ವ್ಯಾಕರಣಗಳು ವ್ಯಾಕರಣಾಂಶಗಳನ್ನು ಬೇರೆ ಬೇರೆ ಪರಿಚ್ಛೇದಗಳಲ್ಲಿ ವಿಂಗಡಿಸುವುದರಲ್ಲೂ ಸಂಸ್ಕೃತ ವ್ಯಾಕರಣಗಳನ್ನೇ ಅನುಸರಿಸಿವೆ. ಈ ಪರಿಚ್ಛೇದಗಳಲ್ಲಿ ಯಾವ ವಿಷಯಗಳನ್ನು ವಿವರಿಸಬೇಕು, ಮತ್ತು ಹೇಗೆ ವಿವರಿಸಬೇಕು ಎಂಬುದಕ್ಕೂ ಅವಕ್ಕೆ ಸಂಸ್ಕೃತ (ಮತ್ತು ಪ್ರಾಕೃತ) ವ್ಯಾಕರಣಗಳೇ ಮಾದರಿಯಾಗಿವೆ.

ಈ ರೀತಿ, ಸಂಸ್ಕೃತ ಮತ್ತು ಪ್ರಾಕೃತ ವ್ಯಾಕರಣಗಳನ್ನು ಮಾದರಿಯಾಗಿರಿಸಿಕೊಂಡು ಹಳೆಗನ್ನಡ ವ್ಯಾಕರಣವನ್ನು ರಚಿಸಲು ಪ್ರಯತ್ನಿಸಿದುದರಿಂದಾಗಿ, ಹಳೆಗನ್ನಡದ ವೈಯಾಕರಣಿಗಳಿಗೆ ಆ ಭಾಷೆಯ ನಿಜವಾದ ವ್ಯಾಕರಣವೆಂತಹದು ಎಂಬುದನ್ನು ತಿಳಿಸಿಹೇಳಲು ಸಾಧ್ಯವಾಗಿಲ್ಲ. ಅದರಲ್ಲೂ ಸಂಸ್ಕೃತ ವ್ಯಾಕರಣದ ಸೂತ್ರರೂಪವನ್ನು ಹಾಗೆಯೇ ಉಳಿಸಿಕೊಂಡಿರುವ ಮತ್ತು ಸಂಸ್ಕೃತ ಭಾಷೆಯಲ್ಲೇನೇ ತಮ್ಮ ವ್ಯಾಕರಣಗಳನ್ನು ರಚಿಸಿರುವ ನಾಗವರ್ಮ ಮತ್ತು ಭಟ್ಟಾಕಳಂಕರ ಮೇಲೆ ಸಂಸ್ಕೃತ ವ್ಯಾಕರಣದ ಪ್ರಭಾವ ಇನ್ನಷ್ಟು ಗಾಢವಾಗಿರುವ ಹಾಗೆ ಕಾಣಿಸುತ್ತದೆ.

ಹಳೆಗನ್ನಡ ವ್ಯಾಕರಣವನ್ನು ಹಳೆಗನ್ನಡದಲ್ಲೇನೇ ಬರೆಯಲು ಪ್ರಯತ್ನಿಸಿದ ಕೇಶಿರಾಜನ ಶಬ್ದಮಣಿದರ್ಪಣ ಇದಕ್ಕೆ ಸ್ವಲ್ಪ ಮಟ್ಟಿಗೆ ಅಪವಾದವೆಂದು ಹೇಳಬಹುದು. ಮೇಲೆ ಸೂಚಿಸಿದ

ಹಾಗೆ, ಇದರಲ್ಲಿ ಹಲವು ಹಳೆಗನ್ನಡದವೇ ಆದ ವಿಷಯಗಳನ್ನೂ ಪ್ರಸ್ತಾಪಿಸಲಾಗಿದೆ. ಆದರೆ, ಇಲ್ಲೂ ಮೇಲ್ನೋಟಕ್ಕೆ ಕಾಣುವ ವ್ಯತ್ಯಾಸಗಳನ್ನು ಪ್ರಸ್ತಾಪಿಸಲಾಗಿದೆಯಲ್ಲದೆ, ಅವನ್ನು ವಿವರಿಸುವಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ವ್ಯಾಕರಣದ ಮೂಲತತ್ವಗಳಲ್ಲೇನೇ ಇರುವಂತಹ ವ್ಯತ್ಯಾಸಗಳನ್ನು ಬಳಸಿಕೊಳ್ಳಲು ಸಾಧ್ಯವಾಗಿಲ್ಲ.

ಈ ರೀತಿ, ಹಳೆಗನ್ನಡ ವ್ಯಾಕರಣಗಳು ಹಳೆಗನ್ನಡದವೇ ಆದ ವ್ಯಾಕರಣದ ಮೂಲತತ್ವಗಳನ್ನು ಗಮನಿಸುವಲ್ಲಿ, ಮತ್ತು ಅವನ್ನು ಸರಿಯಾಗಿ ಬಳಸಿಕೊಳ್ಳುವಲ್ಲಿ ಸೋತುಹೋಗಿವೆ ಎಂಬುದನ್ನು ತೋರಿಸಿಕೊಡುವುದೇ ಈ ಪುಸ್ತಕದ ಮುಖ್ಯ ಉದ್ದೇಶವಾದ ಕಾರಣ, ಇದರಲ್ಲಿ ಮೊದಲಿಗೆ ವ್ಯಾಕರಣದ ಬೇರೆ ಬೇರೆ ಅಂಶಗಳಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಎಂತಹ ವ್ಯತ್ಯಾಸಗಳೆಲ್ಲ ಇವೆ ಎಂಬುದನ್ನು ವಿವರಿಸಲಾಗಿದೆ.

ಅನಂತರ, ಅಂತಹ ಪ್ರತಿಯೊಂದು ವ್ಯಾಕರಣಾಂಶದ ಮಟ್ಟಿಗೂ ಹಳೆಗನ್ನಡ ವ್ಯಾಕರಣಗಳು ಹೇಗೆ ಈ ವ್ಯತ್ಯಾಸಗಳನ್ನು ಪರಿಗಣಿಸುವಲ್ಲಿ ಸೋತುಹೋಗಿವೆ, ಮತ್ತು ಇದರಿಂದಾಗಿ ಹೇಗೆ ಈ ವ್ಯಾಕರಣಗಳು ಹಳೆಗನ್ನಡ ವ್ಯಾಕರಣವನ್ನು ವಿವರಿಸುವಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗಿದೆ ಎಂಬುದನ್ನು ತೋರಿಸಿಕೊಡಲಾಗಿದೆ.

ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವೆ ಕಾಣಿಸುವ ಇಂತಹ ಮೂಲಭೂತ ವ್ಯತ್ಯಾಸಗಳಲ್ಲಿ ಕೆಲವನ್ನು ಕೆಳಗೆ ಕೊಡಲಾಗಿದೆ.

(೧) ವ್ಯಕ್ತಿ, ವಸ್ತು ಮೊದಲಾದುವನ್ನು ವರ್ಣನೆಗಳ ಮೂಲಕ ಗುರುತಿಸುವುದಕ್ಕಾಗಿ ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳು ತೀರ ಭಿನ್ನವಾದ ವ್ಯಾಕರಣ ವಿಧಾನಗಳನ್ನು ಬಳಸಿಕೊಳ್ಳುತ್ತವೆ. ಸಂಸ್ಕೃತದಲ್ಲಿ ಇದಕ್ಕಾಗಿ ಎರಡು ಅಥವಾ ಜಾಸ್ತಿ ನಾಮಪದಗಳನ್ನು ಒಂದೇ ವಿಭಕ್ತಿಯಲ್ಲಿರಿಸಿ ಬಳಸಲಾಗುತ್ತದೆ; ಆದರೆ ಹಳೆಗನ್ನಡದಲ್ಲಿ ನಾಮಪದಗಳೊಂದಿಗೆ ಗುಣಪದಗಳೆಂಬ ಬೇರೆಯೇ ಒಂದು ಪದವರ್ಗಕ್ಕೆ ಸೇರಿದ ಪದಗಳನ್ನು ಬಳಸಲಾಗುತ್ತದೆ. ಈ ಪದಗಳು ನಾಮಪದಗಳಿಂದ ಭಿನ್ನವಾದುವಾದ ಕಾರಣ, ಹಳೆಗನ್ನಡದಲ್ಲಿ ಅವು ವಿಭಕ್ತಿ ಪ್ರತ್ಯಯಗಳೊಂದಿಗೆ ಬರುವುದಿಲ್ಲ (೪.೨ ನೋಡಿ).

(೨) ವ್ಯಕ್ತಿ, ವಸ್ತು ಮೊದಲಾದವುಗಳನ್ನು ಹೆಸರಿಸಿ ಗುರುತಿಸುವುದು ಮತ್ತು ವರ್ಣಿಸಿ ಗುರುತಿಸುವುದು ಎಂಬುದಾಗಿ ಎರಡು ರೀತಿಯ ಗುರುತಿಸುವ ವಿಧಾನಗಳು ಹೆಚ್ಚಿನ ಭಾಷೆಗಳಲ್ಲೂ ಬಳಕೆಯಲ್ಲಿವೆ. ಆದರೆ ಸಂಸ್ಕೃತದಂತಹ ಮಾತಿನ ಬಳಕೆ ತಪ್ಪಿ ಹೋಗಿ ಬರಿಯ ಗ್ರಾಂಥಿಕಗಳಾಗಿರುವ ಕೆಲವು ಭಾಷೆಗಳಲ್ಲಿ ಈ ವ್ಯತ್ಯಾಸ ಇಲ್ಲವಾಗಿದೆ. ಸಂಸ್ಕೃತ ವ್ಯಾಕರಣವನ್ನು ಮಾದರಿಯಾಗಿರಿಸಿಕೊಂಡ ಹಳೆಗನ್ನಡ ವೈಯಾಕರಣಿಗಳಿಗೆ ಈ ವ್ಯತ್ಯಾಸವನ್ನು ಗಮನಿಸಲು ಸಾಧ್ಯವಾಗಿಲ್ಲ (೫.೨–೩ ನೋಡಿ).

(೩) ಎರಡು ಪದಗಳನ್ನು ಒಟ್ಟುಸೇರಿಸಿ ಹೊಸ ಪದವೊಂದನ್ನು ಉಂಟುಮಾಡುವ ಸಮಾಸ ಎಂಬ ವ್ಯಾಕರಣ ವಿಧಾನ ಈ ಎರಡು ಭಾಷೆಗಳಲ್ಲೂ ಬಳಕೆಯಲ್ಲಿವೆ; ಆದರೆ, ಹಳೆಗನ್ನಡದಲ್ಲಿ ನಾಮಪದ, ಗುಣಪದ ಮತ್ತು ಕ್ರಿಯಾಪದಗಳೆಂಬ ಮೂರು ಬಗೆಯ ಪದಗಳನ್ನೂ ನಾಮಪದಗಳೊಂದಿಗೆ ಸೇರಿಸಿ ಇಂತಹ ಪದಗಳನ್ನು ಉಂಟುಮಾಡಲು ಬರುತ್ತದೆ; ಇದಕ್ಕೆ ಬದಲು, ಸಂಸ್ಕೃತದ ಸಮಾಸದಲ್ಲಿ ನಾಮಪದಗಳನ್ನು ಮಾತ್ರವೇ ಬೇರೊಂದು ನಾಮಪದದೊಂದಿಗೆ ಸೇರಿಸಲು ಬರುತ್ತದೆ. ಹಾಗಾಗಿ, ಈ ಎರಡು ಭಾಷೆಗಳಲ್ಲಿ ತೀರ ಬೇರೆ ಬೇರಾಗಿರುವ ಸಮಾಸಗಳು ಕಾಣಿಸಿಕೊಳ್ಳುತ್ತವೆ.

(೪) ಹಳೆಗನ್ನಡದ ಕ್ರಿಯಾಪದಗಳಿಗೆ ಗುಣಪದಗಳ ಜಾಗದಲ್ಲಿ ಬರುವ ರೂಪ, ಮತ್ತು ನಾಮಪದಗಳ ಜಾಗದಲ್ಲಿ ಬರುವ ರೂಪ ಎಂಬುದಾಗಿ ಎರಡು ಭಿನ್ನವಾದ ರೂಪಗಳಿವೆ. ಆದರೆ ಸಂಸ್ಕೃತದ ಕ್ರಿಯಾಪದಗಳಿಗೆ ನಾಮಪದಗಳ ಜಾಗದಲ್ಲಿ ಬರುವ ರೂಪಗಳು ಮಾತ್ರ ಇವೆ. ಇವಕ್ಕಿಂತ ಭಿನ್ನವಾದ ಗುಣಪದಗಳ ಜಾಗದಲ್ಲಿ ಬರುವ ರೂಪಗಳೆಂಬುದಿಲ್ಲ. ಸಂಸ್ಕೃತದಲ್ಲಿ ಗುಣಪದವೆಂಬ ವಿಶಿಷ್ಟವಾದ ಪದವರ್ಗವಿಲ್ಲದಿರುವುದೇ ಇದಕ್ಕೆ ಕಾರಣ (೬.೧ ನೋಡಿ).

(೫) ನಾಮಪದಗಳನ್ನು ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳೆರಡೂ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗಗಳೆಂಬ ಮೂರು ಲಿಂಗಗಳಲ್ಲಿ ವಿಂಗಡಿಸುತ್ತವೆ; ಆದರೆ, ಇದಕ್ಕಾಗಿ ಈ ಎರಡು ಭಾಷೆಗಳು ಬಳಸುವ ಆಧಾರ ಮಾತ್ರ ಬೇರೆ ಬೇರೆ. ಹಳೆಗನ್ನಡದಲ್ಲಿ ನಾಮಪದಗಳ ಅರ್ಥವೇ ಈ ವಿಭಜನೆಗೆ ಆಧಾರ; ಆದರೆ, ಸಂಸ್ಕೃತದಲ್ಲಿ ಅಂತಹ ನಿಶ್ಚಿತವಾದ ಆಧಾರವೇನೂ ಇಲ್ಲ. ಹಾಗಾಗಿ, ಸಂಸ್ಕೃತ ವ್ಯಾಕರಣಗಳಲ್ಲಿ ನಾಮಪದಗಳ ವಿಭಜನೆಯನ್ನು ವಿವರಿಸುವುದಕ್ಕಾಗಿ ಬಹಳ ಕ್ಲಿಷ್ಟವಾದ ವಿಧಾನವೊಂದನ್ನು ಬಳಸಬೇಕಾಗಿದೆ. ಹಳೆಗನ್ನಡಕ್ಕೆ ಅಂತಹ ವಿಧಾನ ಬೇಕಾಗಿಲ್ಲ (೭.೨).

(೬) ನಾಮಪದಗಳಿಗೆ ವಚನ ಮತ್ತು ವಿಭಕ್ತಿ ಪ್ರತ್ಯಯಗಳನ್ನು ಸೇರಿಸುವ ಕ್ರಮ ಈ ಎರಡು ಭಾಷೆಗಳಲ್ಲಿ ಭಿನ್ನವಾಗಿದೆ. ಹಳೆಗನ್ನಡದಲ್ಲಿ ಇವನ್ನು ಬೇರೆ ಬೇರೆ ಪ್ರತ್ಯಯಗಳು ಸೂಚಿಸುತ್ತವೆ; ಆದರೆ, ಸಂಸ್ಕೃತದಲ್ಲಿ ಒಂದೇ ಪ್ರತ್ಯಯ ಸೂಚಿಸುತ್ತದೆ. ಹಾಗಾಗಿ, ಸಂಸ್ಕೃತದಲ್ಲಿ ಏಕವಚನವನ್ನೂ ಪ್ರತ್ಯಯವೊಂದರ ಮೂಲಕ ಸೂಚಿಸಬೇಕಾಗುತ್ತದೆ, ಮತ್ತು ವಿಭಕ್ತಿ ಪ್ರತ್ಯಯಗಳನ್ನು ಬಳಸುವ ಅವಶ್ಯವಿಲ್ಲದಲ್ಲೂ ವಚನವನ್ನು ಸೂಚಿಸುವುದಕ್ಕಾಗಿ ಅವನ್ನು ಬಳಸಬೇಕಾಗುತ್ತದೆ. ಹಳೆಗನ್ನಡದಲ್ಲಿ ಈ ಸಮಸ್ಯೆಯಿಲ್ಲ; ಹಾಗಾಗಿ ಅದರಲ್ಲಿ ವಿಭಕ್ತಿ ಮತ್ತು ವಚನ ಪ್ರತ್ಯಯಗಳನ್ನು ಅವಶ್ಯವಿರುವಲ್ಲಿ ಮಾತ್ರ ಬಳಸಿದರೆ ಸಾಕು (೭.೩).

(೭) ವಿಭಕ್ತಿ ಪ್ರತ್ಯಯಗಳ ಮೂಲಕ ನಾಮಪದಕ್ಕೂ ಕ್ರಿಯಾಪದಕ್ಕೂ ನಡುವಿರುವ ಸಂಬಂಧಗಳನ್ನು ಸೂಚಿಸುವ ಕ್ರಮವೂ ಈ ಎರಡು ಭಾಷೆಗಳಲ್ಲಿ ಬೇರೆ ಬೇರಾಗಿದೆ. ಹಳೆಗನ್ನಡದಲ್ಲಿ ಈ ಪ್ರತ್ಯಯಗಳಿಗೂ ಅವು ಸೂಚಿಸುವ ಸಂಬಂಧಗಳಿಗೂ ನಡುವೆ ನೇರವಾದ ಹೊಂದಾಣಿಕೆಯಿದೆ, ಆದರೆ ಸಂಸ್ಕೃತದಲ್ಲಿ ಇಂತಹ ನೇರವಾದ ಹೊಂದಾಣಿಕೆಯಿಲ್ಲ. ಈ ಕಾರಣಕ್ಕಾಗಿ, ಸಂಸ್ಕೃತ ವ್ಯಾಕರಣದಲ್ಲಿ ಕಾರಕಗಳೆಂಬ ಕಲ್ಪಿತ ಘಟಕಗಳನ್ನು ಬಳಸುವ ಅವಶ್ಯಕತೆಯಿದೆ; ಆದರೆ, ಹಳೆಗನ್ನಡ ವ್ಯಾಕರಣದಲ್ಲಿ ಅಂತಹ ಕಲ್ಪಿತ ಘಟಕಗಳನ್ನು ಬಳಸಬೇಕಾಗಿಲ್ಲ (೮.೬).

(೮) ಕ್ರಿಯಾರೂಪಗಳಲ್ಲಿ ಸಮಯ ಮತ್ತು ಘಟಕಗಳನ್ನು ಸೂಚಿಸುವ ಕ್ರಮವೂ ಈ ಎರಡು ಭಾಷೆಗಳಲ್ಲಿ ಭಿನ್ನವಾಗಿದೆ. ಹಳೆಗನ್ನಡದಲ್ಲಿ ಸಮಯ ಸಂಬಂಧಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಲಾಗುತ್ತದೆಯಾದರೆ, ಸಂಸ್ಕೃತದಲ್ಲಿ ಸಮಯ ವ್ಯವಸ್ಥೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಲಾಗುತ್ತದೆ.

ಇದಲ್ಲದೆ, ಹಳೆಗನ್ನಡದ ಕ್ರಿಯಾರೂಪಗಳೊಂದಿಗೆ ಸಮಯವನ್ನು ಸೂಚಿಸುವುದಕ್ಕಾಗಿ ವಿಶಿಷ್ಟವಾದ ಪ್ರತ್ಯಯಗಳನ್ನು ಬಳಸಲಾಗುತ್ತದೆ; ಆದರೆ, ಸಂಸ್ಕೃತದಲ್ಲಿ ಇದಕ್ಕಾಗಿ ಧಾತುಗಳಲ್ಲೇನೇ ಬದಲಾವಣೆಗಳನ್ನು ಮಾಡಲಾಗುತ್ತದೆ (೯.೨).

(೯) ಕ್ರಿಯಾರೂಪಗಳಲ್ಲಿ ಘಟಕಗಳನ್ನು ಸೂಚಿಸುವುದಕ್ಕಾಗಿ ಬಳಕೆಯಾಗುವ ಪ್ರತ್ಯಯಗಳೂ ಈ ಎರಡು ಭಾಷೆಗಳಲ್ಲಿ ಬೇರೆ ಬೇರಾಗಿವೆ. ಹಳೆಗನ್ನಡದಲ್ಲಿ ಇವು ಘಟಕಗಳ ಪುರುಷ, ವಚನ

ಮತ್ತು ಲಿಂಗಗಳನ್ನು ಸೂಚಿಸಬಲ್ಲುವು; ಆದರೆ, ಸಂಸ್ಕೃತದಲ್ಲಿ ಪುರುಷ ಮತ್ತು ವಚನಗಳನ್ನು ಮಾತ್ರ ಸೂಚಿಸಬಲ್ಲುವು.

ಇದಲ್ಲದೆ, ಸಂಸ್ಕೃತದಲ್ಲಿ ಈ ಪ್ರತ್ಯಯಗಳು ಬೇರೆಯೂ ಕೆಲವು ವಿಷಯಗಳನ್ನು ಸೂಚಿಸಬಲ್ಲುವಾಗಿದ್ದು, ಹಳೆಗನ್ನಡದ ಪ್ರತ್ಯಯಗಳಿಂದ ಭಿನ್ನವಾಗಿವೆ (೯.೩).

(೧೦) ಎರಡು ಅಥವಾ ಜಾಸ್ತಿ ವಾಕ್ಯಗಳನ್ನು ಜೋಡಿಸಿ ಹೇಳುವ ಕ್ರಮದಲ್ಲಿ (೧೦.೧), ಮತ್ತು ಇಂತಹ ಬೇರೆಯೂ ಹಲವಾರು ವ್ಯಾಕರಣಾಂಶಗಳಲ್ಲಿ ಸಂಸ್ಕೃತಕ್ಕೂ ಮತ್ತು ಹಳೆಗನ್ನಡಕ್ಕೂ ನಡುವೆ ಪ್ರಾಮುಖ್ಯವಾದ ವ್ಯತ್ಯಾಸಗಳಿವೆ.

ಇವೆಲ್ಲವೂ ವ್ಯಾಕರಣದ ಮೂಲತತ್ವಗಳಲ್ಲೇನೇ ಕಾಣಿಸಿಕೊಳ್ಳುವಂತಹ ವ್ಯತ್ಯಾಸಗಳು; ಇವನ್ನು ಗಮನದಲ್ಲಿರಿಸಿಕೊಳ್ಳದೆ, ಸಂಸ್ಕೃತ ವ್ಯಾಕರಣವನ್ನು ಮಾದರಿಯಾಗಿರಿಸಿಕೊಂಡು ಬರೆದಿರುವ ಹಳೆಗನ್ನಡದ ಪ್ರಾಚೀನ ವ್ಯಾಕರಣಗಳು ಹೇಗೆ ಅಡಿಗಡಿಗೂ ಸಮಸ್ಯೆಗಳನ್ನೆದುರಿಸಬೇಕಾಗುತ್ತದೆ ಎಂಬುದನ್ನು ಈ ಪುಸ್ತಕದಲ್ಲಿ ವಿವರಿಸಲಾಗಿದೆ.

ಮೇಲೆ ವಿವರಿಸಿದಂತಹ ಹಲವು ಕಾರಣಗಳಿಂದಾಗಿ, ಇದುವರೆಗೆ ಹಳೆಗನ್ನಡದ ಮೇಲೆ ಸಿದ್ಧವಾಗಿರುವ ವ್ಯಾಕರಣಗಳೆಲ್ಲವೂ ಸರಿಯಾದ ಅಡಿಪಾಯವಿಲ್ಲದ ಕಟ್ಟಡಗಳಂತಿವೆ. ಎಷ್ಟೇ ಅಂದವಾಗಿ ಕಟ್ಟಿರಲಿ, ಅವುಗಳ ಅಡಿಪಾಯ ಸರಿಯಿಲ್ಲವಾದ ಕಾರಣ, ವಿಮರ್ಶೆಗೆ ಒಳಪಡಿಸಿದೊಡನೆಯೇ ಅವು ಬಹಳ ಸುಲಭವಾಗಿ ಕುಸಿದುಹೋಗುತ್ತವೆ.

## ಅಧ್ಯಾಯ ಎರಡು
# ಪಾರಿಭಾಷಿಕ ಪದಗಳ ಬಳಕೆ

### ೨.೧ ಪೀಠಿಕೆ

ಸಂಸ್ಕೃತ ಮತ್ತು ಹಳೆಗನ್ನಡಗಳ ನಡುವೆ ಅವು ಬಳಸುವ ವ್ಯಾಕರಣದ ಮೂಲ ತತ್ವಗಳಲ್ಲೇನೇ ಹಲವು ಮುಖ್ಯವಾದ ವ್ಯತ್ಯಾಸಗಳಿವೆ ಎಂಬುದನ್ನು ನಾವು ಮುಂದಿನ ಅಧ್ಯಾಯಗಳಲ್ಲಿ ನೋಡಲಿರುವೆವು. ವ್ಯಾಕರಣಗಳಲ್ಲಿ ಬಳಕೆಯಾಗುವ ಪಾರಿಭಾಷಿಕ ಪದಗಳಲ್ಲಿ ಹೆಚ್ಚಿನವೂ ಇಂತಹ ಮೂಲತತ್ವಗಳ ಮೇಲೆ ಅವಲಂಬಿಸಿರುತ್ತವೆ. ಹಾಗಾಗಿ, ಒಂದು ಭಾಷೆಯ ವ್ಯಾಕರಣದಲ್ಲಿ ಬಳಕೆಯಾಗಿರುವ ಪಾರಿಭಾಷಿಕ ಪದಗಳಲ್ಲಿ ಎಲ್ಲವನ್ನೂ ಹಾಗೆಯೇ ಇನ್ನೊಂದು ಭಾಷೆಯ ವ್ಯಾಕರಣದಲ್ಲಿ ಬಳಸಲು ಸಾಧ್ಯವಾಗುವುದಿಲ್ಲ.

ಆದರೆ, ಹಳೆಗನ್ನಡದ ವೈಯಾಕರಣಿಗಳು ಸಂಸ್ಕೃತದ ಪಾರಿಭಾಷಿಕ ಪದಗಳಲ್ಲಿ ತಮಗೆ ಬೇಕಾದುವನ್ನು, ಮತ್ತು ಹಲವೆಡೆಗಳಲ್ಲಿ ಬೇಡವಾದವುಗಳನ್ನೂ ತಾವು ಬರೆದಿರುವ ಹಳೆಗನ್ನಡ ವ್ಯಾಕರಣಗಳಲ್ಲಿ ಹೆಸರಿಸಿ ವಿವರಿಸಿದ್ದಾರೆ. ಇವುಗಳಲ್ಲಿ ಕೆಲವು ನಿಜಕ್ಕೂ ಅವರು ರಚಿಸಿರುವ ವ್ಯಾಕರಣಗಳಿಗೆ ಅವಶ್ಯವಿಲ್ಲ; ಹಾಗಾಗಿ, ಆ ವ್ಯಾಕರಣಗಳು ಅನವಶ್ಯಕವಾಗಿ ತುಂಬಾ ಕ್ಲಿಷ್ಟವಾಗಿವೆ.

ಇನ್ನು ಕೆಲವು ಪಾರಿಭಾಷಿಕ ಪದಗಳಿಗೆ ಅವುಗಳ ಈ ಬಳಕೆಯಲ್ಲಿ ಸಂಸ್ಕೃತದಲ್ಲಿಲ್ಲದ ಅರ್ಥಗಳೂ ಬಂದಿರುವ ಹಾಗೆ ಕಾಣಿಸುತ್ತದೆ. ಹಳೆಗನ್ನಡದಲ್ಲಿ ಬಳಕೆಯಾಗುವ ವ್ಯಾಕರಣದ ಮೂಲತತ್ವಗಳು ಸಂಸ್ಕೃತದವಕ್ಕಿಂತ ತೀರ ಭಿನ್ನವಾಗಿರುವುದೇ ಇದಕ್ಕೆ ಕಾರಣ. ಇದರಿಂದಾಗಿಯೂ ಈ ಪಾರಿಭಾಷಿಕ ಪದಗಳ ಬಳಕೆ ಹಳೆಗನ್ನಡ ವ್ಯಾಕರಣಗಳಲ್ಲಿ ಗೊಂದಲಕ್ಕೆಡೆಮಾಡಿದೆ.

### ೨.೨ ಲೋಪ, ಆಗಮ ಮತ್ತು ಆದೇಶ

ಪದಗಳಿಗೆ ಪ್ರತ್ಯಯಗಳನ್ನು ಸೇರಿಸಿದಾಗ, ಇಲ್ಲವೇ ಎರಡು ಪದಗಳನ್ನು ಒಟ್ಟಿಗೆ ಸೇರಿಸಿದಾಗ, ಆ ಪದ ಇಲ್ಲವೇ ಪ್ರತ್ಯಯಗಳಲ್ಲಿ ಕಾಣಿಸುವ ವ್ಯತ್ಯಾಸಗಳನ್ನು ಅವುಗಳಲ್ಲಿ ನಡೆಯುವ 'ಬದಲಾವಣೆ'ಗಳೆಂಬುದಾಗಿ ವರ್ಣಿಸಿ ಹೇಳಲು ಸಾಧ್ಯವಿದೆ. ಪದ ಮತ್ತು ಪ್ರತ್ಯಯಗಳಲ್ಲಿ ಮುಖ್ಯವಾಗಿ ಇಂತಹ ಮೂರು ರೀತಿಯ ಬದಲಾವಣೆಗಳನ್ನು ಕಾಣಲು ಸಾಧ್ಯವಿದ್ದು, ಇವನ್ನು ಲೋಪ, ಆಗಮ ಮತ್ತು ಆದೇಶಗಳೆಂಬ ಹೆಸರಿನಿಂದ ಗುರುತಿಸಲಾಗುತ್ತದೆ.

ಉದಾಹರಣೆಗಾಗಿ, ಕಾಡನ್ ಎಂಬುದರಲ್ಲಿ ಕಾಡು ನಾಮಪದಕ್ಕೆ ಅನ್ ಪ್ರತ್ಯಯವನ್ನು ಸೇರಿಸಲಾಗಿದ್ದು, ಅದರ ಕೊನೆಯ ಉಕಾರ ಬಿದ್ದುಹೋಗಿದೆ; ಇದು 'ಲೋಪ'. ತುಱುವನ್ ಎಂಬುದರಲ್ಲೂ ತುಱು ನಾಮಪದಕ್ಕೆ ಇದೇ ಅನ್ ಪ್ರತ್ಯಯವನ್ನು ಸೇರಿಸಲಾಗಿದೆಯಾದರೂ, ಅದರ ಕೊನೆಯ ಉಕಾರ ಬಿದ್ದು ಹೋಗುವ ಬದಲು, ಅದಕ್ಕೂ ಪ್ರತ್ಯಯಕ್ಕೂ ನಡುವೆ ವಕಾರವೊಂದು ಹೊಸದಾಗಿ ಬಂದು ಸೇರಿದೆ; ಇದು 'ಆಗಮ'. ಮಾೞ್ಕೆ ಎಂಬುದರಲ್ಲಿ ಮಾಡು ಕ್ರಿಯಾ ಪದಕ್ಕೆ

ಕೆ ಪ್ರತ್ಯಯವನ್ನು ಸೇರಿಸಲಾಗಿದ್ದು, ಆ ಕ್ರಿಯಾಪದದ ಕೊನೆಯ ಉಕಾರ ಲೋಪಗೊಂಡಿದೆಯಲ್ಲದೆ ಅದರ ಹಿಂದಿನ ವ್ಯಂಜನ ಡ್ ಇದ್ದುದು ಟ್ ಎಂದಾಗಿದೆ; ಇದು 'ಆದೇಶ'.

ಪದ ಮತ್ತು ಪ್ರತ್ಯಯಗಳು ಒಟ್ಟಿಗೆ ಸೇರುವಾಗ ಅವುಗಳಲ್ಲಿ ಕಾಣಿಸುವ ವ್ಯತ್ಯಾಸಗಳನ್ನು ಈ ರೀತಿ ಅವುಗಳಲ್ಲಿ ನಡೆಯುವ 'ಬದಲಾವಣೆ'ಗಳೆಂಬುದಾಗಿ ವಿವರಿಸುವ ಬದಲು, ಬೇರೆ ಬೇರೆ ಸಂದರ್ಭಗಳಲ್ಲಿ ಅವಕ್ಕಿರುವ 'ರೂಪಭೇದ'ಗಳೆಂಬುದಾಗಿಯೂ ವಿವರಿಸಲು ಸಾಧ್ಯವಿದೆ.

ಉದಾಹರಣೆಗಾಗಿ, ಕಣ್ಗೆ, ಮಕ್ಕಳ್ಗೆ, ನನ್ನಿಗೆ ಮೊದಲಾದ ಪದರೂಪಗಳಲ್ಲಿ ಕಾಣಿಸುವ ಗೆ ಪ್ರತ್ಯಯ ನೆಲಕೆ, ಇದರ್ಕೆ ಮೊದಲಾದ ಕೆಲವು ಪದರೂಪಗಳಲ್ಲಿ ಕೆ ಎಂದಾಗುತ್ತದೆ (ಗೆ ಎಂಬುದಕ್ಕೆ ಕೆ ಎಂಬುದು ಆದೇಶವಾಗಿ ಬರುತ್ತದೆ), ಮತ್ತು ಓಲಗಕ್ಕೆ, ಮರಕ್ಕೆ ಮೊದಲಾದ ಬೇರೆ ಕೆಲವು ಪದರೂಪಗಳಲ್ಲಿ ಕ್ಕೆ ಎಂದಾಗುತ್ತದೆ (ಗೆ ಎಂಬುದಕ್ಕೆ ಕ್ಕೆ ಆದೇಶವಾಗಿ ಬರುತ್ತದೆ) ಎಂದು ಹೇಳುವುದು 'ಬದಲಾವಣೆ'ಗಳ ಮೂಲಕ ಅವುಗಳ ನಡುವಿರುವ ವ್ಯತ್ಯಾಸವನ್ನು ವಿವರಿಸುವ ವಿಧಾನ.

ಇದಕ್ಕೆ ಬದಲು, ಆ ಪ್ರತ್ಯಯಕ್ಕೆ ಗೆ, ಕೆ ಮತ್ತು ಕ್ಕೆ ಎಂಬುದಾಗಿ ಮೂರು ರೂಪಗಳಿದ್ದು, ಅವುಗಳಲ್ಲಿ ಮೊದಲನೆಯದು ಕಣ್, ಮಕ್ಕಳ್, ನನ್ನಿ, ಪಗೆ ಮೊದಲಾದ ಪದಗಳ ಅನಂತರ ಬರುತ್ತದೆ, ಎರಡನೆಯದು ನೆಲ, ಇದು (ಈ ಪದದ ಇದಱ್ ಎಂಬ ರೂಪ), ನೆಲ ಮೊದಲಾದ ಪದಗಳ ಅನಂತರ ಬರುತ್ತದೆ, ಮತ್ತು ಮೂರನೆಯದು ಮರ, ಓಲಗ, ಗೂಂಟ ಮೊದಲಾದ ಪದಗಳ ಅನಂತರ ಬರುತ್ತದೆಯೆಂದೂ ಹೇಳಲು ಸಾಧ್ಯವಿದೆ. ಇದು 'ರೂಪಭೇದ'ಗಳ ಮೂಲಕ ಅದೇ ವ್ಯತ್ಯಾಸವನ್ನು ವಿವರಿಸುವ ವಿಧಾನ. ಈ ವಿಧಾನವನ್ನು ಬಳಸಿದಲ್ಲಿ ಲೋಪ, ಆಗಮ ಮತ್ತು ಆದೇಶಗಳೆಂಬ ಪಾರಿಭಾಷಿಕ ಪದಗಳ ಅವಶ್ಯಕತೆಯಿಲ್ಲ.

ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾಗಿರುವ ವಿಷಯವೇನೆಂದರೆ, ಪದ ಇಲ್ಲವೇ ಪ್ರತ್ಯಯಗಳಲ್ಲಿ ಕಾಣಿಸುವ ಈ ಬದಲಾವಣೆ (ಇಲ್ಲವೇ ವ್ಯತ್ಯಾಸ)ಗಳಿಗೂ ಮತ್ತು ಅವುಗಳ ಅರ್ಥಕ್ಕೂ ನಡುವೆ ಯಾವ ಸಂಬಂಧವೂ ಇಲ್ಲ. ಕಾಡು ಎಂಬುದರ ಕೊನೆಯ ಅಕಾರ ಬಿದ್ದುಹೋದುದರಿಂದಾಗಿ, ಇಲ್ಲವೇ ತುಱು ನಾಮಪದದ ಅನಂತರ ವಕಾರವೊಂದು ಸೇರಿಕೊಂಡುದರಿಂದಾಗಿ ಅದರ ಅರ್ಥದಲ್ಲಿ ಹೆಚ್ಚುಕಡಿಮೆಯಾಗಿಲ್ಲ; ಅದರ ಅರ್ಥ ಮೊದಲಿದ್ದ ಹಾಗೆಯೇ ಇದೆ.

ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳು ಲೋಪ, ಆಗಮ ಮತ್ತು ಆದೇಶಗಳೆಂಬ ಪಾರಿಭಾಷಿಕ ಪದಗಳನ್ನು ಈ ರೀತಿ ಪದ ಮತ್ತು ಪ್ರತ್ಯಯಗಳು ಒಂದರೊಡನೊಂದು ಸೇರುವಾಗ ಅವುಗಳಲ್ಲಿ ಕಾಣಿಸಿಕೊಳ್ಳುವ ವ್ಯತ್ಯಾಸಗಳನ್ನು ವಿವರಿಸುವಲ್ಲಿ ಮಾತ್ರವಲ್ಲದೆ, ಬೇರೆಯೂ ಕೆಲವು ಸಂದರ್ಭಗಳಲ್ಲಿ ಬಳಸಿದ್ದಾರೆ. ಆದರೆ, ಇದರಿಂದಾಗಿ ಅವರ ವ್ಯಾಕರಣಗಳಲ್ಲಿ ಹಲವು ಹೊಸ ಸಮಸ್ಯೆಗಳು ತಲೆದೋರಿವೆ.

ಸಂಸ್ಕೃತ ವ್ಯಾಕರಣದ ನಿಯಮಗಳನ್ನು ನೇರವಾಗಿ ತಮ್ಮ ಹಳೆಗನ್ನಡ ವ್ಯಾಕರಣಗಳಲ್ಲಿ ಅಳವಡಿಸಲು ಪ್ರಯತ್ನಿಸಿರುವುದೇ ಅವರು ಈ ರೀತಿ ಮಾಡಬೇಕಾಗಿ ಬಂದಿರುವುದಕ್ಕೆ ಮುಖ್ಯ ಕಾರಣ ಎಂಬುದು ಕೆಳಗಿನ ಪರಿಶೀಲನೆಯಿಂದ ಸ್ಪಷ್ಟವಾಗುತ್ತದೆ.

### ೨.೨.೧ ಬಹುವಚನ ಪ್ರತ್ಯಯ

ನಾಮಪದಗಳೊಂದಿಗೆ ಬಹುವಚನವನ್ನು ಸೂಚಿಸುವುದಕ್ಕಾಗಿ ಬರುವ ಗಳ್ ಪ್ರತ್ಯಯವನ್ನು (ತೊಡೆಗಳ್, ತೋಳ್ಗಳ್) ಕೇಶಿರಾಜನು ವಿಭಕ್ತಿ ಪ್ರತ್ಯಯಗಳ ಮೊದಲು ಬರುವ 'ಆಗಮ'ವೆಂದು ಕರೆದಿದ್ದಾನೆ (ಸೂ. ೧೦೫). ಆದರೆ ಹಳೆಗನ್ನಡದಲ್ಲಿ ಇವು ಪ್ರತ್ಯಯಗಳಲ್ಲದೆ ಆಗಮಗಳಲ್ಲ.

ಯಾಕೆಂದರೆ, ತೊಡೆಗಳ್ ಎಂಬಂತಹ ಪದಗಳಲ್ಲಿ ಗಳ್ ಎಂಬುದು ಅರ್ಥವಿಲ್ಲದ ಸೇರಿಕೆಯಲ್ಲ; ಅದಕ್ಕೆ ಬಹುವಚನವನ್ನು ಸೂಚಿಸುವ ಅರ್ಥವಿದೆ. ತೊಡೆ ರೂಪ ಒಂದು ತೊಡೆಯನ್ನು ಸೂಚಿಸುತ್ತದೆಯಾದರೆ, ತೊಡೆಗಳ್ ರೂಪ ಒಂದಕ್ಕಿಂತ ಹೆಚ್ಚು (ಎರಡು) ತೊಡೆಗಳನ್ನು ಸೂಚಿಸುತ್ತದೆ. ತುಱುವಿನ್ ಎಂಬುದರಲ್ಲಿ ಬಂದ ವಕಾರದ ಹಾಗೆ, ಇಲ್ಲವೇ ಮರದೊಳ್ ಎಂಬುದರಲ್ಲಿ ಬಂದ ದಕಾರದ ಹಾಗೆ ಅದು ಅರ್ಥವಿಲ್ಲದ ಸೇರಿಕೆಯಲ್ಲ.

ಇದಕ್ಕೆ ಬದಲು, ಸಂಸ್ಕೃತದಲ್ಲಿ ನಾಮಪದಗಳ ಅನಂತರ ಬರುವ ವಿಭಕ್ತಿ ಪ್ರತ್ಯಯಗಳೇ ವಚನವನ್ನೂ ಸೂಚಿಸುತ್ತವೆ. ಉದಾಹರಣೆಗಾಗಿ, ಸ್ತ್ರೀ ನಾಮಪದಕ್ಕೆ ಸಪ್ತಮೀ-ದ್ವಿವಚನದಲ್ಲಿ ಸ್ತ್ರಿಯೋಃ ಎಂಬ ರೂಪವಿದ್ದು, ಇದರಲ್ಲಿ ಓಃ ಪ್ರತ್ಯಯ ಸಪ್ತಮೀ ವಿಭಕ್ತಿಯನ್ನು ಮಾತ್ರವಲ್ಲದೆ ದ್ವಿವಚನವನ್ನೂ ಸೂಚಿಸುತ್ತದೆ. ಹಾಗಾಗಿ, ಈ ರೂಪದಲ್ಲಿ ಬರುವ ಸ್ತ್ರಿಯ್ ಎಂಬುದನ್ನು ಸ್ತ್ರೀ ಎಂಬುದರ ರೂಪಭೇದವೆಂದಾಗಲೀ, ಇಲ್ಲವೇ ಅದರ ಕೊನೆಯ ಈಕಾರಕ್ಕೆ ಅಯ್ ಎಂಬುದು ಆದೇಶವಾಗಿ ಬಂದುದರಿಂದಾಗಿ ಸಿದ್ಧವಾದ ರೂಪವೆಂದಾಗಲೀ ಹೇಳುವುದರಲ್ಲಿ ಔಚಿತ್ಯವಿದೆ (ಹೆಚ್ಚಿನ ವಿವರಗಳಿಗೆ ೭.೨ ನೋಡಿ).

ವಿಭಕ್ತಿ ಮತ್ತು ವಚನಗಳ ಸೂಚನೆಯಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳು ಈ ರೀತಿ ಎರಡು ತೀರ ಭಿನ್ನವಾದ ವ್ಯಾಕರಣ ವಿಧಾನಗಳನ್ನು ಬಳಸುತ್ತವೆ. ಹಳೆಗನ್ನಡದಲ್ಲಿ ಅವೆರಡನ್ನು ಎರಡು ಬೇರೆ ಬೇರೆ ಪ್ರತ್ಯಯಗಳ ಮೂಲಕ ಸೂಚಿಸಲಾಗುತ್ತದೆ; ಆದರೆ, ಸಂಸ್ಕೃತದಲ್ಲಿ ಎರಡನ್ನೂ ಒಂದೇ ಪ್ರತ್ಯಯದ ಮೂಲಕ ಸೂಚಿಸಲಾಗುತ್ತದೆ.

ಈ ಮೂಲಭೂತ ವ್ಯತ್ಯಾಸವನ್ನು ಕೇಶಿರಾಜನೇ ಮೊದಲಾದ ಪ್ರಾಚೀನ ವೈಯಾಕರಣಿಗಳು ಗಮನಿಸಿರಲಿಲ್ಲ. ಹಾಗಾಗಿ, ಈ ಸಂದರ್ಭದಲ್ಲಿ ಸಂಸ್ಕೃತದ ವ್ಯಾಕರಣ ವಿಧಾನವನ್ನು ಹಾಗೆಯೇ ಹಳೆಗನ್ನಡಕ್ಕೆ ಅಳವಡಿಸುವುದು ಸರಿಯಲ್ಲವೆಂಬ ವಿಷಯ ಅವರ ಗಮನಕ್ಕೆ ಬರಲಿಲ್ಲ, ಮತ್ತು ಇದರಿಂದಾಗಿ ಪ್ರತ್ಯಯವೊಂದನ್ನು ಆಗಮವೆಂದು ಕರೆಯುವ ಸಮಸ್ಯೆಗೆ ಸಿಕ್ಕಿ ಬೀಳಬೇಕಾಯಿತು.

### ೨.೨.೨ ಆಗಮದ ಮೇಲೆ ಆದೇಶ

ಈ ರೀತಿ ಪ್ರತ್ಯಯಗಳನ್ನು ಆಗಮಗಳೆಂದು ಪರಿಗಣಿಸಿದುದರಿಂದಾಗಿ, ಕೇಶಿರಾಜನು ಬೇರೆಯೂ ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಉದಾಹರಣೆಗಾಗಿ, ಸರ್ವನಾಮ ಮತ್ತು ಗುಣವಚನಗಳಿಗೆ ಬಹುವಚನದಲ್ಲಿ ಬರುವ ಈ ಗಳ್ 'ಆಗಮ'ಕ್ಕೆ ಅವು ಎಂಬುದು 'ಆದೇಶ'ವಾಗಿ ಬರುತ್ತದೆ (ಸೂ.೧೦೫) ಎಂಬ ಇನ್ನಷ್ಟು ವಿಚಿತ್ರವಾದ ವ್ಯಾಕರಣ ನಿಯಮವನ್ನು ಆತನು ಸೃಷ್ಟಿಸಬೇಕಾಗಿದೆ.

ಗಳ್ ಮತ್ತು ಅವು ಎಂಬವುಗಳ ನಡುವೆ ಅರ್ಥದಲ್ಲಿ ಅಷ್ಟೊಂದು ಸ್ಪಷ್ಟವಾದ ವ್ಯತ್ಯಾಸವಿಲ್ಲವಾದ ಕಾರಣ, ಇಲ್ಲಿ 'ಆದೇಶ' ಎಂಬ ಪದದ ಬಳಕೆ ಉಚಿತವಾಗಬಲ್ಲುದಾದರೂ, ಅದು ಒಂದು ಆಗಮದ ಮೇಲೆ ಬಂದಿದೆ ಎಂಬುದು ವಿಚಿತ್ರ.

ಕೇಶಿರಾಜನ ಈ ಬಳಕೆಯಿಂದಾಗಿ, ಅವನ ವ್ಯಾಕರಣದಲ್ಲಿ ಆಗಮ ಮತ್ತು ಪ್ರತ್ಯಯಗಳ ನಡುವೆ ವ್ಯತ್ಯಾಸವೇ ಇಲ್ಲವಾದ ಹಾಗಾಗಿದೆ. ಒಂದು ಅರ್ಥವನ್ನು ಇಲ್ಲವೇ ವ್ಯಾಕರಣ ಕಾರ್ಯವನ್ನು ಸೂಚಿಸುವುದಕ್ಕಾಗಿ ಬರುವ ಒಂದು ಅಥವಾ ಜಾಸ್ತಿ ವರ್ಣಗಳ ಅನುಕ್ರಮಕ್ಕೆ ಪ್ರತ್ಯಯವೆಂದು ಹೆಸರು. ಅಂತಹದಾವುದೂ ಇಲ್ಲದೆ, ಒಂದು ಪದದೊಂದಿಗೆ ಇನ್ನೊಂದು ಪದ ಇಲ್ಲವೇ ಪ್ರತ್ಯಯ ಸೇರಿದಾಗ ಅವುಗಳ ನಡುವೆ ಬರುವ ಒಂದು ಅಥವಾ ಜಾಸ್ತಿ ವರ್ಣಗಳ ಅನುಕ್ರಮಕ್ಕೆ ಆಗಮವೆಂದು ಹೆಸರು.

ಪ್ರತ್ಯಯಗಳಿಗೆ ತಮ್ಮದೇ ಆದ ಅರ್ಥ ಇಲ್ಲವೇ ವ್ಯಾಕರಣ ಕಾರ್ಯವಿದೆಯಾದ ಕಾರಣ, ಅವನ್ನು ಪ್ರತಿನಿಧೀಕರಿಸುವ ವರ್ಣಗಳನ್ನು ಹೊರತು ಪಡಿಸಿಯೂ ಅವಕ್ಕೆ ಒಂದು ಅಸ್ತಿತ್ವವಿದೆ. ಹಾಗಾಗಿ, ಅವಕ್ಕೆ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ರೂಪಗಳಿವೆಯೆಂದಾಗಲಿ, ಇಲ್ಲವೇ ಕೆಲವು ಸಂದರ್ಭಗಳಲ್ಲಿ ಅವುಗಳ ಒಂದು ರೂಪದ ಬದಲು ಇನ್ನೊಂದು ರೂಪ ಆದೇಶವಾಗಿ ಬರುತ್ತದೆಯೆಂದಾಗಲಿ ಹೇಳಲು ಸಾಧ್ಯವಾಗುತ್ತದೆ.

ಆಗಮಗಳಿಗೆ ಈ ರೀತಿ ತಮ್ಮವೇ ಆದ ಅರ್ಥ ಇಲ್ಲವೇ ವ್ಯಾಕರಣ ಕಾರ್ಯವಿಲ್ಲವಾದ ಕಾರಣ, ಅವನ್ನು ಪ್ರತಿನಿಧೀಕರಿಸುವ ವರ್ಣಗಳನ್ನು ಹೊರತುಪಡಿಸಿ ಬೇರೆ ಸ್ವತಂತ್ರವಾದ ಅಸ್ತಿತ್ವ ಅವಕ್ಕಿಲ್ಲ. ಹಾಗಾಗಿ, ಅವುಗಳಿಗೆ ಒಂದಕ್ಕಿಂತ ಹೆಚ್ಚು ರೂಪಗಳಿವೆಯೆಂದಾಗಲಿ, ಇಲ್ಲವೇ ಅವುಗಳ ಒಂದು ರೂಪದ ಬದಲು ಆದೇಶವಾಗಿ ಇನ್ನೊಂದು ರೂಪ ಬರುತ್ತದೆಯೆಂದಾಗಲಿ ಹೇಳುವುದು ಸರಿಯಲ್ಲ.

ಸೂತ್ರ ೨೫೭ರ ವೃತ್ತಿಯಲ್ಲಿ ಇನೆಗಂ, ಉದುಂ, ಅನ್ನಂ, ಅಲೊಡಂ ಮೊದಲಾದ 'ಶಬ್ದಗಳು' ಸತಿಸಪ್ತಮಿಯ ಎಕಾರಕ್ಕೆ ಆದೇಶವಾಗಿ ಬರುತ್ತವೆ ಎಂದು ಕೇಶಿರಾಜನು ಹೇಳಿರುವುದು ಇನ್ನೊಂದು ವಿಚಿತ್ರವಾದ ವ್ಯಾಕರಣ ನಿಯಮ. ಆಗಮದ ಹಾಗೆ ಆದೇಶವೂ ಪದಗಳ ಬಳಕೆಯಲ್ಲಿ ಕಾಣಿಸುವ 'ಅರ್ಥಹೀನ'ವಾದ ವ್ಯತ್ಯಾಸಗಳನ್ನು ಇಲ್ಲವೇ ಬದಲಾವಣೆಗಳನ್ನು ಸೂಚಿಸಬೇಕಲ್ಲದೆ, ಈ ರೀತಿ ಒಂದು ಪದದೊಂದಿಗೆ ಬರುವ ಇನ್ನೊಂದು ಪದ ಇಲ್ಲವೇ ಪದರೂಪವನ್ನು ಸೂಚಿಸಬಾರದು.

### ೨.೨.೩ ಪ್ರತ್ಯಯ ಮತ್ತು ಲೋಪ

ದುಕಾರಾಂತವಾದ ಗುಣವಚನಗಳಿಗೆ ಬಹುವಚನದಲ್ಲಿ ಅವು ಎಂಬುದು (ಗಳ್ 'ಆಗಮ'ದ ಮೇಲಿನ 'ಆದೇಶ') ಸೇರಿದಾಗ ಅವುಗಳ ಕೊನೆಯ ಅಕ್ಷರ (ದು ಎಂಬುದು) ಲೋಪವಾಗುತ್ತದೆ (ಕರಿಯದು–ಕರಿಯವು, ಬಿಳಿಯದು–ಬಿಳಿಯವು) ಎಂದು ಕೇಶಿರಾಜನು ಹೇಳಿರುವಲ್ಲಿಯೂ (ಸೂ.೧೦೬) ಅರ್ಥವತ್ತಾದ ವ್ಯತ್ಯಾಸವನ್ನು ಸಂಧಿನಿಯಮದ ಮೂಲಕ ವಿವರಿಸುವ ಪ್ರಯತ್ನ ನಡೆದಿದೆ. ಹಳೆಗನ್ನಡದ ಗುಣವಚನಗಳಲ್ಲಿ ಬರುವ ದು (ಇಲ್ಲವೇ ಅದು) ಎಂಬುದು ನಪುಂಸಕ–ಏಕವಚನವನ್ನು ಸೂಚಿಸುವ ಲಿಂಗ–ವಚನ ಪ್ರತ್ಯಯ; ಇಂತಹವೇ ಗುಣವಚನಗಳಲ್ಲಿ ಬರುವ ವು (ಇಲ್ಲವೇ ಅವು) ಎಂಬುದು ನಪುಂಸಕ–ಬಹುವಚನವನ್ನು ಸೂಚಿಸುವ ಬೇರೊಂದು ಪ್ರತ್ಯಯ. ಇಲ್ಲಿ ಒಂದು ಪ್ರತ್ಯಯದ ಬದಲು ಇನ್ನೊಂದು ಪ್ರತ್ಯಯ ಬಂದಿದೆಯಲ್ಲದೆ ಸಂಧಿಕಾರ್ಯವಾದ 'ಲೋಪ' ನಡೆದಿಲ್ಲ.

ಹೀಗಿದ್ದರೂ ಇಲ್ಲಿ ಲೋಪವಾಗಿದೆಯೆಂದು ಕೇಶಿರಾಜ ಹೇಳಿರುವುದಕ್ಕೆ ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವೆ ವ್ಯಾಕರಣದ ಮೂಲತತ್ವಗಳಲ್ಲೇನೇ ವ್ಯತ್ಯಾಸವಿರುವುದನ್ನು ಆತ ಗಮನಿಸದಿರುವುದೇ ಕಾರಣ. ಮೇಲೆ (೨.೨.೧)ರಲ್ಲಿ ವಿವರಿಸಿದ ಹಾಗೆ, ಸಂಸ್ಕೃತದಲ್ಲಿ ವಚನ–ವಿಭಕ್ತಿಗಳೆರಡನ್ನೂ ಒಂದೇ ಪ್ರತ್ಯಯ ಸೂಚಿಸುವುದಾದ ಕಾರಣ, ಆ ಭಾಷೆಯ ವಿಭಕ್ತಿರೂಪಗಳಲ್ಲಿ ಕಾಣಿಸುವ ಇಂತಹ ವ್ಯತ್ಯಾಸಗಳನ್ನೆಲ್ಲ ಸಂಧಿನಿಯಮಗಳ ಮೂಲಕವೇ ವಿವರಿಸಬೇಕಾಗುತ್ತದೆ. ಆದರೆ ಹಳೆಗನ್ನಡದಲ್ಲಿ ವಚನ ಪ್ರತ್ಯಯ ವಿಭಕ್ತಿ ಪ್ರತ್ಯಯಕ್ಕಿಂತ ಭಿನ್ನವಾಗಿರುವ ಕಾರಣ, ಅಂತಹ ವಿವರಣೆ ಹಳೆಗನ್ನಡದ ಮಟ್ಟಿಗೆ ಉಚಿತವಲ್ಲ.

### ೨.೨.೪ ಪ್ರತ್ಯಯ ಮತ್ತು ಆಗಮ

ಕೇಶಿರಾಜನು ಹಳೆಗನ್ನಡದ ಕ್ರಿಯಾರೂಪಗಳ ಕೊನೆಯಲ್ಲಿ ಬರುವ ಅಮ್, ಅರ್, ಅಯ್, ಇರ್ ಮೊದಲಾದುವನ್ನು ವಿಭಕ್ತಿ(ಪ್ರತ್ಯಯ)ಗಳೆಂದು ಕರೆದಿದ್ದಾನೆ (ಸೂ. ೨೨೮). ಆದರೆ ಕ್ರಿಯಾಪದಗಳಿಗೂ ಈ ಪ್ರತ್ಯಯಗಳಿಗೂ ನಡುವೆ ಬರುವ ದ, ದಪ ಮತ್ತು ವ ಎಂಬವುಗಳನ್ನು 'ಆಗಮ'ಗಳೆಂದು ಕರೆದಿದ್ದಾನೆ (ಸೂ. ೨೩೨).

ಇದಲ್ಲದೆ, ಈ ಆಗಮಗಳು 'ಪೋದ ವರ್ತಿಸುವ ಬರ್ಪ ಕಾಲಂಗಳ್ಗೆ ಸೂಚಕಂಗಳ್' ಎಂದೂ ಹೇಳಿದ್ದಾನೆ! ಎಂದರೆ ಈ ಆಗಮಗಳಿಗೆ ಕಾಲಭೇದವನ್ನು ಸೂಚಿಸುವ ಅರ್ಥವಿದೆಯೆಂದೂ ಹೇಳಿದ ಹಾಗಾಯಿತು. ಹಾಗಿದ್ದರೆ ಅವನ್ನು ಪ್ರತ್ಯಯಗಳೆಂದು ಕರೆಯದೆ ಆಗಮಗಳೆಂದು ಕರೆದಿರುವುದು ಯಾಕೆ?

ಇದಕ್ಕೆ ಉತ್ತರ ಸಂಸ್ಕೃತ ವ್ಯಾಕರಣದಲ್ಲಿದೆ: ಸಂಸ್ಕೃತದ ಕ್ರಿಯಾರೂಪಗಳಲ್ಲಿ ಕ್ರಿಯಾಪದದ (ಧಾತುವಿನ) ಬಳಿಕ ಪುರುಷ–ವಚನಗಳನ್ನು ಸೂಚಿಸುವ ಪ್ರತ್ಯಯ ಮಾತ್ರ ಬರುತ್ತದೆ. ಕಾಲಭೇದವನ್ನು ಸೂಚಿಸುವುದಕ್ಕಾಗಿ ಅದರಲ್ಲಿ, ಹಳೆಗನ್ನಡದ ಹಾಗೆ, ವಿಶಿಷ್ಟವಾದ ಪ್ರತ್ಯಯಗಳ ಬಳಕೆಯಿಲ್ಲ. ಕ್ರಿಯಾಪದದಲ್ಲೇನೇ ಕೆಲವು ಬದಲಾವಣೆಗಳನ್ನು ಮಾಡುವುದರ ಮೂಲಕ ಕಾಲಭೇದವನ್ನು ಸೂಚಿಸಲಾಗುತ್ತದೆ (೯.೨ ನೋಡಿ).

ಹಾಗಾಗಿ, ಸಂಸ್ಕೃತದ ಕ್ರಿಯಾಪದಗಳಿಗೆ ಆಖ್ಯಾತ (ತಿಙ್) ಪ್ರತ್ಯಯಗಳನ್ನು ಸೇರಿಸಿದಾಗ ಅವುಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನೆಲ್ಲ ಸಂಧಿಯ ನಿಯಮಗಳ ಮೂಲಕವೇನೇ ವಿವರಿಸಬೇಕಾಗುತ್ತದೆ. ಉದಾಹರಣೆಗಾಗಿ, ರುಧ್ 'ತಡೆ' ಕ್ರಿಯಾಪದಕ್ಕೆ ಅಪೂರ್ಣಾರ್ಥದಲ್ಲಿ ಪ್ರಥಮಪುರುಷ–ಏಕವಚನದ ತಿಙ್ ಪ್ರತ್ಯಯವನ್ನು ಸೇರಿಸಿದಾಗ, ಆ ಕ್ರಿಯಾಪದದೊಳಗೆ ಣಕಾರವೊಂದು ಸೇರಿಕೊಂಡು ರುಣದ್ಧಿ ಎಂಬ ರೂಪ ಸಿದ್ಧಿಸುತ್ತದೆ. ಈ ಣಕಾರವನ್ನು ಅಪೂರ್ಣಾರ್ಥವನ್ನು ಸೂಚಿಸುವ ಪ್ರತ್ಯಯವೆಂದು ಕರೆಯುವುದಕ್ಕಿಂತಲೂ ಆಗಮವೆಂದು ಕರೆಯುವುದೇ ಸಂಸ್ಕೃತದ ಮಟ್ಟಿಗೆ ಸರಿಯಾದ ಕ್ರಮ.

ಯಾಕೆಂದರೆ, ಬೇರೆ ಕ್ರಿಯಾಪದಗಳನ್ನು ಬಳಸಿ ಅಪೂರ್ಣಾರ್ಥದ ಕ್ರಿಯಾರೂಪಗಳನ್ನು ತಯಾರಿಸುವಲ್ಲಿ ಈ ರೀತಿ ಕ್ರಿಯಾಪದದೊಳಗೆ ಣ ಇಲ್ಲವೇ ಬೇರೆ ಅಕ್ಷರಗಳು ಸೇರಿಕೊಳ್ಳುವುದಿಲ್ಲ. ಉದಾಹರಣೆಗಾಗಿ, ಪಚ್ 'ಅಡಿಗೆ ಮಾಡು' ಧಾತುವಿಗೆ ಅಪೂರ್ಣಾರ್ಥದಲ್ಲಿ ತಿಙ್ ಪ್ರತ್ಯಯವನ್ನು ಸೇರಿಸಿದಾಗ ಪಚತಿ ರೂಪ ಸಿದ್ಧಿಸುತ್ತದೆ.

ಆದರೆ, ಹಳೆಗನ್ನಡದ ಕ್ರಿಯಾರೂಪಗಳ ಒಳರಚನೆ ಇದಕ್ಕಿಂತ ತೀರ ಭಿನ್ನವಾದುದು. ಅದರ ಕ್ರಿಯಾಪದಗಳ ಬಳಿಕ ಎರಡು ಪ್ರತ್ಯಯಗಳು ಬರುತ್ತಿದ್ದು, ಅವುಗಳಲ್ಲಿ ಒಂದು ಕಾಲಭೇದವನ್ನು ಸೂಚಿಸುತ್ತದೆಯಾದರೆ, ಇನ್ನೊಂದು ಪುರುಷ–ವಚನ ಭೇದವನ್ನು ಸೂಚಿಸುತ್ತದೆ. ಉದಾಹರಣೆಗಾಗಿ, ಪೇೞ್ದನ್ ಕ್ರಿಯಾರೂಪದಲ್ಲಿ ಪೇೞ್ ಕ್ರಿಯಾಪದದ ಬಳಿಕ ಹಿಂದಿನ (ಭೂತ)ಕಾಲವನ್ನು ಸೂಚಿಸುವ ದ್ ಮತ್ತು ಪ್ರಥಮ ಪುರುಷ ಪುಲ್ಲಿಂಗ ಏಕವಚನವನ್ನು ಸೂಚಿಸುವ ಅನ್ ಎಂಬುದಾಗಿ ಎರಡು ಪ್ರತ್ಯಯಗಳು ಬಂದಿವೆ.

ಇದು ಹಳೆಗನ್ನಡಕ್ಕೂ ಸಂಸ್ಕೃತಕ್ಕೂ ನಡುವೆ ವ್ಯಾಕರಣದ ಮೂಲ ತತ್ವದಲ್ಲೇನೇ ಇರುವ ವ್ಯತ್ಯಾಸ. ಎರಡು ಭಾಷೆಗಳ ನಡುವೆ ಇಂತಹ ಮೂಲಭೂತ ವ್ಯತ್ಯಾಸಗಳಿರಲು ಸಾಧ್ಯ, ಮತ್ತು ಇಂತಹ ವ್ಯತ್ಯಾಸಗಳನ್ನು ಅವುಗಳ ವ್ಯಾಕರಣ ನಿಯಮಗಳು ಪ್ರತಿಬಿಂಬಿಸುವುದು ಅವಶ್ಯ ಎಂಬುದನ್ನು

ಗ್ರಹಿಸಲು ಸಾಧ್ಯವಾಗದುದರಿಂದಾಗಿ, ಕೇಶಿರಾಜನು ಮೇಲೆ ಸೂಚಿಸಿದ ಹಾಗೆ, ಹಳೆಗನ್ನಡದ ಕಾಲಪ್ರತ್ಯಯಗಳನ್ನು 'ಆಗಮ'ಗಳೆಂದು ಕರೆಯಬೇಕಾಗಿದೆ.

ಸೂ. ೪೫ರಲ್ಲಿ ಕೇಶಿರಾಜನು 'ಪ್ರತ್ಯಯ' ಮತ್ತು 'ವಿಭಕ್ತಿ' ಇವೆರಡೂ ಪರ್ಯಾಯ ಪದಗಳು ಎಂಬ ಅಭಿಪ್ರಾಯ ಬರುವ ಹಾಗೆ ಬರೆದಿರುವುದು ಇನ್ನಷ್ಟು ಸಮಸ್ಯೆಗಳಿಗೆ ಕಾರಣವಾಗಿದೆ (ಬಿಳಿಗಿರಿ ೧೯೬೯:೧೨೨ ನೋಡಿ). ಗಳ್ ಮತ್ತು ದ, ದಪ, ವಗಳನ್ನು ಪ್ರತ್ಯಯಗಳೆಂದು ಕರೆಯದಿರಲು ಇದೂ ಒಂದು ಕಾರಣವಿರಬಹುದು. ಆದರೆ ಇಸು ಎಂಬುದನ್ನು (ಸೂ. ೬೪), ಮತ್ತು ತದ್ಧಿತ ಪ್ರಕರಣದಲ್ಲಿ ಬರುವ ಇಗ, ವಳ ಮೊದಲಾದುವನ್ನು (ಸೂ. ೨೧೮-೯) ಪ್ರತ್ಯಯಗಳೆಂದು ಕರೆದಿರುವುದು ಈ ಅಭಿಪ್ರಾಯಕ್ಕೆ ವಿರುದ್ಧವಾಗಿದೆ.

ಸಮಯವನ್ನು ಸೂಚಿಸುವ ದ, ದಪ, ವಗಳನ್ನು ಈ ರೀತಿ ಕೇಶಿರಾಜನು ಪ್ರತ್ಯಯಗಳೆಂದು ಪರಿಗಣಿಸದೆ ಆಗಮಗಳೆಂದು ಕರೆದುದರಿಂದ, ಇನ್ನೊಂದು ಸಮಸ್ಯೆಯನ್ನೂ ಎದುರಿಸಬೇಕಾಗಿದೆ. ಒಂದು ಕ್ರಿಯಾರೂಪದಲ್ಲಿ ಬರುವ ಕ್ರಿಯಾಪದದ (ಕ್ರಿಯಾಧಾತುವಿನ) ಸ್ವರೂಪ ಎಂತಹದು ಎಂಬುದನ್ನು ಸೂಚಿಸುವುದಕ್ಕಾಗಿ ಆತನು ಮಾಡಿದನ್, ಮಾಡುವನ್ ಎಂಬಂತಹ ಸಾಮಾನ್ಯ ರೂಪಗಳನ್ನು ಬಳಸುವ ಬದಲು, ಮಾಡನ್ ಎಂಬಂತಹ ಅಲ್ಲಗಳೆಯುವ ರೂಪಗಳನ್ನು ಬಳಸಬೇಕಾಗಿದೆ (ಸೂ. ೨೨೭)

ಯಾಕೆಂದರೆ, ಮಾಡಿದನ್ ಎಂಬುದರಿಂದ ಆಖ್ಯಾತ ಪ್ರತ್ಯಯವನ್ನು (ಅನ್ ಎಂಬುದನ್ನು) ತೆಗೆದಾಗ, ಮಾಡಿದ ಎಂಬುದು ಸಿಗುತ್ತದಲ್ಲದೆ ಮಾಡು ಸಿಗುವುದಿಲ್ಲ.

ಆದರೆ, ಈ ರೀತಿ ಅಲ್ಲಗಳೆಯುವ ಕ್ರಿಯಾರೂಪದಿಂದ ಧಾತುವಿನ ಸ್ವರೂಪವನ್ನು ನಿರ್ಧರಿಸಹೊರಟಲ್ಲಿ ಬೇರೆ ಹಲವು ಸಮಸ್ಯೆಗಳು ಕಾಣಿಸಿಕೊಳ್ಳುತ್ತವೆ; ಆದರೆ, ಈ ವಿಷಯವನ್ನು ಕೇಶಿರಾಜನು ಗಮನಿಸಿರುವ ಹಾಗೆ ತೋರುವುದಿಲ್ಲ.

ಉದಾಹರಣೆಗಾಗಿ, ಧಾತುಪ್ರಕರಣದಲ್ಲಿ ತರ್ ಮತ್ತು ಬರ್ ಎಂಬುದಾಗಿ ಎರಡು ಧಾತುಗಳನ್ನು ಹೆಸರಿಸಲಾಗಿದೆ; ಆದರೆ, ಇವನ್ನು ತಾರನ್ ಮತ್ತು ಬಾರನ್ ಎಂಬ ಅಲ್ಲಗಳೆಯುವ ರೂಪಗಳಿಂದ ಸಾಧಿಸಲು ಸಾಧ್ಯವಾಗದು. ತಾರನ್ ರೂಪದಿಂದ ಅನ್ ಪ್ರತ್ಯಯವನ್ನು ಕಳೆದರೆ ಉಳಿಯುವುದು ತಾರ್ ಅಲ್ಲದೆ ತರ್ ಅಲ್ಲ.

ಇದಲ್ಲದೆ, ಸೂ. ೨೪೯ರಲ್ಲಿ ಈ ಎರಡು ಅಲ್ಲಗಳೆಯುವ ಕ್ರಿಯಾರೂಪಗಳನ್ನು ಸಾಧಿಸಬೇಕಾದಾಗ, ತರ್ ಮತ್ತು ಬರ್ ಕ್ರಿಯಾಪದಗಳ ಮೊದಲ ಅಕಾರ ದೀರ್ಘವಾಗುತ್ತದೆಯೆಂದು ಹೇಳಿರುವುದನ್ನು ನೋಡಿದರೆ, ನಿಜಕ್ಕೂ ಅಲ್ಲಗಳೆಯುವ ಕ್ರಿಯಾರೂಪಗಳಿಂದ ಆಖ್ಯಾತ ಪ್ರತ್ಯಯವನ್ನು ತೆಗೆದು ಉಳಿಯುವ ಅಂಶ ಧಾತು ಎಂದುದು ೨೨೭ನೇ ಸೂತ್ರಕ್ಕೆ ಮಾತ್ರ ಸೀಮಿತವಾಗಿರುವ ಅಭಿಪ್ರಾಯವೆಂಬುದು ಸ್ಪಷ್ಟವಾಗುತ್ತದೆ.

ಕೇಶಿರಾಜನ ಈ ವಿಧಾನವನ್ನು ಬಳಸಿದಾಗ ಉಂಟಾಗುವ ಬೇರೆ ಕೆಲವು ಸಮಸ್ಯೆಗಳನ್ನು ಸೀತಾರಾಮಯ್ಯ (೧೯೭೯:೨೦೩) ವಿವರಿಸಿದ್ದಾರೆ.

### ೨.೨.೫ ಆಖ್ಯಾತ ಪ್ರತ್ಯಯಗಳಲ್ಲಿ ಲಿಂಗಭೇದ

ಹಳೆಗನ್ನಡ ಕ್ರಿಯಾರೂಪಗಳ ಕೊನೆಯಲ್ಲಿ ಬರುವ ಆಖ್ಯಾತ ಪ್ರತ್ಯಯಗಳು ಪುರುಷ ಮತ್ತು ವಚನ ಭೇದಗಳನ್ನು ಮಾತ್ರವಲ್ಲದೆ, ಪ್ರಥಮಪುರುಷದಲ್ಲಿ ಲಿಂಗ ಭೇದವನ್ನೂ ಸೂಚಿಸುತ್ತವೆ.

ಏಕವಚನದಲ್ಲಿ ಈ ಲಿಂಗಭೇದ ಪುಲ್ಲಿಂಗ, ಸ್ತ್ರೀಲಿಂಗ, ಮತ್ತು ನಪುಂಸಕ ಲಿಂಗ ಎಂಬುದಾಗಿದ್ದು, ಇದನ್ನು ಸೂಚಿಸುವುದಕ್ಕಾಗಿ ಅಮ್, ಅಳ್, ಮತ್ತು ಉದು ಎಂಬ ಮೂರು

ಪ್ರತ್ಯಯಗಳು ಬಳಕೆಯಾಗುತ್ತವೆ; ಬಹುವಚನದಲ್ಲಿ ಈ ಲಿಂಗಭೇದ ಮನುಷ್ಯ-ಮನುಷ್ಯೇತರ ಎಂಬುದಾಗಿದ್ದು, ಇದನ್ನು ಸೂಚಿಸುವು ದಕ್ಕಾಗಿ ಅರ್ ಮತ್ತು ಉವು ಎಂಬ ಎರಡು ಪ್ರತ್ಯಯಗಳು ಬಳಕೆಯಾಗುತ್ತವೆ (೯.೩ ನೋಡಿ).

ಆದರೆ, ಕೇಶಿರಾಜನು ಇವುಗಳಲ್ಲಿ ಏಕವಚನದ ಅಮ್ ಮತ್ತು ಬಹು ವಚನದ ಅರ್ ಎಂಬವುಗಳನ್ನು ಮಾತ್ರ ಪ್ರಥಮ ಪುರುಷದ ಆಖ್ಯಾತ ಪ್ರತ್ಯಯಗಳೆಂದು ಕರೆದು (ಸೂ. ೨೨೮), ಉಳಿದ ಪ್ರತ್ಯಯಗಳನ್ನು ಅವುಗಳ ಮೇಲೆ ಬರುವ 'ಆದೇಶ'ಗಳೆಂದು ಕರೆದಿದ್ದಾನೆ (ಸೂ. ೨೩೬-೭). ಇಲ್ಲೂ ಪ್ರತ್ಯಯ ಮತ್ತು ಆದೇಶಗಳ ನಡುವೆ ವ್ಯತ್ಯಾಸವೇ ಇಲ್ಲದಂತಾಗಿದೆ.

ಆತ ಹೀಗೆ ಮಾಡಿರುವುದಕ್ಕೂ ಸಂಸ್ಕೃತ ವ್ಯಾಕರಣದ ಮೂಲತತ್ವವನ್ನು ಹಳೆಗನ್ನಡದ ಮೇಲೆ ಹೊರಿಸಿರುವುದೇ ಕಾರಣ. ಸಂಸ್ಕೃತದ ಕ್ರಿಯಾರೂಪಗಳಲ್ಲಿ ಬರುವ ತಿಙ್ ಪ್ರತ್ಯಯಗಳು ಲಿಂಗಭೇದವನ್ನು ಸೂಚಿಸುವುದಿಲ್ಲ.

ಉದಾಹರಣೆಗಾಗಿ, ಪ್ರಥಮ ಪುರುಷ ಏಕವಚನದ ತಿ ಪ್ರತ್ಯಯ (ಗಚ್ಛತಿ, ಭವತಿ) ಲಿಂಗಭೇದವನ್ನು ಸೂಚಿಸಲಾರದು. ಅದು ಎಲ್ಲಾ ಲಿಂಗಗಳಲ್ಲೂ ಬದಲಾಗದೆ ಹಾಗೆಯೇ ಉಳಿಯುತ್ತದೆ ('ಹೋಗುತ್ತಾನೆ', 'ಹೋಗುತ್ತಾಳೆ' ಮತ್ತು 'ಹೋಗುತ್ತದೆ' ಎಂಬ ಮೂರು ಅರ್ಥಗಳಲ್ಲೂ ಸಂಸ್ಕೃತದಲ್ಲಿ ಗಚ್ಛತಿ ಎಂಬುದನ್ನೇ ಬಳಸಬೇಕಾಗುತ್ತದೆ).

ಕೇಶಿರಾಜನು ಸಂಸ್ಕೃತದ ಈ ನಿಯಮವನ್ನು ಹಾಗೆಯೇ ಹಳೆಗನ್ನಡಕ್ಕೂ ಅಳವಡಿಸಲು ಪ್ರಯತ್ನಿಸಿದ್ದಾನೆ; ಸಂಸ್ಕೃತದಲ್ಲಿರುವ ಹಾಗೆ, ಪುರುಷ ಮತ್ತು ವಚನ ಭೇದವನ್ನು ಸೂಚಿಸುವ ಪ್ರತ್ಯಯಗಳನ್ನು ಮಾತ್ರ ಆಖ್ಯಾತ ಪ್ರತ್ಯಯಗಳೆಂದು ಕರೆದು, ಪ್ರಥಮ ಪುರುಷದಲ್ಲಿ ಲಿಂಗ ಭೇದವನ್ನು ಸೂಚಿಸುವ ಪ್ರತ್ಯಯಗಳನ್ನು ಆದೇಶಗಳೆಂದು ಕರೆದಿದ್ದಾನೆ; ಎಂದರೆ, ಸಂಸ್ಕೃತದ ನಿಯಮಕ್ಕೆ ಹೊಂದಿಕೆಯಾಗದ ಹಳೆಗನ್ನಡದ ವೈಶಿಷ್ಟ್ಯವನ್ನು ಪ್ರತ್ಯಯಗಳ ಮೂಲಕ ವರ್ಣಿಸುವ ಬದಲು, ಆದೇಶಗಳ ಮೂಲಕ ವರ್ಣಿಸಲು ಪ್ರಯತ್ನಿಸಿದ್ದಾನೆ. ಇದರಿಂದಾಗಿ 'ಆದೇಶ'ವೆಂಬುದಕ್ಕೆ ವಿಚಿತ್ರವಾದ ಅರ್ಥ ಬಂದಿದೆ ಮಾತ್ರವಲ್ಲ, ಹಳೆಗನ್ನಡ ವ್ಯಾಕರಣವೂ ಅನವಶ್ಯಕವಾಗಿ ಹೆಚ್ಚು ಕ್ಲಿಷ್ಟವಾಗಿದೆ.

### ೨.೨.೬ ಗುಣಪದಗಳಲ್ಲಿ ಲಿಂಗಭೇದ

ಹಳೆಗನ್ನಡದಲ್ಲಿ ಗುಣಪದಗಳು ಬೇರೆಯೇ ಪದವರ್ಗದಲ್ಲಿ ಬರುತ್ತಿದ್ದು, ಅವುಗಳಿಂದ ನಾಮಪದಗಳನ್ನು ತಯಾರಿಸುವುದಕ್ಕಾಗಿ ಅವಕ್ಕೆ ಅನ್, ಅಳ್, ಅರ್, ಉದು ಮತ್ತು ಉವು ಎಂಬ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸಬೇಕಾಗುತ್ತದೆ (೫.೨.೧ ನೋಡಿ).

ಆದರೆ, ಸಂಸ್ಕೃತದಲ್ಲಿ ಗುಣಪದಕ್ಕೂ ನಾಮಪದಕ್ಕೂ ನಡುವೆ ವ್ಯತ್ಯಾಸವಿಲ್ಲ; ಅವುಗಳೊಂದಿಗೆ ಲಿಂಗ-ವಚನ ವ್ಯತ್ಯಾಸವನ್ನು ಸೂಚಿಸುವುದಕ್ಕಾಗಿ ಪ್ರತ್ಯಯಗಳೂ ಬರುವುದಿಲ್ಲ; ವಿಭಕ್ತಿ ಪ್ರತ್ಯಯಗಳ ರೂಪಭೇದಗಳ ಮೂಲಕವೇನೇ ಇಂತಹ ವ್ಯತ್ಯಾಸಗಳನ್ನು ಸೂಚಿಸಬೇಕಾಗುತ್ತದೆ.

ಉದಾಹರಣೆಗಾಗಿ, ಕೃಷ್ಣ 'ಕಪ್ಪು' ಪದ ಸಂಸ್ಕೃತದಲ್ಲಿ ಮೂರು ಲಿಂಗಗಳಲ್ಲೂ ಬರಬಲ್ಲ ನಾಮಪದವಾಗಿದ್ದು, ವಿಶಿಷ್ಟವಾದ ಒಂದು ಬಳಕೆಯಲ್ಲಿ ಅದು ಯಾವ ಲಿಂಗದಲ್ಲಿದೆ ಎಂಬುದನ್ನು ಅದರೊಂದಿಗೆ ಬರುವ ವಿಭಕ್ತಿಪ್ರತ್ಯಯಗಳ ಸ್ವರೂಪದಲ್ಲಿ ಮಾತ್ರವೇ ಕಾಣಲು ಸಾಧ್ಯ. ಉದಾಹರಣೆಗಾಗಿ, ಅದರ ದ್ವಿತೀಯಾ ವಿಭಕ್ತಿ ರೂಪ ಕೃಷ್ಣಂ ಎಂದಿದ್ದರೆ ಅದು ಪುಲ್ಲಿಂಗದಲ್ಲಿದೆಯೆಂದೂ, ಕೃಷ್ಣಾಂ ಎಂದಿದ್ದರೆ ಸ್ತ್ರೀಲಿಂಗದಲ್ಲಿದೆಯೆಂದೂ ತಿಳಿದುಕೊಳ್ಳಬಹುದು.

ಕೇಶಿರಾಜನು ಹಳೆಗನ್ನಡದ ಗುಣಪದಗಳನ್ನು ಸಂಸ್ಕೃತದ ಗುಣಪದಗಳ ಹಾಗೆ ವರ್ಣಿಸಲು ಪ್ರಯತ್ನಿಸಿದ್ದಾನೆ, ಮತ್ತು ಈ ಕಾರಣಕ್ಕಾಗಿ ಅವುಗಳೊಂದಿಗೆ ಬರುವ ಲಿಂಗ-ವಚನ ಪ್ರತ್ಯಯಗಳನ್ನು ಪ್ರತ್ಯಯಗಳೆಂದು ಪರಿಗಣಿಸದೆ ಆದೇಶಗಳೆಂದು ಪರಿಗಣಿಸಿದ್ದಾನೆ.

ಇದಲ್ಲದೆ, ಇಂತಹ 'ಗುಣವಚನ'ಗಳಲ್ಲಿ ನಪುಂಸಕ-ಏಕವಚನದ ರೂಪಗಳನ್ನು ಮೂಲರೂಪಗಳೆಂಬುದಾಗಿ ಕಲ್ಪಿಸಿಕೊಂಡು, ಅವುಗಳಿಂದ ಉಳಿದ ರೂಪಗಳನ್ನು ಪಡೆಯುವ ಪ್ರಯತ್ನವನ್ನು ಅವನು ನಡೆಸಿದ್ದಾನೆ. ಉದಾಹರಣೆಗಾಗಿ, ಕಿಱಿದು ಎಂಬುದರ ಕೊನೆಯ ದುವಿಗೆ ಅಕಾರವನ್ನು ಆದೇಶವಾಗಿ ಮಾಡುವ ಮೂಲಕ, ಆತನು ಕಿಱಿಯಂ ಎಂಬುದನ್ನು ಸಾಧಿಸಲು ಪ್ರಯತ್ನಿಸಿದ್ದಾನೆ (ಸೂ. ೧೬೩).

ಇದೇ ರೀತಿಯಲ್ಲಿ, ಅವನ್, ಆತನ್, ಅವರ್ ಮೊದಲಾದವುಗಳನ್ನು ಅದು ಎಂಬುದರಿಂದಲೂ, ಆವನ್, ಆವಳ್, ಆರ್ ಮೊದಲಾದುವನ್ನು ಆವುದು ಎಂಬುದರಿಂದಲೂ, ಬೇರೆ ಬೇರೆ ರೀತಿಯ ಆದೇಶಗಳ ಮೂಲಕ ಪಡೆದಿದ್ದಾನೆ (ಸೂ. ೧೬೧-೨). ಇಲ್ಲೂ ಆದೇಶ ಮತ್ತು ಪ್ರತ್ಯಯಗಳ ನಡುವೆ ವ್ಯತ್ಯಾಸವೇ ಇಲ್ಲವಾದ ಹಾಗಾಗಿದೆ.

ಸಂಸ್ಕೃತದಲ್ಲಿ ಹಳೆಗನ್ನಡದ ಹಾಗೆ ವಿಭಕ್ತಿ ಪ್ರತ್ಯಯಗಳಿಗಿಂತ ಭಿನ್ನವಾದ ಲಿಂಗ-ವಚನ ಪ್ರತ್ಯಯಗಳು ಇಂತಹ ಪದಗಳೊಂದಿಗೆ ಬರುವುದಿಲ್ಲವಾದ ಕಾರಣ, ಅವುಗಳ ವಿಭಕ್ತಿರೂಪಗಳಲ್ಲಿ ತೋರಿಬರುವ ವ್ಯತ್ಯಾಸಗಳನ್ನು ಆ ಭಾಷೆಯ ವ್ಯಾಕರಣದಲ್ಲಿ ಆಗಮ ಮತ್ತು ಆದೇಶಗಳೆಂಬ ಸಂಧಿನಿಯಮಗಳ ಮೂಲಕ ವಿವರಿಸಲಾಗುತ್ತದೆ. ಆದರೆ ಹಳೆಗನ್ನಡದಲ್ಲಿ ವಿಶಿಷ್ಟವಾದ ಲಿಂಗ-ವಚನ ಪ್ರತ್ಯಯಗಳಿದ್ದು, ಅವು ವಿಭಕ್ತಿ ಪ್ರತ್ಯಯಗಳಿಗಿಂತ ಭಿನ್ನವಾಗಿವೆ. ಹಾಗಾಗಿ, ಗುಣವಚನ, ಸರ್ವನಾಮ, ಸಂಖ್ಯೆ ಮೊದಲಾದವುಗಳಲ್ಲಿ ಕಾಣಿಸುವ ಲಿಂಗ-ವಚನ ಪ್ರತ್ಯಯಗಳನ್ನು ಆಗಮ ಇಲ್ಲವೇ ಆದೇಶಗಳೆಂದು ಪರಿಗಣಿಸುವುದು ಹಳೆಗನ್ನಡದ ಮಟ್ಟಿಗೆ ಉಚಿತವಲ್ಲ.

### ೨.೩ ವ್ಯಾಕರಣ ಸಂಜ್ಞೆಗಳು

ವ್ಯಾಕರಣಗಳಲ್ಲಿ ಹಲವು ರೀತಿಯ ಸಂಜ್ಞೆಗಳನ್ನು ಬಳಸುವ ಅವಶ್ಯಕತೆಯಿದ್ದು, ಅವುಗಳಲ್ಲಿ ಕೆಲವು ಒಂದು ಭಾಷೆಯ ವ್ಯಾಕರಣಕ್ಕಷ್ಟೇ ಸೀಮಿತವಾಗಿರುತ್ತವೆ; ಅವು ಆ ಭಾಷೆಯ ಪದ ಇಲ್ಲವೇ ಪ್ರತ್ಯಯಗಳ ಸ್ವರೂಪವನ್ನವಲಂಬಿಸಿರಬಹುದು, ಇಲ್ಲವೇ ಆ ಭಾಷೆಯ ಸಂಧಿನಿಯಮಗಳ ಸ್ವರೂಪವನ್ನವಲಂಬಿಸಿರಬಹುದು.

ಇಂತಹ ಸಂಜ್ಞೆಗಳನ್ನು ಹಾಗೆಯೇ ಇನ್ನೊಂದು ಭಾಷೆಯ ವ್ಯಾಕರಣದಲ್ಲಿ ಬಳಸಲು ಸಾಧ್ಯವಾಗದು. ಹಳೆಗನ್ನಡ ವೈಯಾಕರಣಿಗಳು ಇಂತಹ ಹಲವು ಸಂಜ್ಞೆಗಳನ್ನು ಅವು ತಮ್ಮ ವ್ಯಾಕರಣಕ್ಕೆ ಅವಶ್ಯವೋ ಅಲ್ಲವೋ, ತಮ್ಮ ವ್ಯಾಕರಣಕ್ಕೆ ಹೊಂದಿಕೊಳ್ಳುತ್ತವೆಯೋ ಇಲ್ಲವೋ ಎಂಬುದನ್ನು ಪರಿಶೀಲಿಸಲು ಹೋಗದೆ ಹಾಗೆಯೇ ಬಳಸಿಕೊಂಡಿದ್ದಾರೆ.

### ೨.೩.೧ ಸಂಕ್ಷಿಪ್ತ ರೂಪಗಳು

ಸಂಸ್ಕೃತ ವ್ಯಾಕರಣದಲ್ಲಿ ಬರುವ ಹಲವು ಸಂಜ್ಞೆಗಳು ಪ್ರತ್ಯಯಗಳ ಇಲ್ಲವೇ ಪದಗಳ ಪಟ್ಟಿಯನ್ನು ಸಂಕ್ಷಿಪ್ತವಾಗಿ ಸೂಚಿಸುವುದಕ್ಕಾಗಿ ತಯಾರಿಸಿರುವ ಸಂಕೇತಗಳು. ಅಂತಹ ಪ್ರತ್ಯಯ ಇಲ್ಲವೇ ಪದಗಳನ್ನು ಬಳಸದಿರುವ ಬೇರೊಂದು ಭಾಷೆಯ ವ್ಯಾಕರಣದಲ್ಲಿ ಅವಕ್ಕೆ ಯಾವ

ಸ್ಥಾನವೂ ಇಲ್ಲ. ಆದರೆ, ಹಳೆಗನ್ನಡದ ವೈಯಾಕರಣಿಗಳು ಇಂತಹ ಸಂಜ್ಞೆಗಳನ್ನೂ ತಮ್ಮ ವ್ಯಾಕರಣಗಳಲ್ಲಿ ಬಳಸಿಕೊಂಡಿದ್ದಾರೆ.

ಉದಾಹರಣೆಗಾಗಿ, ಸಂಸ್ಕೃತದ ನಾಮಪದಗಳ ಅನಂತರ ಸು, ಔ, ಜಸ್, ಅಂ, ಔಟ್, ಶಸ್ ಮೊದಲಾದ ಒಟ್ಟು ೨೧ ವಿಭಕ್ತಿ ಪ್ರತ್ಯಯಗಳು ಬರಲು ಸಾಧ್ಯವಿದ್ದು (ಅ.೩ ನೋಡಿ), ಇವನ್ನೆಲ್ಲ ಚುಟುಕಾಗಿ ಸೂಚಿಸಲು ಸುಪ್ ಸಂಜ್ಞೆಯನ್ನು ಬಳಸಲಾಗಿದೆ. ಇದು ಈ ಪ್ರತ್ಯಯಗಳ ಪಟ್ಟಿಯಲ್ಲಿ ಮೊದಲನೆಯ ದಾಗಿರುವ ಸು ಪ್ರತ್ಯಯದೊಂದಿಗೆ ಅದೇ ಪಟ್ಟಿಯ ಕೊನೆಯ ಪ್ರತ್ಯಯವಾದ ಸುಪ್ ಎಂಬುದರ ಕೊನೆಯ ಅಕ್ಷರವನ್ನು ಸೇರಿಸಿ ತಯಾರಿಸಿದ ಸಂಜ್ಞೆ.

ಇದೇ ರೀತಿಯಲ್ಲಿ, ಕ್ರಿಯಾಪದಗಳ ಅನಂತರ ತಿಪ್, ತಸ್ ಮೊದಲಾದ ಪ್ರತ್ಯಯಗಳು ಬರಲು ಸಾಧ್ಯವಿದ್ದು, ಇವನ್ನೆಲ್ಲ ಚುಟುಕಾಗಿ ಸೂಚಿಸಲು ತಿಙ್ ಸಂಜ್ಞೆಯನ್ನು ಬಳಸಲಾಗಿದೆ. ಇದು ಈ ಪ್ರತ್ಯಯಗಳ ಪಟ್ಟಿಯಲ್ಲಿ ಮೊದಲನೆಯದಾಗಿರುವ ತಿಪ್ ಪ್ರತ್ಯಯದ ಮೊದಲನೆಯ ಅಕ್ಷರದೊಂದಿಗೆ ಕೊನೆಯದಾಗಿರುವ ಮಹಿಙ್ ಪ್ರತ್ಯಯದ ಕೊನೆಯ ಅಕ್ಷರವನ್ನು ಸೇರಿಸಿ ತಯಾರಿಸಿದ ಸಂಜ್ಞೆ.

ಹಳೆಗನ್ನಡದ ನಾಮಪದ ಮತ್ತು ಕ್ರಿಯಾಪದಗಳ ಅನಂತರ ಇವಕ್ಕಿಂತ ತೀರ ಬೇರಾಗಿರುವ ಪ್ರತ್ಯಯಗಳು ಬಳಕೆಯಾಗುತ್ತವೆ: ನಾಮಪದಗಳ ಅನಂತರ ಮ್, ಅಮ್, ಇಮ್ ಮೊದಲಾದ ಪ್ರತ್ಯಯಗಳೂ, ಕ್ರಿಯಾಪದಗಳ ಅನಂತರ ಅಮ್, ಅರ್, ಅಯ್, ಇರ್ ಮೊದಲಾದ ಪ್ರತ್ಯಯಗಳೂ ಬರುವುವೆಂದು ಕೇಶಿರಾಜನು (ಸೂ. ೧೦೩, ೨೨೮) ಹೇಳಿರುವುದನ್ನು ಇಲ್ಲಿ ಗಮನಿಸಬಹುದು. ಹಾಗಾಗಿ, ಮೇಲೆ ಕೊಟ್ಟಿರುವ ಸಂಸ್ಕೃತ ವ್ಯಾಕರಣದ ಸುಪ್ ಮತ್ತು ತಿಙ್ ಸಂಜ್ಞೆಗಳನ್ನಾಗಲಿ, ಇಲ್ಲವೇ ಅವನ್ನು ಬಳಸಿ ರಚಿಸಿದ ಸುಬಂತ ಮತ್ತು ತಿಙಂತ ಪದಗಳನ್ನಾಗಲಿ ಹಾಗೆಯೇ ಹಳೆಗನ್ನಡ ವ್ಯಾಕರಣದಲ್ಲಿ ಬಳಸುವುದು ಉಚಿತವಾಗಲಾರದು.

ಆದರೆ, ಭಟ್ಟಾಕಳಂಕನು ತನ್ನ ವ್ಯಾಕರಣ(ಶಬ್ದಾನುಶಾಸನ)ದಲ್ಲಿ ವಿಭಕ್ತಿ ಪ್ರತ್ಯಯಗಳನ್ನು ಸೂಚಿಸಲು ಸುಪ್ ಸಂಜ್ಞೆಯನ್ನೂ (ಸೂ. ೨೦೨), ಆಖ್ಯಾತ ಪ್ರತ್ಯಯಗಳನ್ನು ಸೂಚಿಸಲು ತಿಙ್ ಸಂಜ್ಞೆಯನ್ನೂ (ಸೂ. ೪೪೬) ಹಾಗೆಯೇ ಬಳಸಿದ್ದಾನೆ. ಹಳೆಗನ್ನಡದಲ್ಲಿ ಇಂತಹ ಸಂಜ್ಞೆಗಳನ್ನು ಬಳಸಬೇಕಿದ್ದರೂ ಅವನ್ನು ಹಳೆಗನ್ನಡದ ಪ್ರತ್ಯಯಗಳಿಂದ (ಅವುಗಳ ಮೊದಲ ಮತ್ತು ಕೊನೆಯ ಅಕ್ಷರಗಳನ್ನು ಒಟ್ಟುಸೇರಿಸಿ) ತಯಾರಿಸಿದ್ದರೆ ಒಳ್ಳೆಯದಿತ್ತು.

ಹಳೆಗನ್ನಡ ವೈಯಾಕರಣಿಗಳ ಮೇಲೆ ಸಂಸ್ಕೃತ ವ್ಯಾಕರಣ ಎಂತಹ ಪ್ರಭಾವವನ್ನು ಬೀರಿತ್ತು ಎಂಬುದನ್ನು ಈ ವಿಷಯ ಸ್ಪಷ್ಟಪಡಿಸುತ್ತದೆ.

### ೨.೩.೨ ಕಾರಕಗಳು

ಸಂಸ್ಕೃತದಲ್ಲಿ ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧಗಳಿಗೂ ವಿಭಕ್ತಿ ಪ್ರತ್ಯಯಗಳಿಗೂ ನಡುವೆ ನೇರವಾದ ಹೊಂದಾಣಿಕೆಯಿಲ್ಲವಾದ ಕಾರಣ, ಅಂತಹ ಸಂಬಂಧಗಳನ್ನು ಸೂಚಿಸಲು 'ಕಾರಕ'ಗಳೆಂಬ ಕೆಲವು ವ್ಯಾಕರಣ ಸಂಬಂಧಗಳನ್ನು ಕಲ್ಪಿಸಿಕೊಳ್ಳಬೇಕಾಗಿದೆ (ಅ.೬ ನೋಡಿ).

ಆದರೆ ಹಳೆಗನ್ನಡದಲ್ಲಿ ನಾಮಪದ ಮತ್ತು ಕ್ರಿಯಾಪದಗಳ ನಡುವಿನ ಸಂಬಂಧಕ್ಕೂ ವಿಭಕ್ತಿ ಪ್ರತ್ಯಯಗಳಿಗೂ ನಡುವೆ ಹೆಚ್ಚು ಕಡಿಮೆ ನೇರವಾದ ಹೊಂದಾಣಿಕೆಯಿದೆ; ಹಾಗಾಗಿ, ಇಂತಹ ಕಲ್ಪಿತ ಸಂಬಂಧಗಳ ಅವಶ್ಯಕತೆ ಹಳೆಗನ್ನಡ ವ್ಯಾಕರಣಕ್ಕಿಲ್ಲ. ಹೀಗಿದ್ದರೂ, ಸಂಸ್ಕೃತದಲ್ಲಿ

ಕಾರಕಗಳ ಬಳಕೆಯಾಗಿರುವುದನ್ನು ಗಮನಿಸಿ, ಹಳೆಗನ್ನಡದ ವೈಯಾಕರಣಿಗಳು ಅವನ್ನು ತಮ್ಮ ವ್ಯಾಕರಣಗಳಲ್ಲೂ ಬಳಸಿದ್ದಾರೆ.

ಇದಲ್ಲದೆ, ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧಗಳನ್ನು ಹಳೆಗನ್ನಡ ಸಂಸ್ಕೃತಕ್ಕಿಂತ ತೀರ ಭಿನ್ನವಾದ ರೀತಿಯಲ್ಲಿ ವಿಭಜಿಸುತ್ತದೆ; ಹಾಗಾಗಿ, ಕಾರಕಗಳೆಂಬ ವ್ಯಾಕರಣ ಸಂಬಂಧಗಳನ್ನು ಹಳೆಗನ್ನಡ ವ್ಯಾಕರಣದಲ್ಲಿ ಬಳಸುವುದಿದ್ದರೂ ಅವು ಸಂಸ್ಕೃತದ ಕಾರಕಗಳಿಂದ ತೀರ ಭಿನ್ನವಾಗಿರುವ ಅವಶ್ಯಕತೆಯಿದೆ. ಹಳೆಗನ್ನಡದ ವೈಯಾಕರಣಿಗಳು ಇದನ್ನು ಗಮನಿಸದೆ ಸಂಸ್ಕೃತದ ಕಾರಕಗಳೆಲ್ಲವೂ ಹಳೆಗನ್ನಡದಲ್ಲೂ ಇರಬೇಕೆಂದು ತೀರ್ಮಾನಿಸಿ, ಅವನ್ನು ಸೂಚಿಸುವುದಕ್ಕಾಗಿ ಹಳೆಗನ್ನಡದಲ್ಲಿ ವಿಭಕ್ತಿ ಪ್ರತ್ಯಯಗಳನ್ನು ಹುಡುಕಲು ಹೊರಟಿದ್ದಾರೆ.

ಉದಾಹರಣೆಗಾಗಿ, ಅತ್ತಣಿಂ ಎಂಬ ವಾಕ್ಯಾಂಶವನ್ನು ಇವರು ಒಂದು ವಿಭಕ್ತಿ ಪ್ರತ್ಯಯವೆಂದು ಕರೆದಿರುವುದು (ಭಟ್ಟಾಕಳಂಕ, ಸೂ. ೨೨೦ ನೋಡಿ) ಹಳೆಗನ್ನಡದಲ್ಲಿ 'ಅಪಾದಾನ' ಕಾರಕವನ್ನು ಸೂಚಿಸಲು 'ಕರಣ'ವನ್ನು ಸೂಚಿಸುವ ಇಂ ಪ್ರತ್ಯಯಕ್ಕಿಂತ ಭಿನ್ನವಾದ ಪ್ರತ್ಯಯವಿಲ್ಲದಿರುವುದೇ ಕಾರಣ. ಆದರೆ, ನಿಜಕ್ಕೂ ಅತ್ತಣಿಂ ಎಂಬುದು ಒಂದು ಪ್ರತ್ಯಯವೇ ಅಲ್ಲ; ಅದು ಅತ್ತಣ ಎಂಬ ಸರ್ವನಾಮ ರೂಪಕ್ಕೆ ಇಂ ಎಂಬ ವಿಭಕ್ತಿ ಪ್ರತ್ಯಯವನ್ನು ಸೇರಿಸಿ ರಚಿಸಿರುವ ಪದರೂಪ.

ಕೇಶಿರಾಜನು ಬಹುಶಃ ಈ ಸಮಸ್ಯೆಯನ್ನು ಗಮನಿಸಿ, ಈ ಪ್ರತ್ಯಯವನ್ನು ಅತ್ ಎಂಬುದಾಗಿ ನಿರೂಪಿಸಿದ್ದಾನೆ (ಸೂ. ೧೦೩). ಆದರೆ ಮುಂದೆ ಸೂ. ೧೨೬ರಲ್ಲಿ ಈ ಪ್ರತ್ಯಯಕ್ಕೆ ಅತ್ತಣಿಂ ಎಂಬ 'ನಿಜರೂಪ'ವಿದೆಯೆಂದು ಮತ್ತು ಇದರೊಂದಿಗೆ ತೃತೀಯೆಯ ಇಂ, ಇಂದಂ ಮತ್ತು ಇಂದೆ ಎಂಬವು ಬರುವುವೆಂದು ಆತ ಹೇಳಬೇಕಾಗಿದೆಯಾದ ಕಾರಣ, ಸಮಸ್ಯೆ ಬಗೆಹರಿದಿಲ್ಲ. ಪಂಚಮೀ ವಿಭಕ್ತಿ ಪ್ರತ್ಯಯದಲ್ಲಿ ತೃತೀಯಾ ವಿಭಕ್ತಿ ಪ್ರತ್ಯಯಕ್ಕೆ ಏನು ಕೆಲಸ?

### ೨.೩.೩ ಉಪಯೋಗಿಸದ ಸಂಜ್ಞೆಗಳು

ಹಳೆಗನ್ನಡದ ವೈಯಾಕರಣಿಗಳು ಬೇರೆ ಕೆಲವು ಸಂಜ್ಞೆಗಳನ್ನು ತಮ್ಮ ವ್ಯಾಕರಣದಲ್ಲಿ ಬಳಸುವ ಸಂದರ್ಭವಿಲ್ಲದಿದ್ದರೂ ಅವು ಸಂಸ್ಕೃತ ವ್ಯಾಕರಣದಲ್ಲಿ ಬಳಕೆಯಾಗಿವೆ ಎಂಬ ಒಂದು ಕಾರಣಕ್ಕಾಗಿ ಮಾತ್ರ ಅವನ್ನು ತಮ್ಮ ವ್ಯಾಕರಣಗಳಲ್ಲೂ ಉದ್ಧರಿಸಿ ವಿವರಿಸಲು ಪ್ರಯತ್ನಿಸಿದ್ದಾರೆ.

ಉದಾಹರಣೆಗಾಗಿ, ಕೇಶಿರಾಜನು ಉದ್ಧರಿಸಿ ವಿವರಿಸಿರುವ ಸಮಾನ, ಸವರ್ಣ (ಅನುಲೋಮ–ವಿಲೋಮ), ನಾಮಿ ಮೊದಲಾದ ಹಲವು ಸಂಜ್ಞೆಗಳಿಗೆ ಅವನ ಹಳೆಗನ್ನಡ ವ್ಯಾಕರಣದಲ್ಲಿ ಯಾವ ಕೆಲಸವೂ ಇಲ್ಲ (ಬಿಳಿಗಿರಿ ೧೯೬೯:೩೭ ನೋಡಿ).

ಸಂಸ್ಕೃತ ವ್ಯಾಕರಣದಲ್ಲಿ ಅ–ಆ, ಇ–ಈ, ಉ–ಊ, ಋ–ೠ ಎಂಬ ನಾಲ್ಕು ಸ್ವರಗಳ ಜೋಡಿಗಳನ್ನು ಸವರ್ಣಗಳೆಂದು ಕರೆಯಲಾಗಿದೆ; ಈ ಸಂಜ್ಞೆಯಿಂದ ಆ ವ್ಯಾಕರಣಕ್ಕಿರುವ ಪ್ರಯೋಜನವೇನೆಂದರೆ, ಅದರ ಮೂಲಕ ಸಂಸ್ಕೃತಕ್ಕೆ ಬೇಕಾಗುವ ಹಲವು ಸಂಧಿ ನಿಯಮಗಳನ್ನು ಸುಲಭವಾಗಿ ವಿವರಿಸಲು ಸಾಧ್ಯವಾಗುತ್ತದೆ, ಮತ್ತು ಅಂತಹ ನಿಯಮಗಳನ್ನೆಲ್ಲ ಒಟ್ಟಿಗೆ 'ಸವರ್ಣ ದೀರ್ಘ'ವೆಂಬ ಹೆಸರಿನಿಂದ ಕರೆಯಲು ಸಾಧ್ಯವಾಗುತ್ತದೆ.

ಸವರ್ಣ ಜೋಡಿಗಳಲ್ಲಿರುವ ಸ್ವರಗಳಲ್ಲಿ ಯಾವುದಾದರೂ ಒಂದರ ಅನಂತರ ಅದೇ ಸ್ವರ ಇಲ್ಲವೇ ಜೋಡಿಯ ಇನ್ನೊಂದು ಸ್ವರ ಬಂದಿದೆಯಾದರೆ, ಅವೆರಡರ ಬದಲು ಉದ್ದ (ದೀರ್ಘ) ಸ್ವರ ಬರುತ್ತದೆಯೆಂಬುದೇ ಈ ನಿಯಮದ ಸಾರ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಸೇರಿಕೆಗಳನ್ನು ಗಮನಿಸಬಹುದು.

| | | |
|---|---|---|
| (೧ಕ) | ಅತ್ರ+ಅಸ್ತಿ | ಅತ್ರಾಸ್ತಿ |
| | ಅತ್ರ+ಆಸೀತ್ | ಅತ್ರಾಸೀತ್ |
| | ಯದಾ+ಅಸ್ತಿ | ಯದಾಸ್ತಿ |
| (೧ಖ) | ಅಸ್ತಿ+ಇಹ | ಅಸ್ತೀಹ |
| | ನದೀ+ಇಹ | ನದೀಹ |
| (೧ಗ) | ಗುರು+ಉಪದೇಶ | ಗುರೂಪದೇಶ |
| | ಸಾಧು+ಊಚುಃ | ಸಾಧೂಚುಃ |

(೧ಕ)ದಲ್ಲಿ ಕೊಟ್ಟಿರುವ ಸೇರಿಕೆಗಳಲ್ಲಿ ಅ–ಆ ಜೋಡಿಯ ಸ್ವರಗಳೆರಡು ಒಟ್ಟು ಸೇರಿ ಉದ್ದಸ್ವರ (ಆ ಎಂಬುದು) ಸಿದ್ಧವಾಗಿದೆ; ಇದಕ್ಕೆ ಬದಲು, (೧ಖ)ದಲ್ಲಿ ಕೊಟ್ಟಿರುವ ಸೇರಿಕೆಗಳಲ್ಲಿ ಇ–ಈ ಜೋಡಿಯೂ, (೧ಗ)ದಲ್ಲಿ ಕೊಟ್ಟಿರುವ ಸೇರಿಕೆಗಳಲ್ಲಿ ಉ–ಊ ಜೋಡಿಯೂ ಈ ರೀತಿ ಸಂಧಿಯಾಗಿರುವುದನ್ನು ಕಾಣಬಹುದು.

ಕೇಶಿರಾಜನು ಈ ಜೋಡಿಗಳೊಂದಿಗೆ ಹಳೆಗನ್ನಡದಲ್ಲಿ ಕಾಣಿಸುವ (ಮತ್ತು ಸಂಸ್ಕೃತದಲ್ಲಿ ಕಾಣಿಸದ) ಎ–ಏ ಮತ್ತು ಒ–ಓ ಜೋಡಿಗಳಿಗೂ ಸವರ್ಣ ಸಂಜ್ಞೆ ಬರುತ್ತದೆಯೆಂದು ತಿಳಿಸಿದ್ದಾನೆ (ಸೂ. ೧೮). ಆದರೆ ಕನ್ನಡದ ಸಂಧಿ ನಿಯಮಗಳು ಸಂಸ್ಕೃತದ ಸಂಧಿ ನಿಯಮಗಳಿಂದ ತೀರ ಭಿನ್ನವಾಗಿವೆಯಾದ ಕಾರಣ, ಅವನ್ನು ವಿವರಿಸುವಲ್ಲಿ ಈ ಸಂಜ್ಞೆಯಿಂದ ಯಾವ ಪ್ರಯೋಜನವೂ ಇಲ್ಲ.

ನಿಜಕ್ಕೂ ಹಳೆಗನ್ನಡದ ಸಂಧಿನಿಯಮಗಳಲ್ಲಿ ಗಿಡ್ಡ (ಹ್ರಸ್ವ) ಮತ್ತು ಉದ್ದ (ದೀರ್ಘ) ಸ್ವರಗಳೆರಡೂ ಒಂದೇ ರೀತಿಯಲ್ಲಿ ಬದಲಾಗುವುದಿಲ್ಲ. ಗಿಡ್ಡ ಸ್ವರಗಳು ಲೋಪಗೊಳ್ಳುತ್ತವೆ; ಆದರೆ, ಉದ್ದ ಸ್ವರಗಳು ಲೋಪಗೊಳ್ಳುವುದಿಲ್ಲ. ಕೇಶಿರಾಜನೇ ಹೇಳಿರುವ ಹಾಗೆ (ಸೂ. ೬೫) ಈ+ಇದು ಎಂಬುದು ಈವಿದು ಎಂದಾಗುತ್ತದಲ್ಲದೆ ಈದು ಎಂದಾಗುವುದಿಲ್ಲ. ಹಾಗಾಗಿ, 'ಸವರ್ಣ' ಎಂಬ ಈ ಪಾರಿಭಾಷಿಕ ಪದ ಹಳೆಗನ್ನಡದ ವ್ಯಾಕರಣಕ್ಕೆ ಅನವಶ್ಯಕ ಮಾತ್ರವಲ್ಲ, ಪ್ರತಿಕೂಲವಾಗಿದೆ.

'ನಾಮಿ' ಎಂಬ ಇನ್ನೊಂದು ಪಾರಿಭಾಷಿಕ ಪದದ ಅವಶ್ಯಕತೆಯೂ ಹಳೆಗನ್ನಡಕ್ಕಿಲ್ಲ. ಸಂಸ್ಕೃತದಲ್ಲಿ ಅಕಾರ ಮತ್ತು ಆಕಾರಗಳನ್ನು ಬಿಟ್ಟು ಇತರ ಸ್ವರಗಳನ್ನು ನಾಮಿಗಳೆಂದು ಕರೆಯಲಾಗಿದೆ; ಈ ಎರಡು ಸ್ವರಗಳನ್ನು ಬಿಟ್ಟು ಇತರ ಸ್ವರಗಳ ಸಾಹಚರ್ಯದಲ್ಲಿರುವ ಸಕಾರ ಸಂಸ್ಕೃತದಲ್ಲಿ ಷಕಾರವಾಗುತ್ತದೆ (ಹರಿಷು, ಗುರುಷು, ಕರ್ತೃಷು, ನೌಷು) ಎಂಬ ನಿಯಮವೇ ಈ ಪದದ ಬಳಕೆಗೆ ಆಧಾರ. ಆದರೆ ಹಳೆಗನ್ನಡದ ಸಂಧಿಕಾರ್ಯಗಳಲ್ಲಿ ಈ ಪದದ ಬಳಕೆಗೆ ಯಾವ ಆಧಾರವೂ ಇಲ್ಲ (ವೆಂಕಟಾಚಲ ಶಾಸ್ತ್ರೀ ೧೯೯೪:೯–೧೦ ನೋಡಿ).

## ೨.೪ ಪ್ರತ್ಯಯ ಮತ್ತು ಪದರೂಪ

ಪದಗಳನ್ನು ಮತ್ತು ಪದರೂಪಗಳನ್ನು ವಿವರಿಸುವಾಗ ಆದಷ್ಟು ಮಟ್ಟಿಗೆ ಅವುಗಳ ಒಳರಚನೆಯೇನು ಎಂಬುದನ್ನು ವಿವರಿಸಿ ಹೇಳುವುದು ವ್ಯಾಕರಣದ ಉದ್ದೇಶ. ಹಳೆಗನ್ನಡ ವೈಯಾಕರಣಿಗಳು 'ಪ್ರತ್ಯಯ'ಗಳೆಂದು ಕರೆದಿರುವ ಕೆಲವು ವಾಕ್ಯಾಂಶಗಳಲ್ಲಿ ಒಂದಕ್ಕಿಂತ ಜಾಸ್ತಿ ಪ್ರತ್ಯಯಗಳು ಸೇರಿರುವುದನ್ನು ಮತ್ತು ಇನ್ನು ಕೆಲವು ವಾಕ್ಯಾಂಶಗಳಲ್ಲಿ ಪ್ರತ್ಯಯಗಳೊಂದಿಗೆ ಇಡೀ ಪದರೂಪಗಳೇ ಸೇರಿಕೊಂಡಿರುವುದನ್ನೂ ಕಾಣಬಹುದು. ನಿಜಕ್ಕೂ ಇವು ಪ್ರತ್ಯಯಗಳಲ್ಲ.

ಇವುಗಳ ಒಳರಚನೆಯೆಂತಹದು ಎಂಬುದನ್ನು ವ್ಯಾಕರಣಗಳು ಸ್ಪಷ್ಟವಾಗಿ ವಿವರಿಸುವ ಅವಶ್ಯಕತೆಯಿದೆ.

ಉದಾಹರಣೆಗಾಗಿ, ವರ್ತಮಾನ ಕಾಲವನ್ನು ಸೂಚಿಸುವುದಕ್ಕಾಗಿ ಬರುವ ದಪ ಎಂಬುದು ಒಂದು ಪ್ರತ್ಯಯವಲ್ಲ. ಹೀಗಿದ್ದರೂ ಭಟ್ಟಾಕಳಂಕನು ಇದನ್ನು ಪ್ರತ್ಯಯವೆಂದು ಕರೆದಿದ್ದಾನೆ (ಸೂ. ೪೪೭), ಮತ್ತು ಕೇಶಿರಾಜನು (ಸೂ. ೨೩೨) ಆಗಮವೆಂದು ಕರೆದಿದ್ದಾನೆ. ನಿಜಕ್ಕೂ ಇದರಲ್ಲಿ ಭೂತ ಮತ್ತು ಭವಿಷ್ಯತ್‌ಗಳೆಂಬ ಎರಡು ಪ್ರತ್ಯಯಗಳ ಸೇರಿಕೆಯಿದೆ. ಇದಲ್ಲದೆ, ಈ ಎರಡನೆಯ ಭವಿಷ್ಯತ್ ಪ್ರತ್ಯಯದಲ್ಲಿ ಆಗು ಎಂಬ ಕ್ರಿಯಾಪದದ ಪದರೂಪವೂ ಅಡಗಿಕೊಂಡಿದೆ (ವಿವರಗಳಿಗೆ ೬.೨.೧ ನೋಡಿ).

ಮೇಲೆ (೨.೩.೨)ರಲ್ಲಿ ಸೂಚಿಸಿದ ಹಾಗೆ ಅತ್ತಣಿಂ ಎಂಬುದನ್ನು (ಮರದತ್ತಣಿಂ, ಕೆಙೆಯತ್ತಣಿಂ) ಒಂದು ವಿಭಕ್ತಿ ಪ್ರತ್ಯಯವೆಂದು ಪರಿಗಣಿಸಿರುವುದು ಮೇಲೆ ವಿವರಿಸಿದ ಪರಿಸ್ಥಿತಿಗೆ ಇನ್ನೊಂದು ಉದಾಹರಣೆ. ನಿಜಕ್ಕೂ ಇದು ಅತ್ತ ಸರ್ವನಾಮದ ಸಂಬಂಧಿಸುವ ರೂಪಕ್ಕೆ (ಅತ್ತಣ ಎಂಬುದಕ್ಕೆ) ಇಂ ಪ್ರತ್ಯಯವನ್ನು ಸೇರಿಸಿ ತಯಾರಿಸಿದ ಪದರೂಪ. ಇದನ್ನು ನಾಮಪದದ ಸಂಬಂಧಿಸುವ ರೂಪದೊಂದಿಗೆ ಬಳಸಲಾಗುತ್ತದೆ (ಮರದತ್ತಣಿಂ ಎಂಬುದರಲ್ಲಿ ಅತ್ತಣಿಂ ಪದವನ್ನು ಮರದ ಎಂಬುದಕ್ಕೆ ಸೇರಿಸಲಾಗಿದೆ).

ಕೇಶಿರಾಜನು ಶಬ್ದಮಣಿದರ್ಪಣದ ೧೬೨ನೇ ಸೂತ್ರದಲ್ಲಿ ಆವುದು ಎಂಬ ಇಡೀ ಪದಕ್ಕೇನೇ ಪುಲ್ಲಿಂಗ ಏಕವಚನದಲ್ಲಿ ಆವನ್ ಎಂಬುದು, ಮತ್ತು ಪುಲ್ಲಿಂಗ ಬಹುವಚನದಲ್ಲಿ ಆರ್ ಎಂಬುದು 'ಆದೇಶ'ವಾಗಿ ಬರುತ್ತದೆ ಎಂದು ಹೇಳಿದ್ದಾನೆ. ಆತನು ಈ ರೀತಿ ಹೇಳುವಾಗ, ಈ ಮೂರು ರೂಪಗಳಲ್ಲೂ ಆ ಎಂಬುದು ಬದಲಾಗದೆ ಉಳಿದಿದೆ ಎಂಬುದನ್ನು ಗಮನಿಸಿದ ಹಾಗಿಲ್ಲ.

ನಿಜಕ್ಕೂ ಇಲ್ಲಿ ಆ ಎಂಬುದು ಅನಿಶ್ಚಿತತೆಯನ್ನು ಸೂಚಿಸುವ ಸರ್ವನಾಮದ (ಸರ್ವಪದದ) ಒಂದು ಅಂಗ. ಅದರೊಂದಿಗೆ ಅನ್, ಅರ್, ಉದು ಮೊದಲಾದ ಲಿಂಗ-ವಚನಗಳನ್ನು ಸೂಚಿಸುವ ಪ್ರತ್ಯಯಗಳಲ್ಲೊಂದನ್ನು ಬಳಸುವ ಮೂಲಕ ಆ ಸರ್ವನಾಮದ ವ್ಯಾಪ್ತಿಯನ್ನು ಸೂಚಿಸಲಾಗುತ್ತದೆ. ಇವು ಬೇರೆ ಬೇರೆ ಪ್ರತ್ಯಯಗಳಲ್ಲದೆ, ಒಂದೇ ಪ್ರತ್ಯಯದ ರೂಪಭೇದಗಳಲ್ಲ. ಹಾಗಾಗಿ, ಆದೇಶ ಪದದ ಬಳಕೆಯೂ ಇಲ್ಲಿ ಉಚಿತವಲ್ಲ (೪.೫ ನೋಡಿ).

ಪ್ರಾಚೀನ ಹಳೆಗನ್ನಡ ವ್ಯಾಕರಣಗಳಲ್ಲಿ ಆಗಮ, ಆದೇಶ, ಪ್ರತ್ಯಯ ಮೊದಲಾದ ಪಾರಿಭಾಷಿಕ ಪದಗಳನ್ನು ಈ ರೀತಿ ತಪ್ಪಾಗಿ ಬಳಸಿರುವುದಕ್ಕೆ ಬೇರೆಯೂ ಹಲವು ಉದಾಹರಣೆಗಳನ್ನು ಕಾಣಬಹುದು. ಭಟ್ಟಾಕಳಂಕನ ಸೂ. ೫೮೮ರಲ್ಲಿ ಪಾಡುವನ್ನಂ, ಪಾಡುವುದುಂ, ಪಾಡುವಿನೆಗಂ ಎಂಬವುಗಳಲ್ಲಿ ವನ್ನಂ, ವುದುಂ, ವನ್ನೆಗಂ, ವಿನೆಗಂ ಎಂಬ ಪ್ರತ್ಯಯಗಳು ಬಂದಿವೆಯೆಂದು ಹೇಳಲಾಗಿದೆ; ಆದರೆ, ನಿಜಕ್ಕೂ ಈ ಪದರೂಪಗಳಲ್ಲಿ ಕ್ರಿಯಾಪದಗಳ ಬಳಿಕ ಭವಿಷ್ಯದರ್ಥದ ವ್ ಪ್ರತ್ಯಯವೂ, ಸರ್ವಪದಗಳ ಅನ್ನೆಗಂ, ಅನ್ನಂ, ಉದುಂ ಮೊದಲಾದ ರೂಪಗಳೂ ಬಂದಿವೆ.

## ೨.೫ ಹಳೆಗನ್ನಡದ ವ್ಯಾಪ್ತಿ

ಕೇಶಿರಾಜನು ವ್ಯಾಕರಣವನ್ನು ರಚಿಸಿದ ಕಾಲದಲ್ಲಿ, ಗ್ರಂಥರಚನೆಯಲ್ಲಿ ಬಳಕೆಯಾಗುತ್ತಿದ್ದ ಹಳೆಗನ್ನಡ ಭಾಷಾಪ್ರಭೇದ ಮಾತಿನಲ್ಲಿ ಬಳಕೆಯಲ್ಲಿದ್ದ ಪ್ರಭೇದಕ್ಕಿಂತ ಭಿನ್ನವಾಗಿದ್ದಿರಬೇಕು. ಈ ಕಾರಣಕ್ಕಾಗಿ, ಆತನು ತನ್ನ ವ್ಯಾಕರಣ ನಿಯಮಗಳಿಗೆ ಮಾತಿನಲ್ಲಿ ಬಳಕೆಯಾಗುವ ವಾಕ್ಯಗಳನ್ನು

ಆಧಾರವಾಗಿ ಕೊಡುವ ಬದಲು, ಗ್ರಂಥಗಳಲ್ಲಿ ಕಂಡುಬರುವ ಪ್ರಯೋಗಗಳನ್ನು ಆಧಾರವಾಗಿ ಕೊಡುವ ಅವಶ್ಯಕತೆಯುಂಟಾಗಿತ್ತು.

ಬಿಳಿಗಿರಿ (೧೯೬೪:೧೨) ಸೂಚಿಸಿದ ಹಾಗೆ, ಸುಮಾರು ೩೫೦ ವರ್ಷಗಳಷ್ಟು ದೀರ್ಘವಾದ ಅವಧಿಯಲ್ಲಿ ರಚಿತವಾದ ಹಳೆಗನ್ನಡ ಗ್ರಂಥಗಳನ್ನು ಆತನು ತನ್ನ ವ್ಯಾಕರಣಕ್ಕೆ ಆಕರಗಳನ್ನಾಗಿ ಬಳಸಿದ್ದಾನೆ. ಈ ದೀರ್ಘವಾದ ಅವಧಿಯಲ್ಲಿ ಹಳೆಗನ್ನಡ ಹಲವು ರೀತಿಯ ಬದಲಾವಣೆಗಳನ್ನು ಕಂಡಿದ್ದು, ಅವುಗಳಲ್ಲಿ ಕೆಲವು ಈ ಗ್ರಂಥಗಳನ್ನೂ ಬಾಧಿಸಿವೆ. ಆದರೆ, ಕೇಶಿರಾಜನಿಗೆ ಇವನ್ನು 'ಭಾಷೆಯಲ್ಲಿ ನಡೆದ ಬದಲಾವಣೆ'ಗಳೆಂಬುದಾಗಿ ಪರಿಗಣಿಸಲು ಸಾಧ್ಯವಾಗಿರಲಿಲ್ಲ.

ಅಂತಹ ಐತಿಹಾಸಿಕ ದೃಷ್ಟಿಯಿಲ್ಲದಿದ್ದುದು ಆತನ ವ್ಯಾಕರಣಕ್ಕೆ ಹಲವು ರೀತಿಯ ಸಮಸ್ಯೆಗಳನ್ನು ತಂದೊಡ್ಡಿದೆ. ಆತನು ತನ್ನ ವ್ಯಾಕರಣಕ್ಕೆ ಆಧಾರವಾಗಿ ಬಳಸಿದಂತಹ ಗ್ರಂಥಗಳಲ್ಲಿ ಕಾಣಿಸುವ 'ಬದಲಾವಣೆ'ಗಳಲ್ಲಿ ಕೆಲವನ್ನು ವಿಕಲ್ಪಗಳೆಂದು ಪರಿಗಣಿಸಿರುವನಾದರೆ ಇನ್ನು ಕೆಲವನ್ನು ತಪ್ಪು ಎಂದು ಸಾರಿದ್ದಾನೆ; ವಿಕಲ್ಪಗಳೆಂದು ಪರಿಗಣಿಸಿರುವಲ್ಲೆಲ್ಲ ಅನವಶ್ಯಕವಾಗಿ ವ್ಯಾಕರಣ ನಿಯಮಗಳನ್ನು ಕಲ್ಪಿಸಬೇಕಾಗಿದೆಯಾದ ಕಾರಣ, ಅದರಿಂದಾಗಿ ಆತನ ವ್ಯಾಕರಣ ಕ್ಲಿಷ್ಟವಾಗಿದೆ.

ಉದಾಹರಣೆಗಾಗಿ, ಪಕಾರ ಹಕಾರವಾಗುವ ಬದಲಾವಣೆ ಕೆಲವು ಹಳೆಗನ್ನಡ ಗ್ರಂಥಗಳನ್ನು ಬಾಧಿಸಿದೆ; ಆದರೆ, ಬೇರೆ ಕೆಲವು ಗ್ರಂಥಗಳನ್ನು ಬಾಧಿಸಿಲ್ಲ. ಪಂಪಭಾರತದ ಕನ್ನಡ ಪದಗಳಲ್ಲಿ ಈ ಬದಲಾವಣೆ ಕಾಣಿಸುವುದಿಲ್ಲ; ಆದರೆ, ಅನಂತರದ ಗ್ರಂಥಗಳಲ್ಲಿ ಕಾಣಿಸಿಕೊಳ್ಳುತ್ತದೆ. ಕೇಶಿರಾಜನು ಈ ರೀತಿ ಪಕಾರಕ್ಕೆ ಬದಲಾಗಿ ಹಕಾರ ಬಳಕೆಯಾಗುವುದನ್ನು ವಿಕಲ್ಪವೆಂದು ಪರಿಗಣಿಸಿದ್ದಾನೆ, ಮತ್ತು ದೇಶಿಯಲ್ಲಿ ಅದು ಚೆಲ್ವು ಎಂದೂ ಹೇಳಿದ್ದಾನೆ (ಸೂ. ೧೭೦).

ಆದರೆ ಬೆರಲ್, ಕೊರಲ್, ಸರಲ್, ಒರಲ್ ಮೊದಲಾದ ಪದಗಳಲ್ಲಿ ರಕಾರದ ಅನಂತರ ಬರುವ ಲಕಾರವನ್ನು ಳಕಾರವಾಗಿ (ಬೆರಳ್, ಕೊರಳ್, ಸರಳ್, ಒರಳ್ ಇತ್ಯಾದಿಯಾಗಿ) ಉಚ್ಚರಿಸುವುದನ್ನು ಆತನು ನಿಷೇಧಿಸಿದ್ದಾನೆ (ಸೂ. ೩೮). ನಿಜಕ್ಕೂ ಇದು ಪಕಾರ ಹಕಾರವಾಗಿರುವ ಹಾಗೆ ಕನ್ನಡದ ಇತಿಹಾಸದಲ್ಲಿ ನಡೆದಿರುವ ಇನ್ನೊಂದು ಬದಲಾವಣೆ.

ಮರಂಗಳ್, ಪೊಲಂಗಳ್, ಕೆಲಂಗಳ್, ಪಯಂಗಳ್ ಮೊದಲಾದ ಪದಗಳಲ್ಲಿ ಕಾಣಿಸುವ ಬಿಂದು ಲೋಪಗೊಳ್ಳುವುದೂ (ಮರಗಳ್, ಪೊಲಗಳ್, ಕೆಲಗಳ್, ಪಯಗಳ್ ಎಂದಾಗುವುದೂ) ಕನ್ನಡದ ಇತಿಹಾಸದಲ್ಲಿ ಕಾಣಿಸುವ ಒಂದು ಬದಲಾವಣೆ. ಆದರೆ, ಕೇಶಿರಾಜನು ಇದನ್ನು ವಿಕಲ್ಪವೆಂದು ಪರಿಗಣಿಸಿ, ಅದಕ್ಕಾಗಿ ವ್ಯಾಕರಣ ನಿಯಮವೊಂದನ್ನು ಕಲ್ಪಿಸಿಕೊಂಡಿದ್ದಾನೆ (ಸೂ. ೧೧೩). ಇಂತಹ ಬೇರೆಯೂ ಹಲವು 'ವ್ಯಾಕರಣ ನಿಯಮ'ಗಳನ್ನು ಆತನ ವ್ಯಾಕರಣದಲ್ಲಿ ಕಾಣಬಹುದು.

### ೨.೬ ಪಾರಿಭಾಷಿಕ ಪದಗಳಲ್ಲಿ ಕನ್ನಡತನ

ಹಳೆಗನ್ನಡ ವ್ಯಾಕರಣಗಳ ಮೇಲೆ ಸಂಸ್ಕೃತ ವ್ಯಾಕರಣಕ್ಕೆ ಎಂತಹ ಹಿಡಿತವಿತ್ತು ಎಂಬುದನ್ನು, ಮೇಲೆ (೨.೧)ರಲ್ಲಿ ಸೂಚಿಸಿದ ಹಾಗೆ, ಈ ವ್ಯಾಕರಣಗಳಲ್ಲಿ ಬಳಕೆಯಾಗುವ ಪಾರಿಭಾಷಿಕ ಪದಗಳೇ ಸಾರಿ ಹೇಳುತ್ತವೆ; ಇವು ನೂರಕ್ಕೆ ನೂರೂ ಸಂಸ್ಕೃತ ವ್ಯಾಕರಣದಿಂದ ಎರವಲಾಗಿ ಪಡೆದ ಪದಗಳು.

ವ್ಯಾಕರಣವೊಂದನ್ನು ಸಂಸ್ಕೃತದಲ್ಲಿ ಬರೆದಿದೆಯಾದರೆ, ಅದರಲ್ಲಿ ಈ ರೀತಿ ಸಂಸ್ಕೃತದವೇ ಆದ ಪಾರಿಭಾಷಿಕ ಪದಗಳನ್ನು ಬಳಸುವುದರಲ್ಲಿ ಔಚಿತ್ಯವಿದೆ. ಆದರೆ, ಕನ್ನಡದಲ್ಲಿ ವ್ಯಾಕರಣವನ್ನು

ಬರೆಯುವವರು ಅವಶ್ಯವಿರುವ ಪಾರಿಭಾಷಿಕ ಪದಗಳನ್ನೆಲ್ಲ ಆದಷ್ಟು ಮಟ್ಟಿಗೆ ಕನ್ನಡದಲ್ಲೇನೇ ತಯಾರಿಸಿಕೊಳ್ಳುವ ಅವಶ್ಯಕತೆಯಿದೆಯಲ್ಲವೇ? ಹಾಗೆ ತಯಾರಿಸಲು ಸಾಧ್ಯವಿಲ್ಲದಲ್ಲಿ ಮಾತ್ರ, ಅವನ್ನು ಸಂಸ್ಕೃತದಿಂದ ಇಲ್ಲವೇ ಬೇರೊಂದು ಭಾಷೆಯಿಂದ ಎರವಲಾಗಿ ಪಡೆದುಕೊಳ್ಳಬೇಕು.

ಕನ್ನಡದಲ್ಲಿ ಹಳೆಗನ್ನಡಕ್ಕೆ ಇಲ್ಲವೇ ಹೊಸಗನ್ನಡಕ್ಕೆ ವ್ಯಾಕರಣವನ್ನು ಬರೆಯಲು ಪ್ರಯತ್ನಿಸುವವರೆಲ್ಲರೂ ಈ ವಿಷಯವನ್ನು ಗಮನದಲ್ಲಿರಿಸುವುದು ಅವಶ್ಯ ಎಂದು ನನಗೆ ತೋರುತ್ತದೆ. ಹೀಗೆ ಮಾಡುವುದರಿಂದ ಹಲವು ರೀತಿಯ ಪ್ರಯೋಜನಗಳನ್ನು ಪಡೆಯಲು ಸಾಧ್ಯವಿದೆ.

(೧) ಈ ರೀತಿ ಸಾಧ್ಯವಿರುವಲ್ಲೆಲ್ಲ ಕನ್ನಡದವೇ ಆದ ಪಾರಿಭಾಷಿಕ ಪದಗಳನ್ನು ಬಳಸುವುದರಿಂದ ಸಂಸ್ಕೃತ ಗೊತ್ತಿಲ್ಲದವರಿಗೆ ಕನ್ನಡ ವ್ಯಾಕರಣವನ್ನು ಅರ್ಥ ಮಾಡಿಕೊಳ್ಳಲು ಸುಲಭವಾಗುತ್ತದೆ. ಉದಾಹರಣೆಗಾಗಿ, ಹ್ರಸ್ವ ಮತ್ತು ದೀರ್ಘ ಸ್ವರಗಳನ್ನು ಉದ್ದ ಮತ್ತು ಗಿಡ್ಡ ಸ್ವರಗಳೆಂದು ಕರೆದಲ್ಲಿ ಇವುಗಳ ಅರ್ಥ ಸಂಸ್ಕೃತ ಗೊತ್ತಿಲ್ಲದವರಿಗೂ ಸುಲಭವಾಗಿ ತಿಳಿಯುತ್ತದೆ. ಸಮಸ್ತಪದಗಳನ್ನು ಜೋಡುಪದಗಳೆಂದು ಕರೆದರೂ ಇಂತಹದೇ ಪ್ರಯೋಜನವಿದೆ.

(೨) ಕೆಲವು ಪಾರಿಭಾಷಿಕ ಪದಗಳು ಸಂಸ್ಕೃತದಲ್ಲಿ ಬಳಕೆಯಾಗುವ ವ್ಯಾಕರಣದ ಮೂಲ ತತ್ವಗಳ ಮೇಲೆ ಅವಲಂಬಿತವಾಗಿದ್ದು, ಕನ್ನಡ ವ್ಯಾಕರಣಕ್ಕೆ ಅನುಕೂಲವಾದುವಲ್ಲ. ಅವನ್ನು ಬಳಸುವುದರಿಂದ ಸಂಸ್ಕೃತ ಮತ್ತು ಕನ್ನಡ ಭಾಷೆಗಳ ನಡುವೆ ಈ ಮೂಲತತ್ವಗಳ ಮಟ್ಟಿಗೆ ವ್ಯತ್ಯಾಸವಿದೆಯೆಂಬ ವಿಷಯ ಸ್ಪಷ್ಟವಾಗುವುದಿಲ್ಲ.

ಉದಾಹರಣೆಗಾಗಿ, ತತ್ಪುರುಷ, ಬಹುವ್ರೀಹಿ, ಅವ್ಯಯೀಭಾವ, ದ್ವಂದ್ವ ಮೊದಲಾದ ಸಂಸ್ಕೃತ ಸಮಾಸಗಳ ಹೆಸರುಗಳು ಆ ಭಾಷೆ ಸಮಸ್ತಪದಗಳನ್ನು ರಚಿಸುವಲ್ಲಿ ಬಳಸುವ ಮೂಲತತ್ವವನ್ನವಲಂಬಿಸಿವೆ. ಅಂಗವಾಗಿ ಬಂದಿರುವ ಪದಗಳಲ್ಲಿ ಯಾವುದು ಪ್ರಧಾನ ಎಂಬುದರ ಮೇಲೆ ಈ ಪಾರಿಭಾಷಿಕ ಪದಗಳನ್ನು ತಯಾರಿಸಲಾಗಿದೆ. ಆದರೆ ಕನ್ನಡ ಸಮಸ್ತಪದಗಳ ರಚನೆಯಲ್ಲಿ ಇದಕ್ಕಿಂತ ತೀರ ಭಿನ್ನವಾದ ಮೂಲತತ್ವ ಬಳಕೆಯಾಗುವುದಾದ ಕಾರಣ (೫.೩.೨ ನೋಡಿ), ಅದರ ಸಮಾಸಗಳನ್ನು ಹೆಸರಿಸುವಲ್ಲಿ ಬೇರೆಯೇ ಪಾರಿಭಾಷಿಕ ಪದಗಳನ್ನು ಬಳಸುವುದು ಒಳ್ಳೆಯದು.

ಇದೇ ರೀತಿಯಲ್ಲಿ, ಸಂಸ್ಕೃತ ವಿಭಕ್ತಿಗಳ ಹೆಸರುಗಳು (ಪ್ರಥಮಾ, ದ್ವಿತೀಯಾ ಇತ್ಯಾದಿ), ಕಾರಕಗಳ ಹೆಸರುಗಳು (ಕರ್ತೃ, ಕರ್ಮ, ಕರಣ ಇತ್ಯಾದಿ), ನಾಮಪದಗಳ ರಚನೆಯಲ್ಲಿ ಬಳಕೆಯಾಗುವ ಪ್ರತ್ಯಯಗಳ ಹೆಸರುಗಳು (ಕೃತ್ ಮತ್ತು ತದ್ಧಿತ) ಮೊದಲಾದ ಪಾರಿಭಾಷಿಕ ಪದಗಳು ಸಂಸ್ಕೃತ ವ್ಯಾಕರಣದಲ್ಲಿ ಬಳಕೆಯಾಗುವ ಮೂಲತತ್ವಗಳ ಮೇಲೆ ಅವಲಂಬಿಸಿವೆ. ಕನ್ನಡ ಇವಕ್ಕಿಂತ ತೀರ ಭಿನ್ನವಾದ ಮೂಲತತ್ವಗಳನ್ನು ಬಳಸುತ್ತಿದೆಯಾದ ಕಾರಣ, ಅವು ಕನ್ನಡ ವ್ಯಾಕರಣಕ್ಕೆ ಅನುಕೂಲವಾದ ಪಾರಿಭಾಷಿಕ ಪದಗಳಲ್ಲ.

(೩) ಪದ ಮತ್ತು ಶಬ್ದ ಎಂಬೆರಡು ಪಾರಿಭಾಷಿಕ ಪದಗಳ ನಡುವಿರುವ ವ್ಯತ್ಯಾಸ ಇನ್ನೊಂದು ರೀತಿಯದು. ಸಂಸ್ಕೃತ ವ್ಯಾಕರಣದಲ್ಲಿ ಸುಪ್ ಮತ್ತು ತಿಙ್ ಎಂಬ ಎರಡು ರೀತಿಯ ಪ್ರತ್ಯಯಗಳೊಂದಿಗೆ ಬರುವವುಗಳನ್ನು ಮಾತ್ರ ಪದಗಳೆಂದು ಕರೆಯಬೇಕು ಎಂಬ ನಿಯಮವನ್ನು ಮಾಡಲಾಗಿದೆ. ಈ ಪ್ರತ್ಯಯಗಳು ಸೇರಿಲ್ಲವಾದರೆ, ಅದನ್ನು ಶಬ್ದ ಎಂದು ಕರೆಯಬಹುದು. ಆದರೆ, ಸಂಸ್ಕೃತದಲ್ಲೇನೇ ಈ ನಿಯಮವನ್ನು ಅಷ್ಟೊಂದು ಕಟ್ಟುನಿಟ್ಟಾಗಿ ಅನುಸರಿಸಿಲ್ಲ. ಕೆಲವೆಡೆಗಳಲ್ಲಿ ಶಬ್ದ ಎಂಬರ್ಥದಲ್ಲೂ ಪದ ಎಂಬುದನ್ನು ಬಳಸಲಾಗುತ್ತದೆ.

ಕನ್ನಡ ವ್ಯಾಕರಣದ ಮಟ್ಟಿಗೆ ಪದ ಎಂಬ ಒಂದು ಪಾರಿಭಾಷಿಕ ಪದ ಮಾತ್ರ ಸಾಕು.

ಅದಕ್ಕಿಂತ ಭಿನ್ನವಾದ ಶಬ್ದ ಪದದ ಅವಶ್ಯಕತೆ ಅದಕ್ಕಿಲ್ಲ (ಭಟ್ ೨೦೦೨:೧೯ ನೋಡಿ). ಪದದೊಂದಿಗೆ 'ಪದರೂಪ ಪ್ರತ್ಯಯ' ಬಂದಿದೆಯಾದರೆ ಅವನ್ನು ಪದರೂಪಗಳೆಂದು ಕರೆಯಲು ಸಾಧ್ಯವಿದೆ, ಮತ್ತು ಹಾಗೆ ಕರೆಯುವುದು ಕನ್ನಡ ವ್ಯಾಕರಣದ ಮಟ್ಟಿಗೆ ಹೆಚ್ಚು ಅನುಕೂಲವಾದುದು.

(೪) ಕನ್ನಡದಲ್ಲಿ ಬಳಕೆಯಾಗುವ ಪದಗಳಲ್ಲಿ ಯಾವುದು ತಪ್ಪು ಮತ್ತು ಯಾವುದು ಸರಿ ಎಂಬ ವಿಷಯದಲ್ಲೂ ಕನ್ನಡದ್ದೇ ಆದ ನಿಯಮಗಳಿವೆ. ಇವು ಸಂಸ್ಕೃತದ ನಿಯಮಗಳಿಂದ ಭಿನ್ನವಾಗಿರಲು ಸಾಧ್ಯವಿದೆಯಾದ ಕಾರಣ, ಕನ್ನಡ ಬರಹಗಳ ಮೇಲೆ ಸಂಸ್ಕೃತದ ನಿಯಮಗಳನ್ನು ಹೇರುವುದು ಸರಿಯಲ್ಲ. ಹಲವರು ಸಂಸ್ಕೃತ ವಿದ್ವಾಂಸರು ಈ ವಿಷಯವನ್ನು ಗಮನಿಸುವುದಿಲ್ಲ.

ಉದಾಹರಣೆಗಾಗಿ, ಸಂಸ್ಕೃತದಲ್ಲಿ ವೈಯಾಕರಣ ಮತ್ತು ವೈಯಾಕರಣಿ ಎಂಬ ಪದಗಳ ನಡುವೆ ಅರ್ಥದಲ್ಲಿ ವ್ಯತ್ಯಾಸವಿದೆ. ವೈಯಾಕರಣ ಎಂಬುದು ಪುಲ್ಲಿಂಗ ರೂಪವಾಗಿದ್ದು, ಒಬ್ಬ ಗಂಡಸನ್ನು ಸೂಚಿಸುತ್ತದೆ, ಮತ್ತು ವೈಯಾಕರಣಿ ಎಂಬುದು ಅದರ ಸ್ತ್ರೀಲಿಂಗ ರೂಪವಾಗಿದ್ದು ಒಬ್ಬ ಹೆಂಗಸನ್ನು ಸೂಚಿಸುತ್ತದೆ.

ಆದರೆ, ಕನ್ನಡದಲ್ಲಿ ಈ ವ್ಯತ್ಯಾಸವಿಲ್ಲ; ಅದರಲ್ಲಿ ಈ ಎರಡು ಪದಗಳನ್ನೂ ಒಂದೇ ಅರ್ಥದಲ್ಲಿ ಬಳಸಲಾಗುತ್ತದೆ (ಕಿಟ್ಟೆಲ್ ಅವರ ಕನ್ನಡ-ಇಂಗ್ಲಿಷ್ ಡಿಕ್ಷನರಿ ನೋಡಿ). ಇದನ್ನು ಗಮನಿಸದ ವಿದ್ವಾಂಸರು ವೈಯಾಕರಣಿ ಎಂಬ ಪದವನ್ನು ವೈಯಾಕರಣ ಎಂಬರ್ಥದಲ್ಲಿ (ಕನ್ನಡದಲ್ಲಿ) ಬಳಸುವವರು ಅಜ್ಞಾನಿಗಳು ಎಂಬುದಾಗಿ ಅಪ್ಪಣೆ ಕೊಡಿಸುತ್ತಾರೆ (ರಂಗನಾಥ ಶರ್ಮಾ ೨೦೦೨:೨ ನೋಡಿ).

ಕನ್ನಡ ಭಾಷೆಗೆ ಎರವಲಾಗಿ ಬಂದಿರುವ ಪದಗಳಿಗೆ ಈ ರೀತಿ ಕನ್ನಡದ್ದೇ ಆದ ವ್ಯಾಕರಣ ನಿಯಮಗಳು ಅನ್ವಯಿಸುತ್ತವೆಯಲ್ಲದೆ ಅವನ್ನು ಎರವಲು ಕೊಟ್ಟಿರುವ ಸಂಸ್ಕೃತ, ಇಂಗ್ಲಿಷ್ ಮೊದಲಾದ ಭಾಷೆಗಳ ವ್ಯಾಕರಣ ನಿಯಮಗಳು ಅನ್ವಯಿಸುವುದಿಲ್ಲ. ಇಂತಹ ಪದಗಳಿಗೆ ಬೇರೆ ಬೇರೆ ರೂಪಗಳು ಬಳಕೆಯಲ್ಲಿರಲು ಸಾಧ್ಯವಿದ್ದು, ಅವುಗಳಲ್ಲಿ ಯಾವುದು ಸರಿ ಮತ್ತು ಯಾವುದು ತಪ್ಪು ಎಂಬುದನ್ನು ಕನ್ನಡದ ವ್ಯಾಕರಣ ನಿಯಮವನ್ನು (ಇಲ್ಲವೇ ಶಿಷ್ಟ ಸಂಪ್ರದಾಯವನ್ನು) ಅನುಸರಿಸಿ ನಿರ್ಧರಿಸಬೇಕಲ್ಲದೆ, ಎರವಲು ಕೊಟ್ಟಿರುವ ಭಾಷೆಗಳ ನಿಯಮಗಳನ್ನು ಕನ್ನಡದ ಮೇಲೆ ಹೇರುವುದು ಸರಿಯಲ್ಲ.

### ೨.೭ ಸಾರಾಂಶ

ಹಳೆಗನ್ನಡ ವ್ಯಾಕರಣಗಳಲ್ಲಿ ಬಳಕೆಯಾಗಿರುವ ಪಾರಿಭಾಷಿಕ ಪದಗಳೆಲ್ಲವೂ ಸಂಸ್ಕೃತ ವ್ಯಾಕರಣದಿಂದ ಪಡೆದವುಗಳು. ಇವು ಸಂಸ್ಕೃತ ವ್ಯಾಕರಣವನ್ನು ವಿವರಿಸಿ ಹೇಳುವುದಕ್ಕೆ ಅನುಕೂಲವಾದಂತಹ ಕಲ್ಪನೆಗಳನ್ನು ಪ್ರತಿಬಿಂಬಿಸುತ್ತವೆ. ಹಳೆಗನ್ನಡ ವ್ಯಾಕರಣವನ್ನು ವಿವರಿಸಿ ಹೇಳುವುದಕ್ಕೂ ಇವು ಅನುಕೂಲವಾಗಿರಬೇಕೆಂದೇನೂ ಇಲ್ಲ.

ಇಂತಹ ಪಾರಿಭಾಷಿಕ ಪದಗಳಲ್ಲಿ ಹಲವು ಸಂಸ್ಕೃತದಲ್ಲಿ ಮಾತ್ರವೇ ಕಾಣಿಸುವಂತಹ ವ್ಯಾಕರಣ ನಿಯಮಗಳನ್ನು ವರ್ಣಿಸುವುದಕ್ಕಾಗಿ ಸಿದ್ಧವಾಗಿವೆ. ಅವು ನಿಜಕ್ಕೂ ಹಳೆಗನ್ನಡ ವ್ಯಾಕರಣಕ್ಕೆ ಅವಶ್ಯವಿಲ್ಲದವುಗಳು.

ಇನ್ನು ಕೆಲವನ್ನು ಬಳಸುವ ಅವಶ್ಯಕತೆ ಹಳೆಗನ್ನಡ ವ್ಯಾಕರಣಕ್ಕಿದ್ದರೂ ಅವುಗಳ ವ್ಯಾಪ್ತಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳುವ ಅವಶ್ಯಕತೆಯಿದೆ. ಅವನ್ನು ಹಾಗೆಯೇ ಬಳಸಿದೆವಾದರೆ,

ಹಲವಾರು ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಹಳೆಗನ್ನಡ ಸಂಸ್ಕೃತಕ್ಕಿಂತ ತೀರ ಭಿನ್ನವಾದ ವ್ಯಾಕರಣದ ಮೂಲತತ್ವಗಳನ್ನು ಬಳಸುತ್ತಿರುವುದೇ ಇದಕ್ಕೆ ಕಾರಣ.

ಇಂತಹ ಬದಲಾವಣೆಗಳನ್ನು ಮಾಡಿಕೊಳ್ಳದೆ ಸಂಸ್ಕೃತ ವ್ಯಾಕರಣದ ಪಾರಿಭಾಷಿಕ ಪದಗಳನ್ನು ನೇರವಾಗಿ ಹಳೆಗನ್ನಡ ವ್ಯಾಕರಣ ನಿಯಮಗಳನ್ನು ವಿವರಿಸುವಲ್ಲಿ ಬಳಸಿರುವ ಕಾರಣ, ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳು ಹೇಗೆ ತೊಂದರೆಗೀಡಾಗಿದ್ದಾರೆ ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

## ಅಧ್ಯಾಯ ಮೂರು
# ವರ್ಣಗಳ ಬಳಕೆ

### ೩.೧ ಪೀಠಿಕೆ

ಎಲ್ಲಾ ಭಾಷೆಗಳೂ ವರ್ಣಗಳನ್ನು ಜೋಡಿಸಿ ಪದಗಳನ್ನು ರಚಿಸುತ್ತವೆಯಾದರೂ, ಇದಕ್ಕಾಗಿ ಯಾವ ವರ್ಣಗಳನ್ನೆಲ್ಲ ಬಳಸಲಾಗುತ್ತದೆ, ಮತ್ತು ಅವನ್ನು ಯಾವ ಅನುಕ್ರಮದಲ್ಲೆಲ್ಲ ಜೋಡಿಸಲಾಗುತ್ತದೆ ಎಂಬ ವಿಷಯದಲ್ಲಿ ಭಾಷೆಗಳೊಳಗೆ ಸಾಕಷ್ಟು ವ್ಯತ್ಯಾಸಗಳು ಕಂಡುಬರುತ್ತವೆ. ಮೇಲೆ ಪೀಠಿಕೆಯಲ್ಲಿ ಸೂಚಿಸಿದ ಹಾಗೆ, ಹಳೆಗನ್ನಡ ಮತ್ತು ಸಂಸ್ಕೃತಗಳ ನಡುವೆ ಪದರಚನೆಗಾಗಿ ಅವು ಬಳಸುವ ವರ್ಣಗಳ ಸಂಖ್ಯೆ, ಅವುಗಳ ಸ್ವರೂಪ, ಮತ್ತು ಪದಗಳಲ್ಲಿ ಅವುಗಳಿಗಿರುವ ಅನುಕ್ರಮ – ಈ ಮೂರು ವಿಷಯಗಳಲ್ಲೂ ಹಲವು ಮುಖ್ಯವಾದ ವ್ಯತ್ಯಾಸಗಳಿವೆ.

ಸಂಸ್ಕೃತ ವ್ಯಾಕರಣಗಳಲ್ಲಿ ಬರುವ ವರ್ಣಗಳ ಪಟ್ಟಿ, ಅವುಗಳ ವಿಭಜನೆ, ಮತ್ತು ಅದರಿಂದ ಸಿದ್ಧವಾಗುವ ಪಾರಿಭಾಷಿಕ ಪದಗಳು ಇವನ್ನೆಲ್ಲ ಹಾಗೆಯೇ ತಮ್ಮ ಹಳೆಗನ್ನಡ ವ್ಯಾಕರಣಗಳಲ್ಲೂ ಬಳಸಿದ ಪ್ರಾಚೀನ ವೈಯಾಕರಣಿಗಳು ಅನವಶ್ಯಕವಾಗಿ ಹಳೆಗನ್ನಡ ವ್ಯಾಕರಣ ಬಹಳ ಕ್ಲಿಷ್ಟವಾಗುವಂತೆ ಮಾಡಿದ್ದಾರೆ. ಈ ಎಲ್ಲಾ ವಿಷಯಗಳಲ್ಲೂ ಹಳೆಗನ್ನಡ ತನ್ನದೇ ಆದ ವ್ಯಾಕರಣದ ಮೂಲ ತತ್ವಗಳನ್ನು ಬಳಸಿಕೊಳ್ಳುವುದಾದ ಕಾರಣ, ಹಳೆಗನ್ನಡಕ್ಕೆ ಅದರದೇ ಆದ ವರ್ಣಗಳ ಪಟ್ಟಿ, ವಿಭಜನೆ, ಮತ್ತು ಪಾರಿಭಾಷಿಕ ಪದಗಳ ಅವಶ್ಯಕತೆಯಿದೆ.

### ೩.೨ ವರ್ಣಗಳ ಪಟ್ಟಿ

ಸಂಸ್ಕೃತಕ್ಕೂ ಹಳೆಗನ್ನಡಕ್ಕೂ ನಡುವೆ ಅವು ಬಳಸುವ ವರ್ಣಗಳ ಮಟ್ಟಿಗೆ ಹಲವು ವ್ಯತ್ಯಾಸಗಳಿದ್ದು, ಇವುಗಳಲ್ಲಿ ಕೆಲವನ್ನು ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳು ಗಮನಿಸಿದ್ದಾರೆ; ಬೇರೆ ಕೆಲವನ್ನು ಆಧುನಿಕ ವಿದ್ವಾಂಸರು (ಬಿಳಿಗಿರಿ ೧೯೬೯, ಸೀತಾರಾಮಯ್ಯ ೧೯೭೯ ನೋಡಿ) ವಿವರಿಸಿದ್ದಾರೆ. ಹಾಗಾಗಿ, ಈ ವಿಷಯದಲ್ಲಿ ಇಲ್ಲಿ ಜಾಸ್ತಿ ಬರೆಯಬೇಕಾಗಿಲ್ಲ.

ಸಂಸ್ಕೃತ ಪದಗಳ ರಚನೆಯಲ್ಲಿ ಬಳಕೆಯಾಗುವ ಮಹಾಪ್ರಾಣಾಕ್ಷರಗಳು (ಖ, ಛ, ಠ, ಥ, ಫ ಮತ್ತು ಘ, ಝ, ಢ, ಧ, ಭ), ಋ, ಶ, ಷ, ಹ ಮೊದಲಾದ ಹಲವು ವರ್ಣಗಳು ಹಳೆಗನ್ನಡ ಪದಗಳ ರಚನೆಯಲ್ಲಿ ಬಳಕೆಯಾಗುವುದಿಲ್ಲ. ಇದಕ್ಕೆ ಬದಲು, ಹಳೆಗನ್ನಡ ಪದಗಳ ರಚನೆಯಲ್ಲಿ ಬಳಕೆಯಾಗುವ ಗಿಡ್ಡ (ಹ್ರಸ್ವ) ಎಕಾರ–ಒಕಾರಗಳು ಮತ್ತು ೞ, ಱ, ಳ ವರ್ಣಗಳು ಸಂಸ್ಕೃತ ಪದಗಳ ರಚನೆಯಲ್ಲಿ ಬಳಕೆಯಾಗುವುದಿಲ್ಲ.

ಐ ಮತ್ತು ಔಗಳಿಗೆ ಕನ್ನಡ ಬರಹದಲ್ಲಿ ವಿಶಿಷ್ಟವಾದ ಸ್ವರಸಂಜ್ಞೆಗಳು ಇವೆಯಾದರೂ ಅವು ಹಳೆಗನ್ನಡ ಭಾಷೆಯಲ್ಲಿ ವಿಶಿಷ್ಟವಾದ ಸ್ವರಗಳೇನಲ್ಲ. ಉಚ್ಚಾರಣೆಯಲ್ಲಿ ಅವು ಅಯ್ ಮತ್ತು ಅವ್ ಎಂಬ ಸ್ವರ–ವ್ಯಂಜನ ಜೋಡಿಗಳಿಗಿಂತ ಭಿನ್ನವಲ್ಲ. ಹಳೆಗನ್ನಡದಲ್ಲಿ ಈ ಎರಡು ಸ್ವರ–ವ್ಯಂಜನ ಜೋಡಿಗಳು ಮಾತ್ರವಲ್ಲದೆ, ಗೆಯ್ಗಿ, ಪೊಯ್ಸು, ಮುಯ್ವು, ಪೋಯ್ತು, ಕಾಯ್ಪು

ಮೊದಲಾದ ಪದಗಳಲ್ಲಿ ಕಾಣಿಸುವ ಹಾಗೆ ಎಯ್, ಒಯ್, ಉಯ್, ಓಯ್, ಆಯ್ ಮೊದಲಾದ ಅಂತಹವೇ ಬೇರೆಯೂ ಹಲವು ಜೋಡಿಗಳಿವೆ.

ಹಾಗಾಗಿ, ಮೊದಲಿನ ಎರಡು ಸ್ವರ–ವ್ಯಂಜನ ಜೋಡಿಗಳನ್ನು (ಅಯ್ ಮತ್ತು ಅವ್ ಎಂಬವುಗಳನ್ನು) ಸೂಚಿಸುವುದಕ್ಕಾಗಿ ಮಾತ್ರ ವಿಶಿಷ್ಟವಾದ ಸ್ವರ ಸಂಜ್ಞೆ(ಐ, ಔ)ಗಳನ್ನು ಬಳಸುವುದು ಹಳೆಗನ್ನಡದ ಮಟ್ಟಿಗಂತೂ ಅನವಶ್ಯಕ.

ಸಂಸ್ಕೃತದಲ್ಲಿ ಅಯ್ ಮತ್ತು ಅವ್ ಎಂಬ ಎರಡು ಜೋಡಿಗಳು ಮಾತ್ರ ಬಳಕೆಯಲ್ಲಿವೆ; ಹಳೆಗನ್ನಡದ ಹಾಗೆ ಎಯ್, ಒಯ್, ಉಯ್, ಓಯ್, ಆಯ್ ಮೊದಲಾದ ಇಂತಹ ಇತರ ಜೋಡಿಗಳು ಬಳಕೆಯಲ್ಲಿಲ್ಲ; ಇದಲ್ಲದೆ, ಸೇರಿಕೆಯ ನಿಯಮಗಳಲ್ಲಿ ಅಯ್ ಮತ್ತು ಅವ್ ಎಂಬ ಈ ಎರಡು ಜೋಡಿಗಳು ಸಂಸ್ಕೃತದಲ್ಲಿ ಇತರ ಸ್ವರಗಳ ಹಾಗೆ ಕಾಣಿಸಿಕೊಳ್ಳುತ್ತವಲ್ಲದೆ ಸ್ವರ–ವ್ಯಂಜನ ಜೋಡಿಗಳ ಹಾಗೆ ಕಾಣಿಸುವುದಿಲ್ಲ.

ಈ ಕಾರಣಗಳಿಗಾಗಿ, ಸಂಸ್ಕೃತದ ಬರಹದಲ್ಲಿ ಅಯ್ ಮತ್ತು ಅವ್ ಎಂಬವುಗಳಿಗೆ ವಿಶಿಷ್ಟವಾದ ಸಂಜ್ಞೆಗಳನ್ನು ಕಲ್ಪಿಸಿಕೊಳ್ಳುವುದು ಮತ್ತು ಅದರ ಅಕ್ಷರಮಾಲೆಯಲ್ಲಿ ಅವನ್ನು ಸ್ವರಗಳೊಂದಿಗೆ ಸೇರಿಸಿ ಹೇಳುವುದು ಸಮರ್ಥನೀಯವಾಗಿದೆ.

ನಾವು ಬಳಸುವ ಕನ್ನಡ ಲಿಪಿ ಬ್ರಾಹ್ಮೀ ಲಿಪಿಯಿಂದ ಬೆಳೆದು ಬಂದಿದೆ. ಈ ಲಿಪಿಯನ್ನು ಮುಖ್ಯವಾಗಿ ಸಂಸ್ಕೃತ, ಮತ್ತು ಪಾಲಿ, ಪ್ರಾಕೃತ ಮೊದಲಾದ ಸಂಸ್ಕೃತದಂತಹವೇ ಆದ ಇತರ ಇಂಡೋ–ಆರ್ಯನ್ ಭಾಷೆಗಳನ್ನು ಬರಹಕ್ಕೆ ಇಳಿಸುವುದಕ್ಕಾಗಿ ತಯಾರಿಸಲಾಗಿದೆ. ಹಾಗಾಗಿ, ಈ ಭಾಷೆಗಳ ಮಟ್ಟಿಗೆ ಸಮರ್ಥನೀಯವಾದರೂ ಕನ್ನಡದ ಮಟ್ಟಿಗೆ ಸಮರ್ಥನೀಯವಲ್ಲದಿರುವ ಮೇಲಿನ ಎರಡು ಸಂಜ್ಞೆಗಳು ನಮ್ಮ ಲಿಪಿಯಲ್ಲಿ ಸೇರಿಕೊಂಡಿವೆ.

ಇವಲ್ಲದೆ, ಮೇಲೆ ಸೂಚಿಸಿದ ಹಾಗೆ ಋ, ಷ, ಮಹಾಪ್ರಾಣಾಕ್ಷರಗಳು ಮೊದಲಾದ ಬೇರೆ ಕೆಲವು ಸಂಜ್ಞೆಗಳೂ ಇದೇ ರೀತಿಯಲ್ಲಿ ಅನವಶ್ಯಕವಾಗಿ ನಮ್ಮ ಲಿಪಿಯಲ್ಲಿ ಸೇರಿಕೊಂಡಿವೆ.

ಅವಶ್ಯವಿಲ್ಲದಿದ್ದರೂ ಈ ಹೆಚ್ಚಿನ ಸಂಜ್ಞೆಗಳನ್ನು ಬಳಸಿ ಅಭ್ಯಾಸವಾಗಿರುವ ಇವತ್ತಿನ ವಿದ್ವಾಂಸರಿಗೆ ಅವನ್ನು ತೆಗೆದುಹಾಕಿದಲ್ಲಿ ಅದೇನೋ ಆಭಾಸವಾಗುವ ಹಾಗೆ ಅನಿಸುತ್ತದೆ. ಹಾಗಾಗಿ, ಅವನ್ನು ಬಿಟ್ಟುಬಿಡೋಣ ಎಂಬ ಉತ್ತಮವಾದ ಸಲಹೆಯನ್ನು ಅವರು 'ಸಂಸ್ಕೃತಿಯ ನಾಶ' ಎಂಬ ದೊಡ್ಡ ಹೆಸರು ಕೊಟ್ಟು ತಳ್ಳಿಹಾಕುತ್ತಿದ್ದಾರೆ.

ಉಚ್ಚಾರಣೆಯಿಂದ ಬಿದ್ದು ಹೋಗಿರುವ ಹಳೆಗನ್ನಡದ ಱ ಮತ್ತು ೞಗಳನ್ನು ಹೊಸಗನ್ನಡದ ಬರಹದಿಂದಲೂ ತೆಗೆದುಹಾಕಲಾಗಿದೆ; ಈ ಬದಲಾವಣೆಯಿಂದ ಸಂಭವಿಸದ ಸಂಸ್ಕೃತಿ ನಾಶ, ಉಚ್ಚಾರಣೆಯಲ್ಲಿಲ್ಲದಿರುವ ಮೇಲಿನ ಸಂಜ್ಞೆಗಳನ್ನು ತೆಗೆದುಹಾಕುವುದರಿಂದ ಹೇಗೆ ಸಂಭವಿಸುತ್ತದೆ ಎಂಬುದು ನನಗಂತೂ ಅರ್ಥವಾಗುವುದಿಲ್ಲ.

## ೩.೩ ವರ್ಣಗಳ ಅನುಕ್ರಮ

ವರ್ಣಗಳು ಪದಗಳಲ್ಲಿ ಯಾವ ಅನುಕ್ರಮದಲ್ಲೆಲ್ಲ ಬರಬಲ್ಲುವು ಎಂಬ ವಿಷಯದಲ್ಲೂ ಸಂಸ್ಕೃತ ಮತ್ತು ಕನ್ನಡ ಭಾಷೆಗಳ ನಡುವೆ ಕೆಲವು ಮುಖ್ಯವಾದ ವ್ಯತ್ಯಾಸಗಳಿವೆ. ಉದಾಹರಣೆಗಾಗಿ, ಪಂಪಭಾರತದ ಕನ್ನಡ ವ್ಯಾಕರಣವನ್ನು ಆಳವಾಗಿ ಸಂಶೋಧಿಸಿದ ರಾಮಚಂದ್ರ ರಾಯರು (೧೯೭೨:೯–೨೦) ಕೊಟ್ಟಿರುವ ಹಳೆಗನ್ನಡದ ಕೆಲವು ನಿಯಮಗಳನ್ನು ಸಂಸ್ಕೃತ ನಿಯಮಗಳೊಂದಿಗೆ ಹೋಲಿಸಿ ನೋಡಬಹುದು.

ಪಂಪಭಾರತದ ಹಳೆಗನ್ನಡ (ದೇಶಿ) ಪದಗಳಲ್ಲಿ ಸಮಾನವಲ್ಲದ ಎರಡು ವ್ಯಂಜನಗಳು ಒಟ್ಟಿಗೆ ಬರುವುದಿದ್ದಲ್ಲಿ, ಅವುಗಳಲ್ಲಿ ಮೊದಲನೆಯದು ಅನುನಾಸಿಕ ಇಲ್ಲವೇ ಯರಜಿಲಳಟಿಗಳಲ್ಲಿ ಒಂದಾಗಿರಬೇಕೆಂಬ ನಿಯಮವಿದೆ. ಉದಾಹರಣೆಗಾಗಿ, ಕಣ್ಗಳ್, ನೋನ್ತು, ಪೋಯ್ತು, ಕಿರ್ಚು, ಪೊೞ್ತು ಮೊದಲಾದ ಪದಗಳಲ್ಲಿ ಸಮಾನವಲ್ಲದ ಎರಡು ವ್ಯಂಜನಗಳು ಒಟ್ಟಿಗೆ ಬಂದಿದ್ದು ಅವುಗಳಲ್ಲಿ ಮೊದಲನೆಯ ವ್ಯಂಜನವಾಗಿ ಅನುನಾಸಿಕ (ಣ್, ನ್) ಇಲ್ಲವೇ ಯ್, ರ್, ೞ್‌ಗಳಲ್ಲೊಂದು ಬಂದಿರುವುದನ್ನು ಕಾಣಬಹುದು. ಹಳೆಗನ್ನಡದಲ್ಲಿ ಎರಡು ಸ್ಪರ್ಶಗಳು ಒಟ್ಟಿಗೆ ಬರುವುದಿದ್ದರೆ, ಅವೆರಡೂ ಒಂದೇ ಸ್ಪರ್ಶವಾಗಿರುವುದು ಅವಶ್ಯ (ತಪ್ಪು, ಗಟ್ಟಿಸಿ, ಕಬ್ಬಂ, ಒಕ್ಕಲ್ ಇತ್ಯಾದಿ).

ಆದರೆ, ಸಂಸ್ಕೃತ ಪದಗಳಲ್ಲಿ ಸಮಾನವಲ್ಲದ ಎರಡು ವ್ಯಂಜನಗಳ ಸೇರಿಕೆಯಲ್ಲಿ ಮೊದಲನೆಯ ವ್ಯಂಜನವಾಗಿ ಸ್ಪರ್ಶಗಳೂ ಬರಬಲ್ಲುವು. ಉದಾಹರಣೆಗಾಗಿ, ಭಕ್ತಿ, ಸಪ್ತ, ರಾಕ್ಷಸ, ವತ್ಸ ಎಂಬಂತಹ ಪದಗಳಲ್ಲಿ ಕ್ತ್, ಪ್ತ್, ಕ್ಷ್ ಮತ್ತು ತ್ಸ್ ಎಂಬ ಸಮಾನವಲ್ಲದ ವ್ಯಂಜನಕಂತೆಗಳು ಬಂದಿದ್ದು, ಇವುಗಳಲ್ಲಿ ಮೊದಲನೆಯ ವ್ಯಂಜನವಾಗಿ ಒಂದು ಸ್ಪರ್ಶ (ಕ್, ಪ್ ಇಲ್ಲವೇ ತ್) ಬಂದಿದೆ.

ಸಂಸ್ಕೃತ ಪದಗಳ ಆದಿಯಲ್ಲೂ ಎರಡು ವ್ಯಂಜನಗಳು ಒಟ್ಟಾಗಿ ಬರಬಲ್ಲುವು; ಉದಾಹರಣೆಗಾಗಿ, ಕ್ರಾಂತಿ, ಕ್ಷಮೆ, ಜ್ಞಾನ, ಜ್ಯೋತಿ, ದ್ವೇಷ, ಮ್ಲೇಚ್ಛ ಮೊದಲಾದ ಪದಗಳ ಆದಿಯಲ್ಲಿ ಎರಡೆರಡು ವ್ಯಂಜನಗಳು ಒಟ್ಟಾಗಿ ಬಂದಿವೆ. ಆದರೆ, ಹಳೆಗನ್ನಡ ಪದಗಳ ಆದಿಯಲ್ಲಿ ಈ ರೀತಿ ಎರಡು ವ್ಯಂಜನಗಳು ಒಟ್ಟಾಗಿ ಬರಲಾರವು.

ಹಳೆಗನ್ನಡ ಪದಗಳ ಕೊನೆಯಲ್ಲಿ ಕ್, ಗ್, ಚ್, ಜ್ ಮೊದಲಾದ ಸ್ಪರ್ಶಗಳಾಗಲಿ, ಇಲ್ಲವೇ ಸಕಾರವಾಗಲಿ ಬರಲಾರವು. ಆದರೆ ಸಂಸ್ಕೃತದಲ್ಲಿ ಕಟತಪಗಳೂ ಪದಗಳ ಕೊನೆಯಲ್ಲಿ ಬರಬಲ್ಲುವು (ವಿಶ್ವಜಿತ್, ಸರ್ವಶಕ್, ವಿಟ್).

### ೩.೪ ತದ್ಭವಗಳಲ್ಲಿ ಕಾಣಿಸುವ ಬದಲಾವಣೆಗಳು

ಹಳೆಗನ್ನಡಕ್ಕೆ ಸಂಸ್ಕೃತದಿಂದ ನೂರಾರು ಪದಗಳು ಎರವಲಾಗಿ ಬಂದಿವೆ. ಇವುಗಳಲ್ಲಿ ಹಲವು ಬದಲಾಗದೆ ಹಾಗೆಯೇ ಕಾಣಿಸಿಕೊಳ್ಳುವುವಾದರೆ, ಬೇರೆ ಹಲವು ಬದಲಾವಣೆಗೊಳ-ಗಾಗುವುದರ ಮೂಲಕ ಕನ್ನಡದವಾಗಿ ಮಾರ್ಪಟ್ಟಿವೆ. ಸಂಸ್ಕೃತದಿಂದ ನೇರವಾಗಿ ಬರುವ ಬದಲು, ಪಾಲಿ, ಪ್ರಾಕೃತ ಮೊದಲಾದುವುಗಳ ಮೂಲಕ ಬಂದುದರಿಂದಲೂ ಇಂತಹ ಪದಗಳಲ್ಲಿ ಕೆಲವು ಸಂಸ್ಕೃತ ಪದಗಳಿಗಿಂತ ಭಿನ್ನವಾಗಿವೆ.

ಸಂಸ್ಕೃತದಿಂದ ಬಂದಿರುವ ಈ ಪದಗಳಲ್ಲಿ ಕಾಣಿಸುವ ಬದಲಾವಣೆಗಳಲ್ಲಿ ಹೆಚ್ಚಿನವಕ್ಕೂ ಆ ಭಾಷೆಯಲ್ಲಿ ಬಳಕೆಯಾಗುವ ವರ್ಣಗಳ ಸಂಖ್ಯೆ, ಸ್ವರೂಪ, ಮತ್ತು ಅನುಕ್ರಮಗಳು ಹಳೆಗನ್ನಡದಲ್ಲಿರುವುದಕ್ಕಿಂತ ಭಿನ್ನವಾಗಿರುವುದೇ ಮುಖ್ಯ ಕಾರಣ. ಉದಾಹರಣೆಗಾಗಿ, ಸಂಸ್ಕೃತದಲ್ಲಿ ಮಹಾಪ್ರಾಣಾಕ್ಷರಗಳಿವೆ; ಆದರೆ, ಹಳೆಗನ್ನಡದಲ್ಲಿಲ್ಲ. ಹಾಗಾಗಿ, ಸಂಸ್ಕೃತದಿಂದ ಎರವಲಾಗಿ ಬಂದಿರುವ ಹಲವು ಪದಗಳಲ್ಲಿ ಮಹಾಪ್ರಾಣಾಕ್ಷರಗಳು ಅಲ್ಪಪ್ರಾಣಾಕ್ಷರಗಳಾಗಿವೆ (ಮುಖ-ಮುಕ, ಘಂಟೆ-ಗಂಟೆ, ಕಥೆ-ಕತೆ, ಇಚ್ಛೆ-ಇಚ್ಚೆ, ಧೂಪ-ದೂಪ).

ಹಳೆಗನ್ನಡದಲ್ಲಿ ಸ-ಶ-ಷಗಳ ಬದಲು ಸ ಎಂಬುದೊಂದೇ ಇದ್ದಿತಾದ ಕಾರಣ, ತದ್ಭವಗಳಲ್ಲಿ ಷ-ಶಗಳು ಸ ಆಗುತ್ತವೆ (ಶಂಕೆ-ಸಂಕೆ, ಶುಚಿ-ಸುಚಿ, ಭಾಷೆ-ಬಾಸೆ, ವಿಷಯ-ವಿಸಯ).

ಮೇಲೆ ವಿವರಿಸಿದ ಹಾಗೆ, ಹಳೆಗನ್ನಡ ಪದಗಳ ಆದಿಯಲ್ಲಿ ಒಂದಕ್ಕಿಂತ ಜಾಸ್ತಿ ವ್ಯಂಜನಗಳು ಬರಲಾರವು. ಹಾಗಾಗಿ, ಮೊದಲಿಗೆ ಎರಡು ವ್ಯಂಜನಗಳು ಬರುವ ಸಂಸ್ಕೃತ ಪದಗಳಲ್ಲಿ ಬೇರೆ ಬೇರೆ ರೀತಿಯ ಬದಲಾವಣೆಗಳು ನಡೆದು, ಅವುಗಳಲ್ಲಿ ಒಂದು ವ್ಯಂಜನ ಮಾತ್ರ ಉಳಿಯುವ ಹಾಗಾಗಿದೆ (ಕ್ಷಾರ–ಕಾರ, ಸ್ಮಶಾನ–ಮಸಣ, ಪ್ರಾಯ–ಹರಯ, ಧೃಷ್ಟ–ದಿಟ್ಟ, ಧ್ವನಿ–ದನಿ, ತ್ಯಾಗಿ–ಚಾಗಿ, ಕ್ಷಣ–ಚಣ, ಶ್ರೀ–ಸಿರಿ, ಸ್ಥಾನ–ತಾಣ).

## ೩.೫ ಪದಗಳ ಉಚ್ಚಾರಣೆ

ಹಳೆಗನ್ನಡ ಮತ್ತು ಸಂಸ್ಕೃತಗಳ ನಡುವೆ ಪದಗಳ ಉಚ್ಚಾರಣೆಯಲ್ಲೂ ಒಂದು ಮುಖ್ಯವಾದ ವ್ಯತ್ಯಾಸವಿದೆ. ಸಂಸ್ಕೃತದ ಹೆಚ್ಚಿನ ಪದಗಳಲ್ಲೂ ಯಾವುದಾದರೂ ಒಂದು ಸ್ವರವನ್ನು ಇತರ ಸ್ವರಗಳಿಂದ ಸ್ವಲ್ಪ ಎತ್ತರದ ಧ್ವನಿಯಲ್ಲಿ (ಎಂದರೆ 'ಉದಾತ್ತ' ಸ್ವರವಾಗಿ) ಉಚ್ಚರಿಸಬೇಕಾಗುತ್ತದೆ. ಉದಾಹರಣೆಗಾಗಿ, ವಚಸ್ 'ಮಾತು' ಪದದಲ್ಲಿ ಮೊದಲನೆಯ ಸ್ವರ ಉದಾತ್ತವಾಗಿದೆಯಾದರೆ, ಗುರು 'ಭಾರ' ಪದದಲ್ಲಿ ಎರಡನೆಯ ಸ್ವರ ಉದಾತ್ತವಾಗಿದೆ. ಯಾವ ಸ್ವರ ಈ ರೀತಿ ಉದಾತ್ತವಾಗಿದೆ (ಎತ್ತರದ ಧ್ವನಿಯಲ್ಲಿ ಉಚ್ಚಾರವಾಗುತ್ತದೆ) ಎಂಬುದರ ಮೇಲೆ ಸಂಸ್ಕೃತ ಪದಗಳಲ್ಲಿ ಅರ್ಥ ವ್ಯತ್ಯಾಸ ಕಾಣಿಸಿಕೊಳ್ಳುತ್ತದೆ.

ಉದಾಹರಣೆಗಾಗಿ, ರಾಜಪುತ್ರ ಪದದಲ್ಲಿ ಕೊನೆಯ ಸ್ವರ ಉದಾತ್ತವಾಗಿದೆಯಾದರೆ 'ರಾಜನ ಮಗ' ಎಂಬ ಅರ್ಥ ಬರುತ್ತದೆ, ಮತ್ತು ಮೊದಲನೆಯ ಸ್ವರ ಉದಾತ್ತವಾಗಿದೆಯಾದರೆ 'ರಾಜನು ಮಗನಾಗಿರುವವನು' (ಎಂದರೆ 'ರಾಜನ ತಂದೆ') ಎಂಬ ಅರ್ಥ ಬರುತ್ತದೆ.

ಸ್ವರಗಳ ಉಚ್ಚಾರಣೆಯಲ್ಲಿ ಕಾಣಿಸುವ ಈ ಉಚ್ಚಾರಣೆಯ ವ್ಯತ್ಯಾಸ ವೇದ ಕಾಲದ ಸಂಸ್ಕೃತದಲ್ಲಿ ಸ್ಪಷ್ಟವಾಗಿತ್ತು. ಅನಂತರ ಇದು ಪಾಣಿನಿ, ಪತಂಜಲಿ ಮೊದಲಾದವರ ಕಾಲದವರೆಗೂ ಉಳಿದುಕೊಂಡಿತ್ತು. ಆದರೆ, ಏಳು–ಎಂಟನೇ ಶತಮಾನದ ಹೊತ್ತಿಗೆ ಇದರ ಬಳಕೆ ಮಾತಿನಿಂದ ಬಿದ್ದು ಹೋಗಲು ಆರಂಭಿಸಿ, ಅನಂತರದ ಸಂಸ್ಕೃತದಲ್ಲಿ ಪೂರ್ತಿ ಇಲ್ಲವಾಗಿದೆ. ಈಗಿನವರು ವೇದಮಂತ್ರಗಳ ಉಚ್ಚಾರಣೆಯಲ್ಲಿ ಮಾತ್ರ ಈ ವ್ಯತ್ಯಾಸವನ್ನು ಕಾಣಿಸುತ್ತಾರೆ.

ಸಂಸ್ಕೃತ ಪದಗಳಲ್ಲಿ ಕಾಣಿಸುವ ಹಲವು ಬದಲಾವಣೆಗಳಿಗೆ, ಮತ್ತು ವಿಕಲ್ಪೋಚ್ಚಾರಣೆಗಳಿಗೆ ಅವುಗಳಲ್ಲಿರುವ ಸ್ವರಗಳ ಈ ಉಚ್ಚಾರಣಾಭೇದವೂ ಕಾರಣವಾಗಿತ್ತು. ಇಂತಹ ಉಚ್ಚಾರಣಾಭೇದ ಹಳೆಗನ್ನಡದ ಪದಗಳಲ್ಲಿಲ್ಲ.

ವೇದಕಾಲದಲ್ಲಿದ್ದು ಅನಂತರ ಇಲ್ಲವಾಗಿರುವ ಈ ಉಚ್ಚಾರಣಾಭೇದವನ್ನು ವೇದಗಳ ಬರಹದಲ್ಲಿ ಮಾತ್ರ ಸೂಚಿಸುತ್ತೇವಲ್ಲದೆ ಸಂಸ್ಕೃತ ಕಾವ್ಯಗಳ ಬರಹದಲ್ಲಿ ಸೂಚಿಸುವುದಿಲ್ಲ. (ಆದರೆ ಈ ರೀತಿ ಉಚ್ಚಾರಣೆಯಲ್ಲಿಲ್ಲದ ವ್ಯತ್ಯಾಸವನ್ನು ಬರಹದಲ್ಲಿ ಕಾಣಿಸದಿರುವುದರಿಂದಾಗಿ 'ಸಂಸ್ಕೃತಿ ನಾಶ'ವಾಗಿದೆಯೆಂದು, ಮತ್ತು ಕಾವ್ಯಗಳ ಕಾಲದ ಸಂಸ್ಕೃತ ಪದಗಳಲ್ಲೂ ಈ ವ್ಯತ್ಯಾಸವನ್ನು ಸೂಚಿಸಬೇಕೆಂದು ಯಾರೂ ಹೇಳುವ ಹಾಗೆ ಕಾಣಿಸುವುದಿಲ್ಲ).

## ೩.೬ ವರ್ಣಗಳ ಗುಂಪುಗಳು

ಒಂದು ಭಾಷೆಯಲ್ಲಿ ಬರುವ ವರ್ಣಗಳನ್ನು ಯಾವ ರೀತಿಯ ಗುಂಪುಗಳಲ್ಲಿ ವಿಂಗಡಿಸಿ ಹೇಳಬೇಕು ಎಂಬುದು ಅವುಗಳ ಉತ್ಪಾದನೆ, ಬಳಕೆ ಮತ್ತು ಚರಿತ್ರೆಯಲ್ಲಿ ಕಾಣಿಸುವ ಗುಣಧರ್ಮಗಳನ್ನವಲಂಬಿಸಿದೆ. ಇವು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಬೇರೆ

ಬೇರೆಯಾಗಿರಲು ಸಾಧ್ಯವಿದೆಯಾದ ಕಾರಣ, ವರ್ಣಗಳನ್ನು ಯಾವ ರೀತಿಯ ಗುಂಪುಗಳಲ್ಲಿ ಸೇರಿಸಿ ಹೇಳಬೇಕು ಎಂಬುದೂ ಭಾಷೆಯಿಂದ ಭಾಷೆಗೆ ಬೇರೆ ಬೇರೆಯಾಗಿರಲು ಸಾಧ್ಯವಿದೆ.

### ೩.೬.೧ ಸಂಸ್ಕೃತದ ಸ್ವರಗಳು

ಇಂಡೋ-ಯುರೋಪಿಯನ್ ಭಾಷಾಕುಟುಂಬದ ಮೂಲಭಾಷೆಯಲ್ಲಿದ್ದ ಸ್ವರಗಳಲ್ಲಿ ಅ, ಇ ಮತ್ತು ಉ ಎಂಬ ಮೂರು ಸ್ವರಗಳು ಮಾತ್ರ ಸಂಸ್ಕೃತದಲ್ಲಿ ಬದಲಾಗದೆ ಉಳಿದಿವೆ; ಇವು ಗಿಡ್ಡ (ಹ್ರಸ್ವ) ಸ್ವರಗಳಿರಬಹುದು, ಇಲ್ಲವೇ ಉದ್ದ (ದೀರ್ಘ) ಸ್ವರಗಳಿರಬಹುದು. ಮೂಲ ಭಾಷೆಯ ಎಕಾರ-ಏಕಾರ ಮತ್ತು ಒಕಾರ-ಓಕಾರಗಳು ಸಂಸ್ಕೃತದಲ್ಲಿ ಅಕಾರ-ಆಕಾರಗಳಾಗಿ ಬದಲಾಗಿವೆ.

ಈ ಎಲ್ಲಾ ಸ್ವರಗಳನ್ನೂ ಹಾಗೆಯೇ ಉಳಿಸಿಕೊಂಡಿರುವ ಲ್ಯಾಟಿನ್ ಭಾಷೆಯ ಪದಗಳೊಂದಿಗೆ ಸಂಸ್ಕೃತ ಪದಗಳನ್ನು ಹೋಲಿಸಿ ನೋಡಿದಾಗ ಈ ವಿಷಯ ಸ್ಪಷ್ಟವಾಗುತ್ತದೆ:

| | **ಸಂಸ್ಕೃತ** | **ಲ್ಯಾಟಿನ್** | |
|---|---|---|---|
| (೧ಕ) | ಅಯಸ್ | ಅಎಸ್ | ‘ಲೋಹ’ |
| | ಅಪ | ಅಬ್ | ‘ಆಚೆ’ |
| | ಹಂಸ | ಅನ್ಸೆರ್ | ‘ಹಂಸ’ |
| | ಮಾತರ್ | ಮಾತೆರ್ | ‘ತಾಯಿ’ |
| | ಸ್ವಾದು | ಸುಆವಿಸ್ | ‘ಸಿಹಿ’ |
| (೧ಖ) | ಅಸ್ತಿ | ಎಸ್ | ‘ಇದೆ’ |
| | ಮಧ್ಯ | ಮೆದಿಉಸ್ | ‘ನಡುವೆ’ |
| | ಚ | ಕೆ | ‘ಮತ್ತು’ |
| | ರಾಜನ್ | ರೇಕ್ಸ್ | ‘ಅರಸು’ |
| | ಸಾಮಿ | ಸೇಮಿ | ‘ಅರೆ’ |
| (೧ಗ) | ಅವಿ | ಒವಿಸ್ | ‘ಕುರಿ’ |
| | ಅಸ್ಥಿ | ಒಸ್ | ‘ಎಲುಬು’ |
| | ಪತಿ | ಪೊತಿಸ್ | ‘ಗಂಡ, ಸಮರ್ಥ’ |
| | ಕಸ್ | ಕೊದ್ | ‘ಯಾರು’ |
| | ಆಸ್ | ಓಸ್ | ‘ಬಾಯಿ’ |
| | ಪಾ | ಪೋತುಸ್ | ‘ಕುಡಿ’ |

ಮೇಲೆ (೧ಕ)ದಲ್ಲಿ ಸಂಸ್ಕೃತದ ಅಕಾರ ಮತ್ತು ಆಕಾರಗಳು ಲ್ಯಾಟಿನ್‌ನಲ್ಲಿ ಹಾಗೆಯೇ ಕಾಣಿಸಿಕೊಳ್ಳುತ್ತವೆ; ಆದರೆ, (೧ಖ)ದಲ್ಲಿ ಅವು ಎಕಾರ-ಏಕಾರಗಳಾಗಿ ಕಾಣಿಸಿಕೊಳ್ಳುತ್ತವೆ, ಮತ್ತು (೧ಗ)ದಲ್ಲಿ ಒಕಾರ-ಓಕಾರಗಳಾಗಿ ಕಾಣಿಸಿಕೊಳ್ಳುತ್ತವೆ.

ಮೂಲ ಇಂಡೋ-ಯುರೋಪಿಯನ್‌ನಲ್ಲಿ (೧ಕ)ದಲ್ಲಿ ಕಾಣಿಸಿರುವಂತಹ ಪದಗಳಲ್ಲಿ ಅಕಾರ ಮತ್ತು ಆಕಾರಗಳಿದ್ದುವೆಂದೂ, (೧ಖ)ದಲ್ಲಿ ಕಾಣಿಸಿರುವಂತಹ ಪದಗಳಲ್ಲಿ ಎಕಾರ ಮತ್ತು ಏಕಾರಗಳಿದ್ದುವೆಂದೂ, ಮತ್ತು (೧ಗ)ದಲ್ಲಿ ಕಾಣಿಸಿರುವಂತಹ ಪದಗಳಲ್ಲಿ ಒಕಾರ ಮತ್ತು ಓಕಾರಗಳಿದ್ದುವೆಂದೂ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ (ಬರೋ ೧೯೫೫ ನೋಡಿ). ಇವೆಲ್ಲವೂ ಸಂಸ್ಕೃತದಲ್ಲಿ ಅಕಾರ ಮತ್ತು ಆಕಾರಗಳಾಗಿ ಬದಲಾಗಿವೆ.

ಸಂಸ್ಕೃತದಲ್ಲಿ ಗಿಡ್ಡ ಎಕಾರ ಮತ್ತು ಒಕಾರಗಳಿಲ್ಲದಿರುವುದಕ್ಕೆ ಮೂಲ ಭಾಷೆಯ ಎಕಾರ-ಒಕಾರಗಳು ಅಕಾರವಾಗಿರುವ ಮೇಲಿನ ಬದಲಾವಣೆಯೇ ಕಾರಣ. ಉದ್ದ ಏಕಾರ ಮತ್ತು ಓಕಾರಗಳು ಸಂಸ್ಕೃತ ಪದಗಳಲ್ಲಿ ಕಾಣಿಸುವುವಾದರೂ ಅವು ಮೂಲ ಪದಗಳಲ್ಲಿದ್ದ ಏಕಾರ-ಓಕಾರಗಳಲ್ಲ; ಅವುಗಳಲ್ಲಿ ಕೆಲವು ಮೂಲ ಭಾಷೆಯ ಅಇ, ಎಇ ಮತ್ತು ಒಇ ಎಂಬ ಸ್ವರಜೋಡಿಗಳು ಏ ಎಂದಾದುದರಿಂದಾಗಿ, ಮತ್ತು ಅಉ, ಎಉ, ಒಉ ಎಂಬವುಗಳು ಓ ಆದುದರಿಂದಾಗಿ ಕಾಣಿಸಿಕೊಳ್ಳುವವುಗಳು.

ಉದಾಹರಣೆಗಾಗಿ, ಸಂಸ್ಕೃತದ ವೇದ ಪದಕ್ಕೆ ಸರಿಯಾಗಿ ಗ್ರೀಕ್ ಭಾಷೆಯಲ್ಲಿ ಒಇದ ಎಂದಿದೆ, ಮತ್ತು ತೇ ಎಂಬುದಕ್ಕೆ ಸರಿಯಾಗಿ ತೊಇ ಎಂದಿದೆ; ಸಂಸ್ಕೃತದ ಓಜಸ್ ಪದಕ್ಕೆ ಸರಿಯಾಗಿ ಲ್ಯಾಟಿನ್‌ನಲ್ಲಿ ಅಉಗುಸ್ತುಸ್ ಎಂದಿದೆ, ಮತ್ತು ಶೋಷ- ಎಂಬುದಕ್ಕೆ ಸರಿಯಾಗಿ ಲಿಥುವೇನಿಯನ್ ಭಾಷೆಯಲ್ಲಿ ಸಉಸಸ್ ಎಂದಿದೆ.

ಇದಲ್ಲದೆ, ಸೇರಿಕೆಯ ನಿಯಮಗಳ ಮೂಲಕವೂ ಈ ಎರಡು ಸ್ವರಗಳು ಸಂಸ್ಕೃತದಲ್ಲಿ ಸಿದ್ಧವಾಗುತ್ತವೆ. ಉದಾಹರಣೆಗಾಗಿ, ರಾಜೇಂದ್ರ ಪದದಲ್ಲಿ ಕಾಣಿಸುವ ಏಕಾರ ರಾಜ ಪದದ ಕೊನೆಯ ಅಕಾರದೊಂದಿಗೆ ಇಂದ್ರ ಪದದ ಆದಿಯಲ್ಲಿರುವ ಇಕಾರ ಸೇರಿದುದರಿಂದಾಗಿ ಸಿದ್ಧವಾಗಿದೆ, ಮತ್ತು ಸೂರ್ಯೋದಯ ಪದದಲ್ಲಿ ಕಾಣಿಸುವ ಓಕಾರ ಸೂರ್ಯ ಪದದ ಕೊನೆಯಲ್ಲಿ ಬರುವ ಅಕಾರದೊಂದಿಗೆ ಉದಯ ಪದದ ಆದಿಯಲ್ಲಿರುವ ಉಕಾರ ಸೇರಿದುದರಿಂದಾಗಿ ಸಿದ್ಧವಾಗಿದೆ.

ಈ ಕಾರಣಕ್ಕಾಗಿ, ಏ ಮತ್ತು ಓಗಳನ್ನು ಸಂಸ್ಕೃತದ ವೈಯಾಕರಣಿಗಳು ಅ, ಆ, ಇ, ಈ, ಉ ಮತ್ತು ಊಗಳಿಂದ ಭಿನ್ನವಾಗಿರುವ 'ಗುಣಾಕ್ಷರ'ಗಳೆಂಬ ಪ್ರತ್ಯೇಕವಾದೊಂದು ಗುಂಪಿನಲ್ಲಿ ಇರಿಸುತ್ತಾರೆ.

ಇದೇ ರೀತಿಯಲ್ಲಿ ಸಂಸ್ಕೃತದ ಐ ಮತ್ತು ಔಗಳೆಂಬ ಬೇರೆ ಎರಡು ಸ್ವರಗಳೂ ಮೂಲ ಪದಗಳಲ್ಲಿ ಕಾಣಿಸುವವುಗಳಲ್ಲ. ಇವೂ ಕೂಡ ಸೇರಿಕೆಯ ನಿಯಮಗಳ ಮೂಲಕ ಸಿದ್ಧವಾಗುವವುಗಳಾಗಿದ್ದು, 'ವೃದ್ಧ್ಯಕ್ಷರ'ಗಳೆಂಬ ಬೇರೆ ಒಂದು ಗುಂಪಿನಲ್ಲಿ ಸೇರುತ್ತವೆ; ಉದಾಹರಣೆಗಾಗಿ, ವಿದ್ಯಾ+ಏವ ಎಂಬುದು ವಿದ್ಯೈವ ಎಂದಾಗುತ್ತದೆ, ಮತ್ತು ಅಲ್ಪ+ಓಜಸ್ ಎಂಬುದು ಅಲ್ಪೌಜಸ್ ಎಂದಾಗುತ್ತದೆ.

ಏಇ, ಓಇ, ಏಉ, ಓಉ ಮೊದಲಾದ ಸ್ವರಜೋಡಿಗಳಿಂದಲೂ ಐ ಮತ್ತು ಔಗಳು ಬಂದಿರಲು ಸಾಧ್ಯವಿದೆ. ಉದಾಹರಣೆಗಾಗಿ, ತಸ್ಮೈ ಎಂಬುದರಲ್ಲಿರುವ ಐಕಾರ ಓಇ ಸ್ವರಜೋಡಿಯಿಂದಲೂ, ನೌಃ ಎಂಬುದರಲ್ಲಿರುವ ಔಕಾರ ಆಉ ಸ್ವರಜೋಡಿಯಿಂದಲೂ, ದ್ಯೌಃ ಎಂಬುದರಲ್ಲಿರುವ ಔಕಾರ ಏಉ ಸ್ವರ ಜೋಡಿಯಿಂದಲೂ, ಮತ್ತು ದೇವ್ಯೈಃ ಎಂಬುದರಲ್ಲಿರುವ ಐಕಾರ ಆಇ ಸ್ವರ ಜೋಡಿಯಿಂದಲೂ ಬಂದಿದೆ.

### ೩.೬.೨ ಹಳೆಗನ್ನಡದ ಸ್ವರಗಳು

ಸ್ವರಗಳನ್ನು ಬೇರೆ ಬೇರೆ ಗುಂಪುಗಳಲ್ಲಿ ಸೇರಿಸುವ ಮೇಲಿನ ಸಂಸ್ಕೃತದ ನಿಯಮಗಳಿಗಿಂತ ಕನ್ನಡದ ನಿಯಮಗಳು ತೀರಾ ಭಿನ್ನವಾಗಿವೆ. ಹಳೆಗನ್ನಡದಲ್ಲಿ ಅ, ಇ, ಉ, ಎ ಮತ್ತು ಒ ಎಂಬ ಐದು ಸ್ವರಗಳೂ ಮೂಲ ಪದಗಳಲ್ಲೇನೇ ಕಾಣಿಸಿಕೊಳ್ಳುತ್ತವೆ. ಇವೆಲ್ಲವೂ ಉದ್ದ ಮತ್ತು ಗಿಡ್ಡ ಎಂಬುದಾಗಿ ಎರಡೆರಡು ರೂಪಗಳಲ್ಲಿ ಬರುತ್ತವೆ. ಇವೆಲ್ಲವನ್ನೂ ಕನ್ನಡ ಭಾಷೆ ತನ್ನ ಮೂಲಭಾಷೆಯಿಂದಲೇನೇ ನೇರವಾಗಿ ಪಡೆದುಕೊಂಡಿದೆ.

ಮೂಲದ್ರಾವಿಡದ ಈ ಸ್ವರಗಳಲ್ಲಿ ಇಕಾರ-ಉಕಾರಗಳು ಮಾತ್ರ ಕೆಲವು ಸಂದರ್ಭಗಳಲ್ಲಿ (ಅವುಗಳ ಅನಂತರ ಅಕಾರ ಬಂದಾಗ) ಎಕಾರ-ಒಕಾರಗಳಾಗಿ ಕನ್ನಡದಲ್ಲಿ ಬದಲಾಗಿವೆ. ನಿಲ್ಲು-ನೆಲೆ, ಇರ್-ಎರಡು, ಸುಡು-ಸೊಡರು, ಕುಂದು-ಕೊರತೆ ಮೊದಲಾದ ಕೆಲವು ಪದಯುಗ್ಮಗಳಲ್ಲಿ ಈ ಬದಲಾವಣೆಯ ಪರಿಣಾಮವನ್ನು ಕಾಣಬಹುದು.

ಬೇರೆ ಕೆಲವು ಸಂದರ್ಭಗಳಲ್ಲಿ (ಇಕಾರ-ಉಕಾರಗಳು ಅನಂತರ ಬಂದಾಗ) ಎಕಾರ-ಒಕಾರಗಳು ಇಕಾರ-ಉಕಾರಗಳಾಗಿವೆ. ಬಿಳಿ-ಬೆಳ್ಳಗೆ, ಕಿಸು-ಕೆಂಪು, ತುಱಿಲ್-ತೊಱ್ಱು, ಉಸಿರು-ಒಸಗೆ ಮೊದಲಾದ ಪದಯುಗ್ಮಗಳನ್ನು ಈ ಬದಲಾವಣೆಗೆ ಉದಾಹರಣೆಗಳನ್ನಾಗಿ ಕೊಡಬಹುದು (ಜಾಸ್ತಿ ವಿವರಗಳಿಗೆ ಭಟ್ ೨೦೦೭ ನೋಡಿ). ಆದರೆ, ಈ ಎರಡು ರೀತಿಯ ಬದಲಾವಣೆಗಳೂ ಮೇಲೆ ವಿವರಿಸಿದಂತಹ ಸಂಸ್ಕೃತದ ಬದಲಾವಣೆಗಳಿಗಿಂತ ತೀರ ಭಿನ್ನವಾದವುಗಳು.

ಇಕಾರ-ಎಕಾರಗಳು ನಾಲಿಗೆಯ ಮುಂಭಾಗದಲ್ಲಿ ಹುಟ್ಟುವವುಗಳಾಗಿದ್ದು ಒಂದು ಗುಂಪಿನಲ್ಲೂ, ಉಕಾರ-ಒಕಾರಗಳು ನಾಲಿಗೆಯ ಹಿಂಭಾಗದಲ್ಲಿ ಹುಟ್ಟುವವುಗಳಾಗಿದ್ದು ಇನ್ನೊಂದು ಗುಂಪಿನಲ್ಲೂ ಸೇರುತ್ತವೆ. ನಾಲಿಗೆಯ ನಡು ಭಾಗದಲ್ಲಿ ಹುಟ್ಟುವ ಅಕಾರ ಕೆಲವು ವಿಷಯಗಳಲ್ಲಿ ಇಕಾರ-ಎಕಾರಗಳ ಹಾಗೆ ಮತ್ತು ಬೇರೆ ಕೆಲವು ವಿಷಯಗಳಲ್ಲಿ ಉಕಾರ-ಒಕಾರಗಳ ಹಾಗೆ ಕಾಣಿಸಿಕೊಳ್ಳುತ್ತದೆ.

ಇದಲ್ಲದೆ, ಬಾಯಿಯನ್ನು ಸ್ವಲ್ಪವೇ ತೆರೆದು ಉಚ್ಚರಿಸುವ ಇಕಾರ-ಉಕಾರಗಳು ಒಂದು ಗುಂಪಿನಲ್ಲೂ ಬಾಯಿಯನ್ನು ಇದಕ್ಕಿಂತ ಸ್ವಲ್ಪ ಜಾಸ್ತಿ ತೆರೆದು ಉಚ್ಚರಿಸುವ ಎಕಾರ-ಒಕಾರ-ಅಕಾರಗಳು ಇನ್ನೊಂದು ಗುಂಪಿನಲ್ಲೂ ಸೇರುತ್ತವೆ.

ಈ ರೀತಿ, ಸ್ವರಗಳ ಹುಟ್ಟನ್ನಾಧರಿಸಿ ರಚಿಸಿದ ವರ್ಗೀಕರಣವೇ ಕನ್ನಡದ ಮಟ್ಟಿಗೆ ಹೆಚ್ಚು ಉಪಯುಕ್ತವಾದುದು. ಇದು ಮೇಲೆ ವಿವರಿಸಿದ ಸಂಸ್ಕೃತ ಸ್ವರಗಳ ಸಮಾನಸ್ವರ-ಗುಣಸ್ವರ-ವೃದ್ಧಿಸ್ವರ ವರ್ಗೀಕರಣಕ್ಕಿಂತ ತೀರ ಭಿನ್ನವಾದುದೆಂಬುದನ್ನು ಗಮನಿಸಬಹುದು.

ಹಳೆಗನ್ನಡದ ಸೇರಿಕೆಯ ನಿಯಮಗಳನ್ನು ಬರೆಯುವಲ್ಲಿ, ಮೇಲಿನ ಕನ್ನಡದ್ದೇ ಆದ ವರ್ಗೀಕರಣ ಸಹಾಯಕವಾಗುತ್ತದೆ. ಉದಾಹರಣೆಗಾಗಿ, ಇಕಾರ ಮತ್ತು ಎಕಾರಗಳ ಅನಂತರ ಬೇರೆ ಸ್ವರ ಬಂದಾಗ ಹಳೆಗನ್ನಡದಲ್ಲಿ ಅವೆರಡರ ನಡುವೆ ಕೆಲವು ಸಂದರ್ಭಗಳಲ್ಲಿ ಯಕಾರವೊಂದು ಆಗಮವಾಗಿ ಬಂದು ಸೇರುತ್ತದೆ (ಬೂದಿಯಾದುದು, ಈಯೊಡಲ್, ಕೋಗಿಲೆಯಾಗಿ); ಇದಕ್ಕೆ ಬದಲು, ಉಕಾರ ಮತ್ತು ಒಕಾರಗಳ ಅನಂತರ ಬೇರೆ ಸ್ವರ ಬಂದಿದೆಯಾದಲ್ಲಿ, ಅವುಗಳ ನಡುವೆ ಯಕಾರದ ಬದಲು ವಕಾರ ಬರುತ್ತದೆ (ಕೈದುವೆಲ್ಲಂ, ಪೂವಿನ).

### ೩.೬.೩ ವ್ಯಂಜನಾಕ್ಷರಗಳು

ಸಂಸ್ಕೃತದ ವ್ಯಂಜನಾಕ್ಷರಗಳನ್ನು ವರ್ಗೀಯಗಳು (ಇಲ್ಲವೇ ಸ್ಪರ್ಶಗಳು) ಮತ್ತು ಅವರ್ಗೀಯಗಳು ಎಂಬುದಾಗಿ ಎರಡು ಮುಖ್ಯ ಗುಂಪುಗಳಲ್ಲಿ ವಿಂಗಡಿಸಲಾಗಿದೆ. ಇವುಗಳಲ್ಲಿ

ವರ್ಗೀಯಗಳನ್ನು ಅವುಗಳ ಸ್ಥಾನವನ್ನಾಧರಿಸಿ ಐದು ವರ್ಗಗಳಲ್ಲಿ ವಿಂಗಡಿಸಲಾಗಿದ್ದು, ಪ್ರತಿಯೊಂದು ವರ್ಗದಲ್ಲೂ ಅಘೋಷ–ಅಲ್ಪಪ್ರಾಣ (ಕಚಟತಪ), ಅಘೋಷ–ಮಹಾಪ್ರಾಣ (ಖಛಠಥಫ), ಘೋಷ–ಅಲ್ಪಪ್ರಾಣ (ಗಜಡದಬ), ಘೋಷ–ಮಹಾಪ್ರಾಣ (ಘಝಢಧಭ), ಮತ್ತು ಅನುನಾಸಿಕ (ಙಞಣನಮ) ಎಂಬುದಾಗಿ ಐದು ರೀತಿಯ ವ್ಯಂಜನಗಳು ಕಾಣಿಸಿಕೊಳ್ಳುತ್ತವೆ. ಅವರ್ಗೀಯಗಳನ್ನು ಅಂತಸ್ಥ (ಯರಲವ) ಮತ್ತು ಊಷ್ಮ (ಸಶಷಹ) ಎಂಬುದಾಗಿ ವಿಂಗಡಿಸಲಾಗಿದೆ.

ಹಳೆಗನ್ನಡದ ವ್ಯಂಜನಗಳನ್ನು ಈ ರೀತಿ ವಿಂಗಡಿಸುವ ಬದಲು, ಬೇರೆ ರೀತಿಯಲ್ಲಿ ವಿಂಗಡಿಸುವುದರಿಂದ ಅದರ ಸೇರಿಕೆಯ ನಿಯಮಗಳನ್ನು ವಿವರಿಸುವ ಕೆಲಸ ಸುಲಭವಾಗುತ್ತದೆ. ಇದಲ್ಲದೆ, ಸಂಸ್ಕೃತದ ವರ್ಗೀಯಗಳಲ್ಲಿ ಕಾಣಿಸುವ ಅಚ್ಚುಕಟ್ಟು ಹಳೆಗನ್ನಡದ ವರ್ಗೀಯಗಳಲ್ಲಿ ಕಾಣಿಸುವುದಿಲ್ಲ. ಉದಾಹರಣೆಗಾಗಿ, ಹಳೆಗನ್ನಡದಲ್ಲಿ ಮಹಾಪ್ರಾಣಾಕ್ಷರಗಳು ಇಲ್ಲವಾದ ಕಾರಣ, ವರ್ಗೀಯಗಳಲ್ಲಿ ಮೂರು ಗುಂಪುಗಳು ಮಾತ್ರ ಉಳಿಯುತ್ತವೆ. ಇಲ್ಲೂ, ಮೂರನೆಯ ಗುಂಪಿನಲ್ಲಿ ಸಂಸ್ಕೃತದ ಹಾಗೆ ಐದು ಅನುನಾಸಿಕಗಳಿರುವ ಬದಲು, ಮೂರು ಅನುನಾಸಿಕಗಳು (ಮನಣ) ಮಾತ್ರ ಇವೆ (ರಾಮಚಂದ್ರರಾವ್ ೧೯೭೨ ನೋಡಿ).

ಇದಲ್ಲದೆ, ಹಳೆಗನ್ನಡದ ಯರಲವಸ ಮತ್ತು ಳಟಱಱಗಳನ್ನು ಮೇಲಿನ ಐದು ವರ್ಗಗಳಲ್ಲೇನೇ ಸೇರಿಸಿ ಹೇಳುವುದರಿಂದ, ಸೇರಿಕೆಯ ನಿಯಮಗಳನ್ನು ವಿವರಿಸುವಲ್ಲಿ ಹೆಚ್ಚಿನ ಪ್ರಯೋಜನವಾಗಬಲ್ಲುದು. ಉದಾಹರಣೆಗಾಗಿ, ಹಳೆಗನ್ನಡದ ಪಬಮಗಳಿಗೂ ವಕ್ಕೂ ನಡುವೆ ಹತ್ತಿರದ ಸಂಬಂಧವಿದೆ, ಮತ್ತು ಡ ಹಾಗೂ ಳಟಱಗಳ ನಡುವೆಯೂ ಹತ್ತಿರದ ಸಂಬಂಧವಿದೆ. ಇವನ್ನು ವಿವರಿಸಲು ಹಳೆಗನ್ನಡಕ್ಕೆ ಸಂಸ್ಕೃತದಿಂದ ಭಿನ್ನವಾದ ವಿಂಗಡಣೆಯನ್ನು ತಯಾರಿಸುವ ಅವಶ್ಯಕತೆಯಿದೆ.

### ೩.೬.೪ ಮಾಹೇಶ್ವರ ಸೂತ್ರಗಳು

ಇಲ್ಲಿ ಗಮನಿಸಬೇಕಾಗಿರುವ ಮುಖ್ಯವಾದ ವಿಷಯವೇನೆಂದರೆ, ಪಾಣಿನಿಯ 'ಮಾಹೇಶ್ವರ ಸೂತ್ರ'ಗಳನ್ನು, ಮತ್ತು ಅವು ಸಾಧ್ಯವಾಗಿಸುವ ವರ್ಣಗಳ ಗುಂಪುಗಳನ್ನು (ಅಣ್, ಅಕ್, ಅಚ್ ಮೊದಲಾದುವನ್ನು) ಸಂಸ್ಕೃತ ಭಾಷೆಯಲ್ಲಿ ವರ್ಣಗಳ ಬಳಕೆ ಎಂತಹದು, ಮತ್ತು ಸೇರಿಕೆಯ (ಸಂಧಿಯ) ನಿಯಮಗಳು ಎಂತಹವು ಎಂಬುದನ್ನು ಸುಲಭವಾಗಿ ವಿವರಿಸಲು ಅನುಕೂಲವಾಗುವಂತೆ ರಚಿಸಲಾಗಿದೆ.

ಉದಾಹರಣೆಗಾಗಿ, ಅಇಉಣ್, ಋಲ್ ̊ಕ್ ಎಂಬ ಎರಡು ಮಾಹೇಶ್ವರ ಸೂತ್ರಗಳು ಸೂಚಿಸುವ ಎಲ್ಲಾ ಸ್ವರಗಳನ್ನೂ (ಅ, ಇ, ಉ, ಋ ಮತ್ತು ಲ್ ̊ ಎಂಬವುಗಳನ್ನು) ಈ ಸೂತ್ರಗಳ ಮೊದಲನೆಯ ಮತ್ತು ಕೊನೆಯ ಅಕ್ಷರಗಳನ್ನು ಒಟ್ಟಿಗೆ ಬಳಸಿ ರಚಿಸಿದ 'ಅಕ್' ಸಂಜ್ಞೆಯ ಮೂಲಕ ಸಂಕ್ಷಿಪ್ತವಾಗಿ ಸೂಚಿಸಲಾಗುತ್ತದೆ. ಇದಕ್ಕೆ ಬದಲು, ಎರಡನೆಯ ಅಕ್ಷರದೊಂದಿಗೆ ಕೊನೆಯ ಅಕ್ಷರವನ್ನು ಸೇರಿಸಿ ರಚಿಸಿದ 'ಇಕ್' ಸಂಜ್ಞೆಯನ್ನು ಬಳಸಿದಲ್ಲಿ, ಅದು ಅಕಾರವನ್ನುಳಿದು ಇತರ ಸ್ವರಗಳನ್ನು ಸೂಚಿಸುತ್ತದೆ.

ಹಳೆಗನ್ನಡದಲ್ಲಿ ಕಂಡುಬರುವ ವರ್ಣಗಳ ಬಳಕೆ ಇದಕ್ಕಿಂತ ತೀರ ಭಿನ್ನವಾಗಿರುವುದಾದ ಕಾರಣ, ಈ ಸೂತ್ರಗಳಾಗಲೀ, ಇಲ್ಲವೆ ಅವು ಸೂಚಿಸುವ ವರ್ಣ ವಿಂಗಡಣೆಗಳಾಗಲೀ ಹಳೆಗನ್ನಡದ ಮಟ್ಟಿಗೆ ಅನುಕೂಲವಾದವುಗಳಲ್ಲ. ಹಾಗಾಗಿ, ಹಳೆಗನ್ನಡ ವ್ಯಾಕರಣಕ್ಕೆ ಬೇಕಾಗುವ ಸಂಜ್ಞೆಗಳನ್ನು ಈ ಸೂತ್ರಗಳ ಸಹಾಯದಿಂದ ಪಡೆಯಲು ಸಾಧ್ಯವಾಗದು.

## ೩.೭ ಸೇರಿಕೆಯ ನಿಯಮಗಳು

ಎರಡು ಅಥವಾ ಜಾಸ್ತಿ ಪದ ಇಲ್ಲವೇ ಪದರೂಪಗಳನ್ನು ವಾಕ್ಯಗಳಲ್ಲಿ ಬಳಸುವಾಗ, ಸಾಮಾನ್ಯವಾಗಿ ಅವು ಒಂದರೊಡನೊಂದು ಸೇರಿಕೊಳ್ಳುತ್ತವೆ, ಮತ್ತು ಹಾಗೆ ಸೇರಿಕೊಳ್ಳುವಾಗ ಅವುಗಳಲ್ಲಿ ಕೆಲವು ಬದಲಾವಣೆಗಳು ನಡೆಯುತ್ತವೆ. ಉದಾಹರಣೆಗಾಗಿ, ಬೇಡ ಗಡಾ ನಿನಗಾತನೊಳ್ ಚಲಂ ಎಂಬ ವಾಕ್ಯದಲ್ಲಿ ನಿನಗೆ ಮತ್ತು ಆತನೊಳ್ ಎಂಬೆರಡು ಪದಗಳು ಒಟ್ಟುಸೇರಿವೆ, ಮತ್ತು ಹೀಗೆ ಒಟ್ಟುಸೇರುವಾಗ, ನಿನಗೆ ಪದದ ಕೊನೆಯ ಎಕಾರ ಬಿದ್ದುಹೋಗಿದೆ.

ಎರಡು ಪದಗಳನ್ನು ಒಟ್ಟು ಸೇರಿಸಿ ಜೋಡುಪದಗಳನ್ನು ತಯಾರಿಸುವಾಗಲೂ ಆ ಪದಗಳಲ್ಲಿ ಬರುವ ವರ್ಣಗಳಲ್ಲಿ ಹಲವು ರೀತಿಯ ಬದಲಾವಣೆಗಳಾಗಬಲ್ಲುವು. ಉದಾಹರಣೆಗಾಗಿ, ಹಳೆಗನ್ನಡದ ಕಣ್ ಪದಕ್ಕೆ ನೀರ್ ಪದವನ್ನು ಸೇರಿಸಿ ಕಣ್ಣೀರ್ ಎಂಬ ಜೋಡುಪದವನ್ನು ತಯಾರಿಸುವಾಗ, ಎರಡನೆಯ ಪದದ ಮೊದಲನೆಯ ವರ್ಣ ನ್ ಎಂದಿದ್ದುದು ಣ್ ಎಂದಾಗಿರುವುದನ್ನು ಗಮನಿಸಬಹುದು.

ಇದಲ್ಲದೆ, ಪದಗಳಿಗೆ ಪ್ರತ್ಯಯಗಳನ್ನು ಸೇರಿಸಿದಾಗಲೂ ಪದಗಳಲ್ಲಿ ಇಲ್ಲವೇ ಪ್ರತ್ಯಯಗಳಲ್ಲಿ ಕೆಲವು ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ. ಉದಾಹರಣೆಗಾಗಿ, ನಗು ಕ್ರಿಯಾಪದಕ್ಕೆ ಹಿಂದಿನ ಸಮಯವನ್ನು ಸೂಚಿಸುವ ದ್ ಪ್ರತ್ಯಯವನ್ನು ಮತ್ತು ಘಟಕವನ್ನು ಸೂಚಿಸುವ ಅನ್ ಪ್ರತ್ಯಯವನ್ನು ಸೇರಿಸಿದಾಗ ನಕ್ಕನ್ ಎಂಬ ರೂಪ ಸಿದ್ಧವಾಗುತ್ತದೆ; ಇಲ್ಲಿ ನಗು ಎಂಬುದು ನಕ್ ಎಂದಾಗಿದೆ, ಮತ್ತು ದ್ ಎಂಬುದು ಕ್ ಎಂದಾಗಿದೆ.

ವಾಕ್ಯಗಳಲ್ಲಿ ಪದ ಮತ್ತು ಪ್ರತ್ಯಯಗಳನ್ನು ಬಳಸುವಲ್ಲಿ ನಡೆಯುವ ಇಂತಹ ಬದಲಾವಣೆಗಳನ್ನು ಸಂಸ್ಕೃತ ವ್ಯಾಕರಣಗಳಲ್ಲಿ 'ಸಂಧಿ ನಿಯಮ'ಗಳೆಂದು ಕರೆಯಲಾಗಿದೆ. ಕನ್ನಡದಲ್ಲಿ ಇವನ್ನೇ 'ಸೇರಿಕೆಯ ನಿಯಮ'ಗಳೆಂದು ಕರೆಯಬಹುದು. ಇಂತಹ ನಿಯಮಗಳು ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರಾಗಿರುತ್ತವೆ. ಸಂಸ್ಕೃತ ಮತ್ತು ಹಳೆಗನ್ನಡಗಳ ನಡುವೆ ಈ ವಿಷಯದಲ್ಲಿ ಹಲವು ಮುಖ್ಯವಾದ ವ್ಯತ್ಯಾಸಗಳಿವೆ. ಈ ವ್ಯತ್ಯಾಸಗಳಿಗೆಲ್ಲ ಈ ಎರಡು ಭಾಷೆಗಳು ಬಳಸುವ ವ್ಯಾಕರಣದ ಮೂಲತತ್ವಗಳು ಬೇರೆ ಬೇರಾಗಿರುವುದೇ ಮುಖ್ಯ ಕಾರಣ.

### ೩.೭.೧ ಪದಮಧ್ಯ ಸಂಧಿ ಮತ್ತು ಪದಾಂತ್ಯ ಸಂಧಿ

ಸಂಸ್ಕೃತ ವ್ಯಾಕರಣಗಳಲ್ಲಿ 'ಪದಮಧ್ಯ ಸಂಧಿ' ಮತ್ತು 'ಪದಾಂತ್ಯ ಸಂಧಿ' ಎಂಬುದಾಗಿ ಸಂಧಿ ನಿಯಮಗಳನ್ನು ಎರಡು ಗುಂಪುಗಳಲ್ಲಿ ವಿಂಗಡಿಸಲಾಗಿದೆ. ಎರಡು ಪದ ಇಲ್ಲವೇ ಪದರೂಪಗಳು ವಾಕ್ಯದಲ್ಲಿ ಒಂದರ ಅನಂತರ ಒಂದರಂತೆ ಬಂದಾಗ ಅವುಗಳಲ್ಲಿ ನಡೆಯುವ ಬದಲಾವಣೆಗಳು ಪದಾಂತ್ಯ ಸಂಧಿಗಳು. ನಿಜಕ್ಕೂ ಇವು ಪದಾಂತ್ಯದಲ್ಲಿ ಮಾತ್ರವಲ್ಲದೆ ಪದಾದಿಯಲ್ಲಿಯೂ ನಡೆಯಬಲ್ಲುವು.

ಪದಕ್ಕೆ ಪದವನ್ನು ಸೇರಿಸಿ ಬೇರೊಂದು ಪದವನ್ನು ತಯಾರಿಸುವಲ್ಲಿ, ಇಲ್ಲವೇ ಪದಕ್ಕೆ ಪ್ರತ್ಯಯವನ್ನು ಸೇರಿಸಿ ಪದರೂಪವನ್ನು ಇಲ್ಲವೇ ಬೇರೊಂದು ಪದವನ್ನು ತಯಾರಿಸುವಲ್ಲಿ ನಡೆಯುವ ಬದಲಾವಣೆಗಳು ಪದಮಧ್ಯ ಸಂಧಿಗಳು.

ಸಂಸ್ಕೃತದ ಪದಮಧ್ಯ ಸಂಧಿನಿಯಮಗಳಲ್ಲಿ ಹೆಚ್ಚಿನವೂ ಪದಾಂತ್ಯ ಸಂಧಿ ನಿಯಮಗಳ ಹಾಗೆಯೇ ಇವೆ. ಆದರೆ, ಕೆಲವು ನಿಯಮಗಳು ಇವೆರಡರಲ್ಲಿ ಬೇರೆ ಬೇರಾಗಿವೆ. ಉದಾಹರಣೆಗಾಗಿ, ರಕಾರ ಇಲ್ಲವೇ ವಕಾರದಲ್ಲಿ ಕೊನೆಗೊಳ್ಳುವ ಕೆಲವು ಧಾತುಗಳಿಗೆ ವ್ಯಂಜನದಲ್ಲಿ ಸುರುವಾಗುವ ಪ್ರತ್ಯಯವೊಂದು ಸೇರಿದಾಗ, ಆ ಧಾತುಗಳ ಕೊನೆಯ ವ್ಯಂಜನದ ಹಿಂದಿರುವ ಇಕಾರ ಮತ್ತು

ಉಕಾರಗಳು ದೀರ್ಘಸ್ವರಗಳಾಗುತ್ತವೆ (ದಿವ್+ಯಾಮಿ – ದೀವ್ಯಾಮಿ, ಗಿರ್+ಭಿಃ – ಗೀರ್ಭಿಃ, ಪುರ್+ಭಿಃ – ಪೂರ್ಭಿಃ). ಇದು ಸಂಸ್ಕೃತದ ಪದಮಧ್ಯ ಸಂಧಿ ನಿಯಮ. ಪದಾಂತ್ಯ ಸಂಧಿಯಲ್ಲಿ ಇಂತಹ ನಿಯಮವಿಲ್ಲ.

ಪದಾಂತ್ಯ ಸಂಧಿಯಲ್ಲಿ ಪದಗಳ ಕೊನೆಯ ಕಟತಪಗಳು ಅವುಗಳ ಅನಂತರ ಸ್ವರ ಬಂದಾಗ ಗಡದಬಗಳಾಗುತ್ತವೆ (ಸಮ್ಯಕ್+ಉಕ್ತಂ – ಸಮ್ಯಗುಕ್ತಂ, ತತ್+ಅರ್ಹತಿ – ತದರ್ಹತಿ); ಆದರೆ, ಪದಮಧ್ಯ ಸಂಧಿಯಲ್ಲಿ ಇವು ಸಾಮಾನ್ಯವಾಗಿ ಹಾಗೆಯೇ ಉಳಿಯುತ್ತವೆ (ಸರ್ವಶಕ್+ಅಂ– ಸರ್ವಶಕಂ, ಮರುತ್+ಆ – ಮರುತಾ).

ಹಳೆಗನ್ನಡದಲ್ಲೂ ಇಂತಹ ಪದಮಧ್ಯ ಮತ್ತು ಪದಾಂತ್ಯ ಸಂಧಿನಿಯಮಗಳೆಂಬ ಎರಡು ಬಗೆಯ ನಿಯಮಗಳಿದ್ದು, ಅವು ಕೆಲವು ವಿಷಯಗಳಲ್ಲಿ ಒಂದಕ್ಕಿಂತ ಒಂದು ಭಿನ್ನವಾಗಿವೆ. ಇದಲ್ಲದೆ ಈ ಎರಡು ಬಗೆಯ ನಿಯಮಗಳೂ ಹಲವು ವಿಷಯಗಳಲ್ಲಿ ಸಂಸ್ಕೃತದ ಪದಮಧ್ಯ ಮತ್ತು ಪದಾಂತ್ಯ ಸಂಧಿನಿಯಮಗಳಿಂದ ಭಿನ್ನವಾಗಿವೆ.

ಉದಾಹರಣೆಗಾಗಿ, ಹಳೆಗನ್ನಡದ ಕೆಲವು ಧಾತುಗಳಿಗೆ ವ್ಯಂಜನದಲ್ಲಿ ಸುರುವಾಗುವ ಪ್ರತ್ಯಯಗಳನ್ನು ಸೇರಿಸಿದಾಗ, ಅವುಗಳ ಉದ್ದಸ್ವರ ಗಿಡ್ಡವಾಗುತ್ತದೆ (ಕಾಣ್+ದ್+ಅನ್ – ಕಂಡನ್, ಬೀೞ್+ದ್+ಅಳ್ – ಬಿಣ್ದಳ್, ಏೞ್+ದ್+ಅ – ಎಣ್ದ). ಕಾರಿರುಳ್–ಕರ್ಬಸು, ಪೇರಾನೆ–ಪೆರ್ದೆರೆ, ಮಾರ್ವಲ–ಮಱುವಕ್ಕ ಮೊದಲಾದವುಗಳಲ್ಲಿರುವ ಗುಣಪದಗಳ ಬಳಕೆಯಲ್ಲಿ, ಮತ್ತು ಓರಡಿ–ಒರ್ವೆಸರ್, ಈರೊಡಲ್–ಇರ್ವಲ ಮೊದಲಾದವುಗಳಲ್ಲಿರುವ ಎಣಿಕೆಯ ಪದಗಳ ಬಳಕೆಯಲ್ಲಿ ಇಂತಹ ಬದಲಾವಣೆಯನ್ನು ಕಾಣಬಹುದು.

ಆದರೆ, ಮೇಲೆ ಕೊಟ್ಟಿರುವ ಗಿಡ್ಡಸ್ವರ ಉದ್ದವಾಗುವ ಸಂಸ್ಕೃತದ ಪದಮಧ್ಯ ಸಂಧಿನಿಯಮಕ್ಕಿಂತ ಹಳೆಗನ್ನಡದ ಈ ಬದಲಾವಣೆ ತೀರ ಭಿನ್ನವಾಗಿದೆ. ವ್ಯಂಜನ ಪರವಾದಾಗ, ಸಂಸ್ಕೃತದಲ್ಲಿ ಗಿಡ್ಡಸ್ವರ ಉದ್ದವಾಗುತ್ತದೆ; ಆದರೆ, ಹಳೆಗನ್ನಡದಲ್ಲಿ ಉದ್ದಸ್ವರ ಗಿಡ್ಡವಾಗುತ್ತದೆ.

ಇದಲ್ಲದೆ, ಹಳೆಗನ್ನಡದಲ್ಲಿ ಈ ಉದ್ದಸ್ವರ ಗಿಡ್ಡಸ್ವರವಾಗುವ ನಿಯಮ ಪದಮಧ್ಯ ಸಂಧಿಯಲ್ಲಿ ಕಾಣಿಸುತ್ತಿದೆಯಲ್ಲದೆ ಪದಾಂತ್ಯ ಸಂಧಿಯಲ್ಲಿ ಕಾಣಿಸುವುದಿಲ್ಲ. ಇಂತಹವೇ ಬೇರೆಯೂ ಕೆಲವು ನಿಯಮಗಳನ್ನು ಹಳೆಗನ್ನಡದ ಪದಮಧ್ಯ ಸಂಧಿಯಲ್ಲಿ ಮಾತ್ರವೇ ಕಾಣಲು ಸಾಧ್ಯವಿದೆ.

ಕೇಶಿರಾಜನು (ಸೂ. ೬೦)ರಲ್ಲಿ ಪದಮಧ್ಯಂ ಮತ್ತು ಪದದಂತ್ಯಂ ಎಂಬುದಾಗಿ ಎರಡು ಬಗೆಯ ಸಂಧಿಗಳಿವೆಯೆಂದು ಹೇಳಿದ್ದಾನೆ; ಆದರೆ, ಅನಂತರ ಎಲ್ಲೂ ಈ ವಿಭಜನೆಯನ್ನು ಬಳಸಿಕೊಂಡಿರುವ ಹಾಗೆ ಕಾಣಿಸುವುದಿಲ್ಲ. ಸಂಧಿನಿಯಮಗಳಿಗೆ ಉದಾಹರಣೆಗಳನ್ನು ಕೊಡುವಾಗ ಕೆಲವು ಕಡೆಗಳಲ್ಲಿ ಪದಮಧ್ಯ ಸಂಧಿಯಾಗಿರುವವುಗಳನ್ನು (ತೋಯಲುಂ, ನೋಯಿಸಿದಂ) ಕೊಟ್ಟರೆ, ಇನ್ನು ಕೆಲವು ಕಡೆಗಳಲ್ಲಿ ಪದಾಂತ್ಯ ಸಂಧಿಯಾಗಿರುವವುಗಳನ್ನು (ಜೋಯೆಂದು, ಸ್ತ್ರೀಯೆಂಬ) ಕೊಟ್ಟಿದ್ದಾನೆ.

## ೩.೮ ಸಾರಾಂಶ

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ವರ್ಣಗಳ ಸಂಖ್ಯೆಯಲ್ಲಿ ಮಾತ್ರವಲ್ಲ, ಅವುಗಳ ಬಳಕೆಯಲ್ಲೂ ವ್ಯತ್ಯಾಸವಿದೆ. ಹಾಗಾಗಿ, ಸಂಸ್ಕೃತ ವ್ಯಾಕರಣಗಳಲ್ಲಿ ಬಳಕೆಯಾಗುವ ವರ್ಣಗಳ ಪಾಠಕ್ರಮವನ್ನು ಹಾಗೆಯೇ ಹಳೆಗನ್ನಡ ವ್ಯಾಕರಣದಲ್ಲಿ ಬಳಸುವುದು ಓತಕರವಲ್ಲ.

ಈ ಎರಡು ಭಾಷೆಗಳು ಬಳಸುವ ಸೇರಿಕೆಯ ನಿಯಮಗಳಲ್ಲೂ ಹಲವು ಮುಖ್ಯವಾದ ವ್ಯತ್ಯಾಸಗಳಿವೆ. ಹಳೆಗನ್ನಡ ವ್ಯಾಕರಣದಲ್ಲಿ ಇವನ್ನು ಸರಿಯಾಗಿ ನಿರೂಪಿಸುವ ಅವಶ್ಯಕತೆಯಿದೆ.

## ಅಧ್ಯಾಯ ನಾಲ್ಕು

# ಪದವರ್ಗಗಳು

### ೪.೧ ಪದಗಳಲ್ಲಿ ವೈವಿಧ್ಯ

ಒಂದು ಭಾಷೆಯಲ್ಲಿ ಎಂತಹ ಪದಗಳೆಲ್ಲ ಬಳಕೆಯಾಗುತ್ತವೆ ಎಂಬುದು ಪದಕಂತೆಗಳನ್ನು ಮತ್ತು ವಾಕ್ಯಗಳನ್ನು ರಚಿಸುವುದಕ್ಕಾಗಿ ಆ ಭಾಷೆಯಲ್ಲಿ ಎಂತಹ ವಿಧಾನಗಳನ್ನು ಬಳಸಲಾಗುತ್ತದೆ ಎಂಬುದನ್ನವಲಂಬಿಸಿದೆ. ಈ ವಿಧಾನಗಳು ಬೇರೆ ಬೇರೆ ಭಾಷಾಕುಟುಂಬಗಳಲ್ಲಿ ಬೇರೆ ಬೇರೆಯಾಗಿರಲು ಸಾಧ್ಯವಿದೆಯಾದ ಕಾರಣ, ಎರಡು ಭಾಷಾಕುಟುಂಬಗಳಿಗೆ ಸೇರಿದ ಭಾಷೆಗಳಲ್ಲಿ ಬಳಕೆಯಾಗುವ ಪದಗಳು ಒಂದೇ ತೆರನಾಗಿರಬೇಕಾಗಿಲ್ಲ.

ಕ್ರಿಯಾಪದ ಮತ್ತು ನಾಮಪದ ಎಂಬುದಾಗಿ ಎರಡು ರೀತಿಯ ಪದಗಳು ಹೆಚ್ಚಿನ ಭಾಷೆಗಳಲ್ಲೂ ಬಳಕೆಯಾಗುತ್ತವೆ (ಮುಂಡಾರಿಯಂತಹ ಕೆಲವು ಭಾಷೆಗಳು ಇದಕ್ಕೂ ಅಪವಾದಗಳಾಗಿದ್ದು, ಅವುಗಳಲ್ಲಿ ಒಂದು ಪದವರ್ಗಕ್ಕೆ ಸೇರುವ ಪದಗಳು ಮಾತ್ರ ಬಳಕೆಯಲ್ಲಿವೆ). ಸಾಮಾನ್ಯವಾಗಿ, ವಾಕ್ಯವೊಂದರಲ್ಲಿ ಬರುವ ಕ್ರಿಯಾಪದಗಳು ಒಂದು ಘಟನೆಯನ್ನೂ ನಾಮಪದಗಳು ಆ ಘಟನೆಯಲ್ಲಿ ತೊಡಗಿಕೊಂಡಿರುವ ವ್ಯಕ್ತಿ, ವಸ್ತು, ವಿಷಯ ಮೊದಲಾದುವನ್ನೂ ಸೂಚಿಸುತ್ತವೆಯೆಂದು ಹೇಳಬಹುದು. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಹಳೆಗನ್ನಡ ವಾಕ್ಯವನ್ನು ಗಮನಿಸಬಹುದು.

(೧ಕ) ಅರಸಂ ಪಾರ್ವಂಗೆ ಗೋವಂ ಕೊಟ್ಟಂ

(೧ಕ) ವಾಕ್ಯದಲ್ಲಿ ಅರಸಂ, ಪಾರ್ವಂ ಮತ್ತು ಗೋವು ಎಂಬ ಮೂರು ನಾಮಪದಗಳು ಮತ್ತು ಕುಡು (ಕೊಟ್) ಎಂಬ ಒಂದು ಕ್ರಿಯಾಪದ ಬಂದಿವೆ. ಇವುಗಳಲ್ಲಿ ಕ್ರಿಯಾಪದವು ಒಂದು ಘಟನೆಯನ್ನೂ ನಾಮಪದಗಳು ಆ ಘಟನೆಯಲ್ಲಿ ತೊಡಗಿರುವ ಇಬ್ಬರು ವ್ಯಕ್ತಿಗಳು ಮತ್ತು ಒಂದು ಪ್ರಾಣಿಯನ್ನೂ ಸೂಚಿಸುತ್ತವೆ.

ಹಳೆಗನ್ನಡದ ಹಾಗೆ, ಸಂಸ್ಕೃತದಲ್ಲೂ ನಾಮಪದ ಮತ್ತು ಕ್ರಿಯಾಪದಗಳೆಂಬ ಎರಡು ರೀತಿಯ ಪದಗಳು ಬಳಕೆಯಾಗುವುದನ್ನು ಕಾಣಬಹುದು. ಉದಾಹರಣೆಗಾಗಿ, ರಾಮಃ ಗೃಹೇ ರೋದಿತಿ 'ರಾಮನು ಮನೆಯಲ್ಲಿ ಅಳುತ್ತಿದ್ದಾನೆ' ಎಂಬ ವಾಕ್ಯದಲ್ಲಿ ರಾಮ ಮತ್ತು ಗೃಹ ಎಂಬ ಎರಡು ನಾಮಪದಗಳು ಮತ್ತು ರುದ್ ಎಂಬ ಒಂದು ಕ್ರಿಯಾಪದ ಬಳಕೆಯಾಗಿವೆ.

ಹಳೆಗನ್ನಡದಲ್ಲಿ ಈ ಎರಡು ರೀತಿಯ ಪದಗಳು ಮಾತ್ರವಲ್ಲದೆ, 'ಗುಣಪದ'ವೆಂಬ ಅವೆರಡಕ್ಕಿಂತ ಭಿನ್ನವಾದ ಪದವರ್ಗಕ್ಕೆ ಸೇರುವ ಪದಗಳೂ ಬಳಕೆಯಲ್ಲಿವೆ. ಉದಾಹರಣೆಗಾಗಿ, ಹಳೆಗನ್ನಡದ ಪೊಸ, ಬೆಳ್, ತೆಳ್, ಕಿಱು ಮೊದಲಾದ ಪದಗಳು ಹಲವು ವಿಷಯಗಳಲ್ಲಿ ಕ್ರಿಯಾಪದ ಮತ್ತು ನಾಮಪದಗಳಿಗಿಂತ ಭಿನ್ನವಾಗಿವೆಯಾದ ಕಾರಣ, ಅವನ್ನು ಈ ಎರಡು ವರ್ಗಗಳಿಂದ ಭಿನ್ನವಾದ ಗುಣಪದವೆಂಬ ಮೂರನೆಯ ಪದವರ್ಗದಲ್ಲಿ ಸೇರಿಸಿ ಹೇಳಬೇಕಾಗುತ್ತದೆ.

ಆದರೆ, ಇಂತಹ ಮೂರನೆಯದೊಂದು ಪದವರ್ಗಕ್ಕೆ ಸೇರಬಲ್ಲ ಪದಗಳು ಸಂಸ್ಕೃತದಲ್ಲಿಲ್ಲ.

ಹಳೆಗನ್ನಡದ ಗುಣಪದಗಳಿಗೆ ಸಮಾನವಾದ ಕೃಶ, ಪೃಥು, ಮೃದು, ಶುಕ್ಲ, ಗುರು ಮೊದಲಾದ ಪದಗಳು ಸಂಸ್ಕೃತದಲ್ಲಿ ನಾಮಪದವರ್ಗ ದಲ್ಲೇನೇ ಬರುತ್ತವೆ. ಇದು ಹಳೆಗನ್ನಡಕ್ಕೂ ಸಂಸ್ಕೃತಕ್ಕೂ ನಡುವಿರುವ ಒಂದು ಮುಖ್ಯವಾದ ವ್ಯತ್ಯಾಸ. ಈ ಎರಡು ಭಾಷೆಗಳು ನಾಮಪದಕಂತೆಗಳನ್ನು ತಯಾರಿಸಿಕೊಳ್ಳುವ ಕ್ರಮ ಹೇಗೆ ಎಂಬುದನ್ನು ಪರಿಶೀಲಿಸಿದಾಗ, ಇವುಗಳ ನಡುವೆ ಈ ವ್ಯತ್ಯಾಸ ಯಾಕೆ ಮೂಡಿಬಂದಿದೆ ಎಂಬುದು ಸ್ಪಷ್ಟವಾಗುತ್ತದೆ (೪.೨ ನೋಡಿ).

## ೪.೨ ನಾಮಪದಕಂತೆಗಳ ರಚನೆ

ವ್ಯಕ್ತಿ, ವಸ್ತು ಮೊದಲಾದುವನ್ನು ಸೂಚಿಸುವುದಕ್ಕಾಗಿ, ಹೆಚ್ಚಿನ ಭಾಷೆಗಳಲ್ಲೂ ಹೆಸರಿಸುವುದು ಮತ್ತು ವರ್ಣಿಸುವುದು ಎಂಬುದಾಗಿ ಎರಡು ವಿಧಾನಗಳು ಬಳಕೆ ಯಾಗುತ್ತವೆ (ಭಟ್ ೨೦೦೨:೮೦ ನೋಡಿ). ಸಾಮಾನ್ಯವಾಗಿ, ಹೆಸರಿಸುವುದಕ್ಕಾಗಿ ನಾಮಪದಗಳು (ರೂಢನಾಮಗಳು ಇಲ್ಲವೇ ಅಂಕಿತನಾಮಗಳು) ಬಳಕೆಯಾಗುತ್ತವೆ, ಮತ್ತು ವರ್ಣಿಸುವುದಕ್ಕಾಗಿ ನಾಮಪದಕಂತೆಗಳು ಬಳಕೆಯಾಗುತ್ತವೆ.

ಉದಾಹರಣೆಗಾಗಿ, ಮೇಲೆ ಕೊಟ್ಟಿರುವ (೧ಕ) ವಾಕ್ಯದಲ್ಲಿ ಅರಸಂ, ಪಾರ್ವಂ ಮತ್ತು ಗೋವು ಎಂಬ ಮೂರು ನಾಮಪದಗಳನ್ನು ಬಳಸಲಾಗಿದ್ದು, ಅವು ಹೆಸರಿಸುವ ವಿಧಾನದ ಮೂಲಕ ಇಬ್ಬರು ವ್ಯಕ್ತಿಗಳನ್ನು ಮತ್ತು ಒಂದು ಪ್ರಾಣಿಯನ್ನು ಗುರುತಿಸುತ್ತವೆ.

ಕೆಳಗೆ ಕೊಟ್ಟಿರುವ (೧ಖ) ವಾಕ್ಯದಲ್ಲಿ ಪಾರ್ವಂ ನಾಮಪದದ ಬದಲು ಬಡ ಪಾರ್ವಂ ಎಂಬ ನಾಮಪದಕಂತೆಯನ್ನು ಬಳಸಲಾಗಿದ್ದು, ಇದು ವರ್ಣಿಸುವ ವಿಧಾನದ ಮೂಲಕ ಒಬ್ಬ ವ್ಯಕ್ತಿಯನ್ನು ಗುರುತಿಸುತ್ತದೆ.

(೧ಖ) ಅರಸಂ ಬಡ ಪಾರ್ವಂಗೆ ಗೋವಂ ಕೊಟ್ಟಂ

ಬಡ ಪಾರ್ವಂ ಎಂಬ ಈ ನಾಮಪದಕಂತೆಯಲ್ಲೂ ಪಾರ್ವಂ ಎಂಬ ಆ ವ್ಯಕ್ತಿಯ 'ಹೆಸರು' (ರೂಢನಾಮ) ಬಂದಿದೆಯೇನೋ ನಿಜ; ಆದರೆ, ಅದು ಆ ವ್ಯಕ್ತಿಯನ್ನು ನೇರವಾಗಿ ಗುರುತಿಸುವ ಬದಲು, ಹಾಗೆ ಗುರುತಿಸುವುದಕ್ಕಾಗಿ ಬಳಕೆಯಾಗಿರುವ ಒಂದು ವರ್ಣನೆಯ ಅಂಗವಾಗಿ ಬಂದಿದೆ.

ವ್ಯಕ್ತಿ, ಪ್ರಾಣಿ, ವಸ್ತು ಮೊದಲಾದುವನ್ನು ಈ ರೀತಿ ವರ್ಣನೆಯ ಮೂಲಕ ಗುರುತಿಸುವುದಕ್ಕಾಗಿ ಬಳಕೆಯಾಗುವ ಪದಕಂತೆಗಳನ್ನು ಬೇರೆ ಬೇರೆ ಭಾಷೆಗಳು ಬೇರೆ ಬೇರೆ ರೀತಿಯಲ್ಲಿ ತಯಾರಿಸುತ್ತವೆ. ಈ ವಿಷಯದಲ್ಲಿ ಸಂಸ್ಕೃತ ಮತ್ತು ಕನ್ನಡ ಭಾಷೆಗಳ ನಡುವೆ ಒಂದು ಮುಖ್ಯವಾದ ವ್ಯತ್ಯಾಸವಿದೆ. ಈ ವ್ಯತ್ಯಾಸಕ್ಕೆ ಇಂತಹ ಪದಕಂತೆಗಳ ರಚನೆಗಾಗಿ ಇವೆರಡು ಭಾಷೆಗಳು ಎರಡು ತೀರ ಭಿನ್ನವಾದ ವ್ಯಾಕರಣದ ಮೂಲತತ್ವಗಳನ್ನು ಬಳಸುವುದೇ ಕಾರಣ.

ಹಳೆಗನ್ನಡದ ಪದಕಂತೆಗಳಲ್ಲೆಲ್ಲ ಸಾಮಾನ್ಯವಾಗಿ ಒಂದು ಪ್ರಧಾನಪದ ಮತ್ತು ಒಂದು ಅಥವಾ ಜಾಸ್ತಿ ಆ ಪದಕ್ಕೆ ಸಹಾಯಕವಾಗಿರುವ ಪದಗಳು ಇರುತ್ತವೆ. ಇವುಗಳಲ್ಲಿ ಪ್ರಧಾನಪದ ಒಬ್ಬ ವ್ಯಕ್ತಿ ಇಲ್ಲವೇ ವಸ್ತುವನ್ನು ಹೆಸರಿಸುತ್ತದೆ, ಮತ್ತು ಸಹಾಯಕ ಪದ ಆ ವ್ಯಕ್ತಿ ಇಲ್ಲವೇ ವಸ್ತುವಿನ ಗುಣಧರ್ಮವೊಂದನ್ನು ಸೂಚಿಸುವ ಮೂಲಕ ಅದನ್ನು ಗುರುತಿಸುವ ಕೆಲಸ ಸುಲಭವಾಗುವಂತೆ ಮಾಡುತ್ತದೆ.

ಉದಾಹರಣೆಗಾಗಿ, ಮೇಲೆ ಕೊಟ್ಟಿರುವ ಬಡ ಪಾರ್ವಂ ಪದಕಂತೆಯಲ್ಲಿ ಪಾರ್ವಂ ಎಂಬುದು ಪ್ರಧಾನ ಪದವಾಗಿದ್ದು, ಅದು ಒಬ್ಬ ವ್ಯಕ್ತಿಯನ್ನು ಹೆಸರಿಸುತ್ತದೆ, ಮತ್ತು ಬಡ

ಎಂಬುದು ಸಹಾಯಕ ಪದವಾಗಿದ್ದು, ಆ ವ್ಯಕ್ತಿಯ ಗುಣಧರ್ಮವೊಂದನ್ನು ('ಆ ವ್ಯಕ್ತಿ ಬಡವ' ಎಂಬುದನ್ನು) ಸೂಚಿಸುವ ಮೂಲಕ, ಆತನನ್ನು ಗುರುತಿಸುವ ಕೆಲಸ ಸುಲಭವಾಗುವಂತೆ ಮಾಡುತ್ತದೆ.

ಈ ಕಾರಣಕ್ಕಾಗಿ, ಹಳೆಗನ್ನಡಕ್ಕೆ ವ್ಯಕ್ತಿ, ವಸ್ತು, ವಿಷಯ ಮೊದಲಾದುವನ್ನು ಹೆಸರಿಸುವುದಕ್ಕಾಗಿ ಬಳಕೆಯಾಗುವ 'ನಾಮಪದ'ಗಳು ಮಾತ್ರವಲ್ಲದೆ, ಅವುಗಳ ಗುಣಧರ್ಮಗಳನ್ನಷ್ಟೇ ಸೂಚಿಸುವುದಕ್ಕಾಗಿ ಬಳಕೆಯಾಗುವ 'ಗುಣಪದ'ಗಳೂ ಬೇಕಾಗುತ್ತವೆ. ಹಾಗಾಗಿ, ಹಳೆಗನ್ನಡದಲ್ಲಿ ನಾಮಪದ ಮತ್ತು ಗುಣಪದಗಳೆಂಬ ಎರಡು ವರ್ಗಗಳಿಗೆ ಸೇರುವ ಪದಗಳು ಕಾಣಿಸಿಕೊಳ್ಳುತ್ತವೆ.

ಸಂಸ್ಕೃತದಲ್ಲಿ ನಾಮಪದಕಂತೆಗಳನ್ನು ತಯಾರಿಸುವುದಕ್ಕಾಗಿ ಇದಕ್ಕಿಂತ ತೀರ ಭಿನ್ನವಾದ ವಿಧಾನವೊಂದು ಬಳಕೆಯಲ್ಲಿದೆ. ಈ ವಿಧಾನದ ಬಳಕೆಯಲ್ಲಿ ಆ ಭಾಷೆಗೆ 'ನಾಮಪದ'ವೆಂಬ ಒಂದು ಪದವರ್ಗಕ್ಕೆ ಸೇರುವ ಪದಗಳು ಮಾತ್ರ ಬೇಕಾಗುತ್ತವೆ; 'ಗುಣಪದ'ವೆಂಬ ಇನ್ನೊಂದು ಪದವರ್ಗಕ್ಕೆ ಸೇರುವ ಪದಗಳ ಅವಶ್ಯಕತೆ ಉಂಟಾಗುವುದಿಲ್ಲ. ಹಾಗಾಗಿ, ಅಂತಹ ಪದಗಳು ಆ ಭಾಷೆಯಲ್ಲಿ ಕಾಣಿಸುವುದೂ ಇಲ್ಲ.

ಸಂಸ್ಕೃತದ ನಾಮಪದಕಂತೆಗಳಲ್ಲಿ ಬರುವ ಪದಗಳಲ್ಲಿ ಹೆಚ್ಚಿನವೂ ಪ್ರಧಾನ ಪದಗಳೇ ಆಗಿದ್ದು, ಆ ಪದಗಳಲ್ಲಿ ಪ್ರತಿಯೊಂದೂ ಸ್ವತಂತ್ರವಾಗಿ ಮತ್ತು ಬೇರೆ ಬೇರಾಗಿ ವ್ಯಕ್ತಿ, ವಸ್ತು ಮೊದಲಾದುವನ್ನು ಗುರುತಿಸುತ್ತವೆ; ಆದರೆ, ಒಂದು ಪದಕಂತೆಯ ಅಂಗಗಳಾಗಿ ಬರುವಾಗ ಈ ಪದಗಳೆಲ್ಲವೂ ಒಂದೇ ಲಿಂಗ-ವಚನ-ವಿಭಕ್ತಿಗಳಲ್ಲಿರುತ್ತವೆ; ಹಾಗಾಗಿ, ಆ ಪದಕಂತೆಯಲ್ಲಿ ಅವು ಗುರುತಿಸುವ ವ್ಯಕ್ತಿ, ವಸ್ತು ಮೊದಲಾದವು ಬೇರೆ ಬೇರಲ್ಲ, ಒಂದೇ ವ್ಯಕ್ತಿ ಇಲ್ಲವೇ ವಸ್ತು ಎಂಬ ಅರ್ಥ ದೊರಕುತ್ತದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಸಂಸ್ಕೃತ ವಾಕ್ಯವನ್ನು ಗಮನಿಸಬಹುದು:

(೨ಕ) ಹರಿ: ಏಕಂ ಕೃಷ್ಣಂ ಸರ್ಪಂ ಅಪಶ್ಯತ್
'ಹರಿ ಒಂದು ಕಪ್ಪು ಹಾವನ್ನು ನೋಡಿದ'

ಈ (೨ಕ) ವಾಕ್ಯದಲ್ಲಿ ಏಕಂ ಕೃಷ್ಣಂ ಸರ್ಪಂ ಎಂಬ ಪದಕಂತೆ ಬಂದಿದೆ. ಈ ಪದಕಂತೆಯಲ್ಲಿ ಏಕಂ, ಕೃಷ್ಣಂ ಮತ್ತು ಸರ್ಪಂ ಎಂಬ ಮೂರು ಪದಗಳಿವೆ. ಈ ಮೂರು ಪದಗಳೂ ಸ್ವತಂತ್ರವಾಗಿ ಮೂರು ಬೇರೆ ಬೇರೆ ವ್ಯಕ್ತಿ, ಪ್ರಾಣಿ ಇಲ್ಲವೇ ವಸ್ತುವನ್ನು ಗುರುತಿಸಬಲ್ಲುವು. ಆದರೆ, ಮೇಲಿನ ವಾಕ್ಯದಲ್ಲಿ ಅವೆಲ್ಲವೂ ಒಂದೇ ಲಿಂಗ-ವಚನ-ವಿಭಕ್ತಿಯಲ್ಲಿ ಬಂದಿವೆಯಾದ ಕಾರಣ, ಅವೆಲ್ಲವೂ ಒಟ್ಟಾಗಿ ಒಂದೇ ಪ್ರಾಣಿಯನ್ನು ಬೇರೆ ಬೇರೆ ರೀತಿಯಲ್ಲಿ (ಎಂದರೆ, ಅದು ಒಂದಾಗಿರುವ ಪ್ರಾಣಿಯೆಂದು, ಕಪ್ಪಾಗಿರುವ ಪ್ರಾಣಿಯೆಂದು, ಮತ್ತು ಹಾವಾಗಿರುವ ಪ್ರಾಣಿಯೆಂದು) ಗುರುತಿಸುತ್ತವೆ.

ಸಂಸ್ಕೃತದಲ್ಲಿ ಏಕಂ, ಕೃಷ್ಣಂ ಮತ್ತು ಸರ್ಪಂ ಎಂಬ ಈ ಮೂರು ಪದಗಳು ಸ್ವತಂತ್ರವಾಗಿ ಮೂರು ಬೇರೆ ಬೇರೆ ವ್ಯಕ್ತಿ, ಪ್ರಾಣಿ ಇಲ್ಲವೇ ವಸ್ತು ವನ್ನು ಗುರುತಿಸಬಲ್ಲುವು ಎಂಬುದನ್ನು ಕೆಳಗಿನ ವಾಕ್ಯಗಳು ಸ್ಪಷ್ಟಪಡಿಸುತ್ತವೆ.

(೨ಖ) ಹರಿ: ಏಕಂ ಅಪಶ್ಯತ್
'ಹರಿ ಒಂದನ್ನು (ಅಥವಾ ಒಬ್ಬನನ್ನು) ನೋಡಿದ'

(೨ಗ) ಹರಿ: ಕೃಷ್ಣಂ ಅಪಶ್ಯತ್
'ಹರಿ ಕಪ್ಪಿನದನ್ನು (ಅಥವಾ ಕಪ್ಪಿನವನನ್ನು) ನೋಡಿದ'

(೨ಘ) ಹರಿ: ಸರ್ಪಂ ಅಪಶ್ಯತ್
'ಹರಿ ಹಾವನ್ನು ನೋಡಿದ'

(೨ಖ–ಘ) ವಾಕ್ಯಗಳಲ್ಲಿ ಏಕಂ, ಕೃಷ್ಣಂ ಮತ್ತು ಸರ್ಪಂ ಎಂಬ ಮೂರು ಪದಗಳು ಸ್ವತಂತ್ರವಾಗಿ ಮೂರು ಬೇರೆ ಬೇರೆ ವ್ಯಕ್ತಿ, ವಸ್ತು ಇಲ್ಲವೇ ಪ್ರಾಣಿಗಳನ್ನು ಗುರುತಿಸಲು ಶಕ್ತವಾಗಿವೆ.

(೨ಕ) ವಾಕ್ಯದಲ್ಲಿ ಬಂದಿರುವ ಪದಕಂತೆಯಲ್ಲಿ ಈ ಮೂರು ಪದಗಳೂ ಒಂದೇ ಲಿಂಗ–ವಚನ–ವಿಭಕ್ತಿಯಲ್ಲಿ (ಎಂದರೆ ಪುಲ್ಲಿಂಗ–ಏಕವಚನ–ದ್ವಿತೀಯಾ ವಿಭಕ್ತಿಯಲ್ಲಿ) ಬಂದಿವೆಯಾದ ಕಾರಣ, ಅವುಗಳ ಮೂಲಕ ಒಂದೇ ಪ್ರಾಣಿಯನ್ನು ('ಒಂದು ಕಪ್ಪು ಹಾವ'ನ್ನು) ಗುರುತಿಸಲು ಸಾಧ್ಯವಾಗಿದೆ.

ಹಳೆಗನ್ನಡದ ಪದಕಂತೆಗಳಲ್ಲಿ ಬರುವ ಪದಗಳಲ್ಲಿ ಪ್ರಧಾನ ಪದವೊಂದನ್ನು ಬಿಟ್ಟು ಉಳಿದ ಪದಗಳಿಗೆ ಈ ರೀತಿ ಸ್ವತಂತ್ರವಾಗಿ ವ್ಯಕ್ತಿ, ಪ್ರಾಣಿ, ವಸ್ತು ಮೊದಲಾದುವನ್ನು ಗುರುತಿಸುವ ಶಕ್ತಿಯಿಲ್ಲ. ಅವು ಗುಣಧರ್ಮವೊಂದನ್ನು ಮಾತ್ರವೇ ಸೂಚಿಸಲು ಶಕ್ತವಾಗಿದ್ದು, ವ್ಯಕ್ತಿ, ಪ್ರಾಣಿ, ವಸ್ತು ಮೊದಲಾದುವನ್ನು ಗುರುತಿಸಬಲ್ಲ ಪ್ರಧಾನ ಪದವೊಂದರೊಂದಿಗೆ ಸಹಾಯಕ ಪದಗಳಾಗಿ ಮಾತ್ರ ಬಳಕೆಯಾಗಬಲ್ಲುವು.

ಉದಾಹರಣೆಗಾಗಿ, ಬಡ ಪಾರ್ವಂ ಪದಕಂತೆಯಲ್ಲಿ ಬಂದಿರುವ ಬಡ ಎಂಬ ಪದ ಸ್ವತಂತ್ರವಾಗಿ ವ್ಯಕ್ತಿಯೊಬ್ಬನನ್ನು ಗುರುತಿಸಲಾರದು. ವ್ಯಕ್ತಿಯ ಗುಣಧರ್ಮವೊಂದನ್ನು ಸೂಚಿಸುವ ಕೆಲಸವನ್ನು ಮಾತ್ರವೇ ಅದು ಮಾಡಬಲ್ಲುದಾಗಿದ್ದು, ಪಾರ್ವಂ ಪದದ ಹಾಗಿರುವ ಒಂದು ಪ್ರಧಾನ ಪದ(ನಾಮಪದ)ದೊಂದಿಗೆ ಮಾತ್ರ ಅದು ವಾಕ್ಯದಲ್ಲಿ ಬಳಕೆಯಾಗಬಲ್ಲುದು. ಸ್ವತಂತ್ರವಾಗಿ ವ್ಯಕ್ತಿಯೊಬ್ಬನನ್ನು ಗುರುತಿಸಬೇಕಿದ್ದಲ್ಲಿ, ಅದನ್ನು ಬಡವನ್ ಎಂಬಂತಹ ನಾಮಪದವಾಗಿ ಬದಲಾಯಿಸಿಕೊಳ್ಳಬೇಕಾಗುತ್ತದೆ.

ಗುಣಧರ್ಮವನ್ನು ಸೂಚಿಸುವ ಪದಗಳಲ್ಲಿ ಹೆಚ್ಚಿನವುಗಳಿಗೂ ಹಳೆಗನ್ನಡದಲ್ಲಿ ಪ್ರಧಾನ (ನಾಮರೂಪ) ಮತ್ತು ಅಪ್ರಧಾನ (ಗುಣರೂಪ) ಎಂಬುದಾಗಿ ಎರಡೆರಡು ರೂಪಗಳಿರುತ್ತವೆ.

| | ಗುಣರೂಪ | ನಾಮರೂಪ |
|---|---|---|
| (೩ಕ) | ಪೊಸ | ಪೊಸತು |
| | ಕಿಱು | ಕಿಱಿದು |
| | ಕರ್ | ಕರಿದು |
| | ಪೆರ್ | ಪಿರಿದು |
| (೩ಖ) | ಬಡ | ಬಡವನ್ |
| | ಚೆನ್ನ | ಚೆನ್ನಿಗನ್ |
| | ಎಳೆ | ಎಳೆಯನ್ |
| | ನಲ್ | ನಲ್ಲನ್ |

ವ್ಯಕ್ತಿ, ವಸ್ತು ಮೊದಲಾದವುಗಳ ಲಿಂಗ–ವಚನಗಳನ್ನು ಸೂಚಿಸುವ ತು (ದು), ಅನ್, ಅಳ್, ಅರ್, ಅವು ಪ್ರತ್ಯಯಗಳನ್ನು ಗುಣಪದಗಳಿಗೆ ಸೇರಿಸುವ ಮೂಲಕ ಈ ನಾಮರೂಪಗಳನ್ನು ತಯಾರಿಸಲಾಗುತ್ತದೆ.

ಆದರೆ, ಸಂಸ್ಕೃತದಲ್ಲಿ ಇಂತಹ ಪದಗಳಿಗೆಲ್ಲ ನಾಮರೂಪ ಮಾತ್ರ ಇರುತ್ತದೆ (ಎಂದರೆ ಅವೆಲ್ಲವೂ ನಾಮಪದಗಳೇ). ಸಮಸ್ತಪದಗಳಲ್ಲಿ ಇಂತಹ ನಾಮಪದಗಳಿಗೆ ಸಂಕ್ಷಿಪ್ತರೂಪಗಳಿರುವುದು ನಿಜವಾದರೂ, ಅವನ್ನು ಕನ್ನಡದಲ್ಲಿರುವ ಹಾಗೆ, ಗುಣರೂಪಗಳೆಂದು ಪರಿಗಣಿಸಲು ಸಾಧ್ಯವಾಗದು. ಯಾಕೆಂದರೆ, ಸಂಸ್ಕೃತದಲ್ಲಿ ಅಂತಹ ಸಂಕ್ಷಿಪ್ತ ರೂಪಗಳು ಇತರ ನಾಮಪದಗಳಿಗೂ ಇವೆ.

| | **ಪದಕಂತೆ** | **ಸಮಸ್ತಪದ** |
|---|---|---|
| (೪ಕ) | ಕೃಷ್ಣ: ಸರ್ಪ: | ಕೃಷ್ಣಸರ್ಪ: |
| | ಕೃಷ್ಣಾ ಮಾಲಾ | ಕೃಷ್ಣಮಾಲಾ |
| | ಕೃಷ್ಣಂ ಮಧು | ಕೃಷ್ಣಮಧು |
| (೪ಖ) | ಮೃತ್ತಿಕ: ಘಟ: | ಮೃತ್ತಿಕಘಟ: |
| | ಮೃತ್ತಿಕಾ ಸ್ತ್ರೀ | ಮೃತ್ತಿಕಸ್ತ್ರೀ |

ಹಳೆಗನ್ನಡದ ಗುಣಪದಗಳೊಂದಿಗೆ ಬರುವ ದು, ಅನ್, ಅಳ್ ಮೊದಲಾದ ಲಿಂಗ–ವಚನ ಪ್ರತ್ಯಯಗಳನ್ನು ಸಂಸ್ಕೃತದ ಪದಕಂತೆಗಳಲ್ಲಿ ಇಂತಹವೇ ಪದಗಳೊಂದಿಗೆ ಬರುವ ಲಿಂಗ–ವಚನ–ವಿಭಕ್ತಿ ಪ್ರತ್ಯಯಗಳೊಂದಿಗೆ ಹೋಲಿಸುವುದು ಸರಿಯಲ್ಲ. ಯಾಕೆಂದರೆ, ಹಳೆಗನ್ನಡದಲ್ಲಿ ಈ ಪ್ರತ್ಯಯಗಳೊಂದಿಗೆ ಬರುವ ಗುಣಪದಗಳು ಪದಕಂತೆಗಳಲ್ಲಿ ಒಂದು ಪ್ರಧಾನ ಪದವಾಗಿ ಮಾತ್ರ ಬರಬಲ್ಲುವು.

ಉದಾಹರಣೆಗಾಗಿ, ಮೇಲೆ ಕೊಟ್ಟಿರುವ ಬಡವನ್ ಎಂಬ ರೂಪ ಪದಕಂತೆಯೊಂದರಲ್ಲಿ ಪ್ರಧಾನಪದವಾಗಿ ಮಾತ್ರ ಬರಬಲ್ಲುದಲ್ಲದೆ, ಬೇರೊಂದು ನಾಮಪದದೊಂದಿಗೆ ಬರಲಾರದು. ಬಡವನ್ ಪಾರ್ವನ್ ಅಥವಾ ಪಾರ್ವನ್ ಬಡವನ್ ಎಂದು ಹೇಳಿದಲ್ಲಿ ಅದು ಪದಕಂತೆಯಾಗಿ ಉಳಿಯದೆ, ಒಂದು ವಾಕ್ಯವಾಗಿಬಿಡುತ್ತದೆ.

### ೪.೨.೧ ಹಳೆಗನ್ನಡದ ವಿಸ್ತೃತ ಬಳಕೆಗಳು

ಮೇಲೆ ಸೂಚಿಸಿದ ಹಾಗೆ, ಹಳೆಗನ್ನಡದಲ್ಲಿ ನಾಮಪದ, ಕ್ರಿಯಾಪದ ಮತ್ತು ಗುಣಪದಗಳಿಗೆ ಅವುಗಳದೇ ಅದ (ಎಂದರೆ 'ಸಹಜ'ವಾದ) ಬಳಕೆಗಳಿದ್ದು, ಆ ಬಳಕೆಗಳಲ್ಲಿ ಅವಕ್ಕೆ ಯಾವ ಪ್ರತ್ಯಯದ ಸಹಾಯವೂ ಬೇಕಾಗುವುದಿಲ್ಲ. ನೇರವಾಗಿ ಅವುಗಳ ಕಾರ್ಯಕ್ಕೆ ಸಂಬಂಧಿಸಿದ ಪ್ರತ್ಯಯಗಳನ್ನು ಅವುಗಳೊಂದಿಗೆ ಬಳಸಬಹುದು. ಆದರೆ, ಅವನ್ನು ಬೇರೆ ಜಾಗಗಳಲ್ಲಿ ಬಳಸಬೇಕಿದ್ದಲ್ಲಿ, ಅದಕ್ಕಾಗಿ ಅವಕ್ಕೆ ಕೆಲವು ವಿಶಿಷ್ಟವಾದ ಪ್ರತ್ಯಯಗಳನ್ನು ಸೇರಿಸಬೇಕಾಗುತ್ತದೆ.

(ಕ) ಗುಣಪದಗಳ ಜಾಗ: ನಾಮಪದಗಳನ್ನು ಗುಣಪದಗಳ ಜಾಗದಲ್ಲಿ (ಎಂದರೆ ನಾಮಪದ ಕಂತೆಯೊಂದರ ಅಪ್ರಧಾನ ಪದವಾಗಿ) ಬಳಸಲು ಸಾಧ್ಯವಿದೆ; ಆದರೆ, ಹೀಗೆ ಮಾಡಬೇಕಿದ್ದಲ್ಲಿ, ಅವನ್ನು ನಾಮಪದಗಳೊಂದಿಗೆ ಸಂಬಂಧಿಸುವಂತಹ ಅ ಪ್ರತ್ಯಯವನ್ನು ಅವಕ್ಕೆ ಸೇರಿಸಬೇಕಾಗುತ್ತದೆ.

| | |
|---|---|
| ಕೊಳನ್ | ಕೊಳನ ತಡಿ |
| ಬಿಲ್ | ಬಿಲ್ಲ ಗೊಲೆ |
| ಕೋಂಟೆ | ಕೋಂಟೆಯ ಚೆಲ್ವು |
| ತುಂಬಿ | ತುಂಬಿಯ ಬಂಬಲ್ಗಳ್ |

ಮೇಲೆ ಕೊಳ, ಬಿಲ್, ಕೋಂಟೆ, ಮತ್ತು ತುಂಬಿ ನಾಮಪದಗಳನ್ನು ತಡಿ, ಗೊಲೆ, ಚೆಲ್ವು ಮತ್ತು ಬಂಬಲ್ಗಳ್ ನಾಮಪದಗಳೊಂದಿಗೆ ಬಳಸುವುದಕ್ಕಾಗಿ, ಅವಕ್ಕೆ ಅ ಪ್ರತ್ಯಯವನ್ನು ಸೇರಿಸಬೇಕಾಗಿದೆ.

ಇದೇ ರೀತಿಯಲ್ಲಿ, ಕ್ರಿಯಾಪದಗಳನ್ನೂ ಗುಣಪದಗಳ ಜಾಗದಲ್ಲಿ ಬಳಸಲು ಸಾಧ್ಯವಿದೆ, ಮತ್ತು ಇದಕ್ಕಾಗಿಯೂ ಅವಕ್ಕೆ ಸಂಬಂಧವನ್ನು ಸೂಚಿಸುವ ಅ ಪ್ರತ್ಯಯವನ್ನು ಸೇರಿಸಬೇಕಾಗುತ್ತದೆ. ಆದರೆ, ಈ ಪ್ರತ್ಯಯವನ್ನು ಸೇರಿಸುವ ಮೊದಲು, ಕ್ರಿಯಾಪದಗಳಿಗೆ ಘಟನೆಯ ಸಮಯವನ್ನು ಸೂಚಿಸುವ ದ್ ಇಲ್ಲವೇ ವ್ (ಪ್) ಪ್ರತ್ಯಯವನ್ನು, ಇಲ್ಲವೇ ಘಟನೆಯನ್ನು ಅಲ್ಲಗಳೆಯುವ ಅದ್ ಪ್ರತ್ಯಯವನ್ನು ಸೇರಿಸಬೇಕಾಗುತ್ತದೆ.

| | |
|---|---|
| ಎಱಗು | ಎಱಗಿದ ತರುಗಳ್ |
| ಮೊಱೆ | ಮೊಱೆವ ತುಂಬಿಗಳ್ |
| ನೋಡು | ನೋಟ್ಪ ನೋಟ |
| ಅಱಿ | ಅಱಿಯದ ಮಾತು |

ಆದರೆ, ಗುಣಪದಗಳನ್ನು ಈ ರೀತಿ ನಾಮಪದಗಳೊಂದಿಗೆ ಬಳಸಬೇಕಿದ್ದಲ್ಲಿ, ಅವಕ್ಕೆ ಯಾವ ಪ್ರತ್ಯಯವನ್ನೂ ಸೇರಿಸುವ ಅವಶ್ಯಕತೆಯಿಲ್ಲ. ಯಾಕೆಂದರೆ, ಪದಕಂತೆಗಳಲ್ಲಿ ನಾಮಪದಗಳೊಂದಿಗೆ ಬರುವುದು ಅವುಗಳ ಸಹಜವಾದ ಕೆಲಸವಾಗಿದೆ.

ಉದಾಹರಣೆಗಾಗಿ, ಮೇಲೆ ಕೊಟ್ಟಿರುವ ಬಡ ಪಾರ್ವನ್ ನಾಮಪದಕಂತೆಯಲ್ಲಿ ಬಡ ಗುಣಪದ ಯಾವ ಪ್ರತ್ಯಯದ ಸಹಾಯವೂ ಇಲ್ಲದೆ ನೇರವಾಗಿ ಪಾರ್ವನ್ ನಾಮಪದದೊಂದಿಗೆ ಬಳಕೆಯಾಗಿರುವುದನ್ನು ಕಾಣಬಹುದು. ಪಟ ನವಿರ್, ಕಿಱು ವೇಂಟೆ, ಅಳಿ ಗಂಡರ್ ಮೊದಲಾದ ನಾಮಪದಕಂತೆಗಳಲ್ಲಿಯೂ ಇದೇ ರೀತಿಯಲ್ಲಿ ಗುಣಪದಗಳು ನೇರವಾಗಿ ನಾಮಪದಗಳೊಂದಿಗೆ ಬಳಕೆಯಾಗಿವೆ.

(ಖ) ನಾಮಪದಗಳ ಜಾಗ: ಘಟನೆಯೊಂದರಲ್ಲಿ ತೊಡಗಿಕೊಂಡಿರುವ ವ್ಯಕ್ತಿ, ವಸ್ತು ಮೊದಲಾದುವನ್ನು ಸೂಚಿಸುವಂತಹ ಜಾಗ ನಾಮಪದಗಳಿಗೆ 'ಸಹಜ'ವಾಗಿರುವ ಜಾಗವಾದ ಕಾರಣ, ಅವನ್ನು ಈ ಜಾಗದಲ್ಲಿ ಬಳಸಲು ಪ್ರತ್ಯಯಗಳನ್ನು ಸೇರಿಸುವ ಅವಶ್ಯಕತೆಯಿಲ್ಲ. ಘಟನೆಯಲ್ಲಿ ಅವುಗಳ ಕಾರ್ಯವೆಂತಹದು ಎಂಬುದನ್ನು ಸೂಚಿಸುವ ವಿಭಕ್ತಿ ಪ್ರತ್ಯಯಗಳನ್ನು ಅವಕ್ಕೆ ನೇರವಾಗಿ ಸೇರಿಸಬಹುದು. ಉಸಿರ್–ಅನ್, ಕಾಡ್–ಅನ್, ಮರ–ಕ್ಕೆ ತಂಗೆ–ಗೆ, ಬಸಿಱ್–ಇನ್, ಇರುಳ್–ಒಳ್ ಮೊದಲಾದ ವಿಭಕ್ತಿರೂಪಗಳಲ್ಲಿ ಇಂತಹ ಬಳಕೆಯನ್ನು ಕಾಣಬಹುದು.

ಆದರೆ, ಗುಣಪದಗಳನ್ನು ಈ ರೀತಿ ಘಟಕಗಳನ್ನು ಸೂಚಿಸುವ ನಾಮಪದಗಳ ಜಾಗದಲ್ಲಿ ಬಳಸಬೇಕಿದ್ದರೆ, ಅವನ್ನು ಮೊದಲಿಗೆ 'ನಾಮರೂಪ'ಕ್ಕೆ ಬದಲಾಯಿಸಿಕೊಳ್ಳಬೇಕಾಗುತ್ತದೆ, ಮತ್ತು ಇದಕ್ಕಾಗಿ ಅವಕ್ಕೆ ಲಿಂಗ–ವಚನಗಳನ್ನು ಸೂಚಿಸುವ ಪ್ರತ್ಯಯಗಳನ್ನು ಸೇರಿಸಿಕೊಳ್ಳಬೇಕಾಗುತ್ತದೆ.

(೫ಕ) ಬಡವನ್ ಪಸಿದು ವೇಡಿದನ್

(೫ಖ) ಕಿಱಿಯರನ್ ಕೊಂದು

(೫ಗ) ಇನಿಯಳ್ಗೆ ಅರಿಪಿದೊಡೆ

(೫ಘ) ಪೊಸತಂ ಮಾಡಿದುದು

(೫ಙ) ಅಸಿಯವಂ ನೋಡಿದಂ

(೫ಕ-ಗ)ಗಳಲ್ಲಿ ಬಡ, ಕಿಱು, ಇನಿ, ಪೊಸ, ಮತ್ತು ಅಸಿ ಗುಣಪದಗಳು ಘಟಕವೊಂದನ್ನು ಸೂಚಿಸುವ ನಾಮಪದದ ಜಾಗದಲ್ಲಿ ಬರುವುದಕ್ಕಾಗಿ ಅನ್, ಅರ್, ಅಳ್, ತು ಮತ್ತು ಅವು ಎಂಬ ಲಿಂಗ-ವಚನಗಳನ್ನು ಸೂಚಿಸುವ ಪ್ರತ್ಯಯಗಳೊಂದಿಗೆ ಬರಬೇಕಾಗಿದೆ ಎಂಬುದನ್ನು ಗಮನಿಸಬಹುದು. ಅವಕ್ಕೆ ಅನ್, ಗೆ ಮೊದಲಾದ ವಿಭಕ್ತಿ ಪ್ರತ್ಯಯಗಳನ್ನು ಸೇರಿಸುವ ಮೊದಲು, ಈ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸುವ ಅವಶ್ಯಕತೆಯಿದೆ.

ಕ್ರಿಯಾಪದಗಳನ್ನು ನಾಮಪದಗಳ ಈ ಜಾಗದಲ್ಲಿ ಬಳಸಬೇಕಿದ್ದರೂ ಅವನ್ನು ಹಾಗೆಯೇ ಬಳಸಲು ಸಾಧ್ಯವಾಗದು. ಮೊದಲಿಗೆ ಅವನ್ನು ಮೇಲೆ ವಿವರಿಸಿರುವ ಗುಣರೂಪಕ್ಕೆ ಬದಲಾಯಿಸಿಕೊಳ್ಳಬೇಕು, ಮತ್ತು ಅನಂತರ ಅವಕ್ಕೆ ಲಿಂಗ-ವಚನಗಳನ್ನು ಸೂಚಿಸುವ ಅನ್, ಅಳ್, ಅರ್, ಉದು, ಇಲ್ಲವೇ ಉವು ಪ್ರತ್ಯಯಗಳಲ್ಲಿ ಒಂದನ್ನು ಸೇರಿಸುವುದರ ಮೂಲಕ, ನಾಮರೂಪಕ್ಕೆ ಬದಲಾಯಿಸಿಕೊಳ್ಳಬೇಕು.

(೬ಕ) ಆಡುವನನ್ ಇನಿಸು ಪೋಲ್ತು ಅನುಗೆಯ್ದಂ
(೬ಖ) ಎಂದಳ್ಗೆ ಕರ್ಣನಿಂತೆಂದಂ
(೬ಗ) ಕೂರದನ್ ಪಗೆಗೆ ಸಂತಸಮಾಗಿರೆ ಇದನೊಡ್ಡಿದಂ

(೬ಕ)ದಲ್ಲಿ ಆಡು ಕ್ರಿಯಾಪದದ ಮುಂದಿನ (ಇಲ್ಲವೇ ಈಗಿನ) ಸಮಯದ ಆಡುವ ಗುಣರೂಪಕ್ಕೆ ಪುಲ್ಲಿಂಗ-ಏಕವಚನದ ಅನ್ ಪ್ರತ್ಯಯವನ್ನು ಸೇರಿಸಲಾಗಿದೆ, ಮತ್ತು ಅನಂತರ ಅನ್ ವಿಭಕ್ತಿ ಪ್ರತ್ಯಯವನ್ನು ಸೇರಿಸಲಾಗಿದೆ; (೬ಖ)ದಲ್ಲಿ ಎನ್ ಕ್ರಿಯಾಪದದ ಹಿಂದಿನ ಸಮಯದ ಗುಣರೂಪಕ್ಕೆ ಮೊದಲಿಗೆ ಸ್ತ್ರೀಲಿಂಗ-ಏಕವಚನದ ಅಳ್ ಪ್ರತ್ಯಯವನ್ನು ಸೇರಿಸಲಾಗಿದೆ, ಮತ್ತು ಅನಂತರ ಗೆ ವಿಭಕ್ತಿ ಪ್ರತ್ಯಯವನ್ನು ಸೇರಿಸಲಾಗಿದೆ.

ಇದೇ ರೀತಿಯಲ್ಲಿ, (೬ಗ)ದಲ್ಲಿ ಕೂರ್ ಕ್ರಿಯಾಪದದ ಅಲ್ಲಗಳೆಯುವ ಗುಣರೂಪವನ್ನು ನಾಮಪದದ ಜಾಗದಲ್ಲಿ ಬಳಸುವುದಕ್ಕಾಗಿ, ಅದಕ್ಕೆ ಪುಲ್ಲಿಂಗ-ಏಕವಚನದ ಅನ್ ಪ್ರತ್ಯಯವನ್ನು ಸೇರಿಸಲಾಗಿದೆ.

ಹಳೆಗನ್ನಡದಲ್ಲಿ ಈ ರೀತಿ ಕ್ರಿಯಾಪದಗಳ ಗುಣರೂಪದಿಂದ ನಾಮರೂಪಗಳನ್ನು ತಯಾರಿಸಲು ಸಾಧ್ಯವಿದೆಯಲ್ಲದೆ, ನೇರವಾಗಿ ಕ್ರಿಯಾಪದಗಳಿಂದಲೇನೇ ನಾಮರೂಪಗಳನ್ನು ತಯಾರಿಸಲು ಸಾಧ್ಯವಿರುವ ಹಾಗೆ ಕಾಣಿಸುವುದಿಲ್ಲ. ಆದರೆ, ಹೊಸಗನ್ನಡದಲ್ಲಿ ಇಕೆ ಪ್ರತ್ಯಯವನ್ನು ಬಳಸಿ ನೇರವಾಗಿ ನಾಮರೂಪಗಳನ್ನು (ಹೊಗಳುವಿಕೆ, ಹಿಡಿಯುವಿಕೆ, ಹಾಸುವಿಕೆ ಇತ್ಯಾದಿ) ತಯಾರಿಸಲು ಸಾಧ್ಯವಿದೆ.

ಹೊಸಗನ್ನಡದಲ್ಲಿ ಇಂತಹ ನಾಮರೂಪಗಳು ಕ್ರಿಯಾಪದಗಳಿಗೆ ಇಕೆ-ಇಗೆ ಪ್ರತ್ಯಯವನ್ನು ಸೇರಿಸಿ ತಯಾರಿಸಿದ ನಾಮಪದಗಳಿಂದ (ಹೊಗಳಿಕೆ, ಹಿಡಿಕೆ, ಹಾಸಿಗೆ ಮೊದಲಾದವುಗಳಿಂದ) ಭಿನ್ನವಾಗಿವೆ (ಭಟ್ ೨೦೦೨:೯೬ ನೋಡಿ). ಆದರೆ, ಹಳೆಗನ್ನಡದಲ್ಲಿ ಈ ರೀತಿ ಎಲ್ಲಾ ಕ್ರಿಯಾಪದಗಳಿಂದಲೂ ನೇರವಾಗಿ ಸಾಧಿಸಲು ಸಾಧ್ಯವಾಗುವಂತಹ ನಾಮರೂಪಗಳಿಲ್ಲವೆಂದು ತೋರುತ್ತದೆ.

(ಗ) ಕ್ರಿಯಾಪದಗಳ ಜಾಗ: ಘಟನೆಗಳನ್ನು ಸೂಚಿಸುವ ಜಾಗವೇ ಕ್ರಿಯಾಪದಗಳ ಸಹಜವಾದ ಜಾಗವೆಂದು ಹೇಳಬಹುದು. ಅವನ್ನು ಈ ಜಾಗದಲ್ಲಿ ಬಳಸಬೇಕಿದ್ದರೆ, ಅವಕ್ಕೆ ಬೇರೆ ಪ್ರತ್ಯಯಗಳನ್ನು ಸೇರಿಸುವ ಅವಶ್ಯಕತೆಯಿಲ್ಲ. ಸಮಯ ಮತ್ತು ಘಟಕಗಳನ್ನು ಸೂಚಿಸುವ ಪ್ರತ್ಯಯಗಳನ್ನು,

ಇಲ್ಲವೇ ಬೇರೆ ಕೆಲವು ಘಟನೆಗೆ ಸಂಬಂಧಿಸಿದ ಪ್ರತ್ಯಯಗಳನ್ನು ಅವಕ್ಕೆ ನೇರವಾಗಿ ಸೇರಿಸಲು ಸಾಧ್ಯವಿದೆ (ಬಂದನ್, ಪೋಗನ್, ಕುಡಿದುದು).

ನಾಮಪದ ಮತ್ತು ಗುಣಪದಗಳು ಘಟನೆಯನ್ನು ಸೂಚಿಸಲಾರವಾದ ಕಾರಣ, ಅವನ್ನು ಕ್ರಿಯಾಪದಗಳ ಜಾಗದಲ್ಲಿ ಬಳಸಲು ಸಾಧ್ಯವಾಗುವುದಿಲ್ಲ; ಇದಲ್ಲದೆ, ಅವಕ್ಕೆ ವಿಶಿಷ್ಟವಾದ ಕ್ರಿಯಾರೂಪಗಳೂ ಇಲ್ಲ. ಆದರೆ, ಘಟನೆಗಳನ್ನು ಸೂಚಿಸುವ ಬದಲು ವಿಷಯಗಳನ್ನು ಸೂಚಿಸುವ 'ವಿಷಯ' ವಾಕ್ಯಗಳಲ್ಲಿ ನಾಮಪದಗಳನ್ನು ಕ್ರಿಯಾಪದಗಳ ಸ್ಥಾನದಲ್ಲಿ (ಇಲ್ಲವೇ ಇರ್ ಕ್ರಿಯಾಪದದ ಕ್ರಿಯಾರೂಪಗಳೊಂದಿಗೆ) ಬಳಸಲು ಸಾಧ್ಯವಿದೆ (೧೧.೩ ನೋಡಿ).

(೭ಕ) ರಾಜಂಗೆ ಇರ್ವರ್ ಪೆಂಡತಿಯರ್
(೭ಖ) ಅದು ಎಮ್ಮ ಪುರಂ
(೭ಗ) ಈತಂ ಗುಣಾರ್ಣವಂ

ಇಂತಹ ವಾಕ್ಯಗಳಲ್ಲಿ ಆಡುಗ ಇಲ್ಲವೇ ಕೇಳುಗನನ್ನು ವಿಷಯವಾಗಿ ಬಳಸಲಾಗಿದೆಯಾದರೆ, ಅವನ್ನು ಸೂಚಿಸುವ ಘಟಕ (ಆಖ್ಯಾತ) ಪ್ರತ್ಯಯವನ್ನೂ ಈ ಪದಗಳೊಂದಿಗೆ ಬಳಸಬೇಕೆಂಬ ನಿಯಮ ಹಳೆಗನ್ನಡದಲ್ಲಿದೆ. ಉದಾಹರಣೆಗಾಗಿ ಕೆಳಗೆ ಕೊಟ್ಟಿರುವ ಪಂಪಭಾರತದ ಬಳಕೆಗಳನ್ನು ಗಮನಿಸಬಹುದು:

(೮ಕ) ನೀಂ ಆದಿತ್ಯನನ್ ಇಳಿಪ ತೇಜರಿರ್ (೨.೬೪)
'ನೀವು ಆದಿತ್ಯನನ್ನು ತಿರಸ್ಕರಿಸುವ ತೇಜಸ್ಸುಳ್ಳವರಾಗಿದ್ದೀರಿ'
(೮ಖ) ನಿಮ್ಮಯ ಧರ್ಮದ ಮಕ್ಕಳೆವು (೧೧.೧೨೮)
'(ನಾವು) ನಿಮ್ಮ ಧರ್ಮದ ಮಕ್ಕಳು'
(೮ಗ) ಆನುಂ ಪೆಂಡತಿಯೆನ್ ಆದೆನ್ (೧.೭೬)
'ನಾನೂ ಹೆಂಗಸಾಗಿದ್ದೇನೆ'

ಈ ಜಾಗದಲ್ಲಿ ಗುಣಪದಗಳನ್ನು ಬಳಸಬೇಕಿದ್ದಲ್ಲಿ, ಅವುಗಳಿಗೆ ಲಿಂಗ–ವಚನ ಪ್ರತ್ಯಯಗಳನ್ನು ಸೇರಿಸಿ ಅವನ್ನು ನಾಮರೂಪಕ್ಕೆ ಬದಲಾಯಿಸಬೇಕಾಗುತ್ತದೆ:

(೯ಕ) ಸಹದೇವಂ ಕಿಱಿಯಂ
'ಸಹದೇವನು ಚಿಕ್ಕವನು'
(೯ಖ) ಮೊಗಂ ಪಿರಿದಾಗೆ
'ಮುಖ ದೊಡ್ಡದಾದಾಗ'

ಇದಲ್ಲದೆ, ಈ ಜಾಗದಲ್ಲಿ ಬರುವ ಗುಣಪದಗಳು ವಾಕ್ಯದ ಆಡುಗ ಇಲ್ಲವೇ ಕೇಳುಗರನ್ನು ಸೂಚಿಸುವುದಿದ್ದಲ್ಲಿ, ಅವುಗಳಿಗೆ ನಾಮರೂಪವನ್ನು ಕೊಡುವ ಈ ಲಿಂಗ–ವಚನ ಪ್ರತ್ಯಯಗಳನ್ನು ಮಾತ್ರವಲ್ಲದೆ, ಆಡುಗ ಮತ್ತು ಕೇಳುಗರನ್ನು ಸೂಚಿಸುವ ಪುರುಷ ಪ್ರತ್ಯಯಗಳನ್ನೂ ಸೇರಿಸಬೇಕಾಗುತ್ತದೆ:

(೧೦ಕ) ನೀಂ ಪಿರಿಯರಿರ್
'ನೀವು ಹಿರಿಯರು'

(೧೦ಖ) ಆನ್ ಕಿಱಿಯಳೆನ್
'ನಾನು ಕಿರಿಯವಳು'

(೧೦ಕ)ದಲ್ಲಿ ಪಿರಿ ಗುಣಪದದ ಅನಂತರ ಲಿಂಗ–ವಚನಗಳನ್ನು ಸೂಚಿಸುವ ಅರ್ ಪ್ರತ್ಯಯ ಮತ್ತು ಕೇಳುಗರನ್ನು ಸೂಚಿಸುವ (ಬಹುವಚನದ) ಇರ್ ಪ್ರತ್ಯಯಗಳು ಬಂದಿವೆ; (೧೦ಖ)ದಲ್ಲಿ ಕಿಱಿ ಗುಣಪದದ ಅನಂತರ ಲಿಂಗ–ವಚನಗಳನ್ನು ಸೂಚಿಸುವ ಅಳ್ ಪ್ರತ್ಯಯ ಮತ್ತು ಆಡುಗನನ್ನು ಸೂಚಿಸುವ ಏಕವಚನದ ಎನ್ ಪ್ರತ್ಯಯಗಳು ಬಂದಿವೆ.

ಇಲ್ಲಿ ಲಿಂಗ–ವಚನ ಪ್ರತ್ಯಯಗಳು ಗುಣಪದಗಳನ್ನು ಅವುಗಳ ನಾಮರೂಪಕ್ಕೆ ಬದಲಾಯಿಸುವುದಕ್ಕಾಗಿ ಬಳಕೆಯಾಗಿವೆ, ಮತ್ತು ಪುರುಷ ಪ್ರತ್ಯಯಗಳು ಆಡುಗ ಮತ್ತು ಕೇಳುಗರನ್ನು ಸೂಚಿಸುವುದಕ್ಕಾಗಿ ಬಳಕೆಯಾಗಿವೆ ಎಂಬುದನ್ನು ಗಮನಿಸಬಹುದು (ಜಾಸ್ತಿ ವಿವರಗಳಿಗೆ ೧೧ನೇ ಅಧ್ಯಾಯ ನೋಡಿ).

### ೪.೨.೨ ಸಂಸ್ಕೃತದ ವಿಸ್ತೃತ ಬಳಕೆಗಳು

ಹಳೆಗನ್ನಡದಲ್ಲಿ ಕಾಣಿಸುವ ನಾಮಪದ, ಕ್ರಿಯಾಪದ ಮತ್ತು ಗುಣಪದಗಳ ವಿಸ್ತೃತ ಬಳಕೆಗಳನ್ನು ಸಂಸ್ಕೃತದ ಬಳಕೆಗಳೊಂದಿಗೆ ಹೋಲಿಸಿ ನೋಡಿದಾಗ, ಪದವರ್ಗಗಳ ಮಟ್ಟಿಗೆ ಈ ಎರಡು ಭಾಷೆಗಳ ನಡುವಿರುವ ವ್ಯತ್ಯಾಸ ಇನ್ನಷ್ಟು ಸ್ಪಷ್ಟವಾಗುತ್ತದೆ.

ಸಂಸ್ಕೃತದಲ್ಲಿ ನಾಮಪದ ಮತ್ತು ಕ್ರಿಯಾಪದ ಎಂಬುದಾಗಿ ಎರಡು ಮುಖ್ಯ ಪದವರ್ಗಗಳು ಮಾತ್ರ ಇವೆಯಾದ ಕಾರಣ, ಮೇಲೆ ಸೂಚಿಸಿದಂತಹ ಮೂರು ರೀತಿಯ ವಿಸ್ತೃತ ಬಳಕೆಗಳ ಬದಲು, ಅದರಲ್ಲಿ ಎರಡು ರೀತಿಯ ವಿಸ್ತೃತ ಬಳಕೆಗಳು ಮಾತ್ರ ಕಾಣಿಸುತ್ತವೆ:

(ಕ) ನಾಮಪದದ ಜಾಗ: ಸಂಸ್ಕೃತದಲ್ಲಿ ಒಂದು ನಾಮಪದದೊಂದಿಗೆ ಇನ್ನೊಂದು ನಾಮಪದವನ್ನು ಹಾಗೆಯೇ, ಅದರಲ್ಲಿ ಯಾವ ಬದಲಾವಣೆಯನ್ನೂ ಮಾಡದೆ, ಬಳಸಬಹುದು. ಆದರೆ, ಈ ರೀತಿ ಬಳಕೆಯಾಗುವ ಪ್ರತಿಯೊಂದು ನಾಮಪದದೊಂದಿಗೂ ವಿಭಕ್ತಿ ಪ್ರತ್ಯಯವೊಂದನ್ನು ಸೇರಿಸುವ ಅವಶ್ಯಕತೆಯಿದೆ. ಒಂದೇ ನಾಮಪದಕಂತೆಯಲ್ಲಿ ಬರುವ ನಾಮಪದಗಳೆಲ್ಲವೂ ಒಂದೇ ವಿಭಕ್ತಿಯಲ್ಲಿರುವುದು ಅವಶ್ಯ:

(೧೧ಕ) ತತ್ರ ಏಕಃ ಕೃಷ್ಣಃ ಸರ್ಪಃ ಅಸ್ತಿ
'ಅಲ್ಲಿ ಒಂದು ಕಪ್ಪು ಹಾವು ಇದೆ'

(೧೧ಖ) ಹರಿಃ ಏಕಂ ಕೃಷ್ಣಂ ಸರ್ಪಂ ಅಪಶ್ಯತ್
'ಹರಿ ಒಂದು ಕಪ್ಪು ಹಾವನ್ನು ನೋಡಿದ'

(೧೧ಗ) ಹರಿಃ ಏಕೇನ ಕೃಷ್ಣೇನ ಸರ್ಪೇಣ ದಷ್ಟಃ
'ಹರಿಯನ್ನು ಒಂದು ಕಪ್ಪು ಹಾವು ಕಚ್ಚಿತು'

'ಒಂದು ಕಪ್ಪು ಹಾವು' ಎಂಬ ಪದಕಂತೆಯನ್ನು ಸಂಸ್ಕೃತದಲ್ಲಿ ಬಳಸಬೇಕಿದ್ದರೆ, ಅದರಲ್ಲಿ ಬರುವ ಮೂರು ನಾಮಪದಗಳಿಗೂ ವಿಭಕ್ತಿ–ವಚನ ಪ್ರತ್ಯಯಗಳನ್ನು ಸೇರಿಸಬೇಕು, ಮತ್ತು ಈ ಪ್ರತ್ಯಯಗಳು ಮೂರರಲ್ಲೂ ಒಂದೇ ಆಗಿರಬೇಕು ಎಂಬುದನ್ನು ಆ ಪದಕಂತೆಗೆ (೧೧ಕ–ಗ)ಗಳಲ್ಲಿ ಕಾಣಿಸುವ ಬೇರೆ ಬೇರೆ ರೂಪಗಳಿಂದ ತಿಳಿಯಬಹುದು.

ಕ್ರಿಯಾಪದವೊಂದನ್ನು ನಾಮಪದದ ಜಾಗದಲ್ಲಿ (ಎಂದರೆ ವಿಭಕ್ತಿ ಪ್ರತ್ಯಯಗಳೊಂದಿಗೆ) ಬಳಸಬೇಕಿದ್ದಲ್ಲಿ, ಅದಕ್ಕೆ ಕೃತ್ ಪ್ರತ್ಯಯಗಳಲ್ಲೊಂದನ್ನು ಸೇರಿಸುವ ಅವಶ್ಯಕತೆಯಿದೆ. ಈ ಪ್ರತ್ಯಯವನ್ನು ಸೇರಿಸಿದ ಮೇಲೆ, ಅದಕ್ಕೆ ವಿಭಕ್ತಿ ಪ್ರತ್ಯಯಗಳನ್ನು ನೇರವಾಗಿ ಸೇರಿಸಬಹುದು. ಹಾಗಾಗಿ, ಸಂಸ್ಕೃತದಲ್ಲಿ ಈ ರೀತಿ ಒಂದು ಕ್ರಿಯಾಪದಕ್ಕೆ ಕೃತ್ ಪ್ರತ್ಯಯವನ್ನು ಸೇರಿಸಿ ತಯಾರಿಸಿದ ಕ್ರಿಯಾರೂಪವನ್ನು ಆ ಕ್ರಿಯಾಪದದ ನಾಮರೂಪವೆಂದು ಪರಿಗಣಿಸಲು ಸಾಧ್ಯವಿದೆ.

(೧೨ಕ) ಅಹಂ ಭಗ್ನಂ ಅಪಶ್ಯಂ
'ನಾನು ಒಡೆದುದನ್ನು ನೋಡಿದೆ'
(೧೨ಖ) ಅಹಂ ಘಟಂ ಕುರ್ವಾಣಂ ಅಪಶ್ಯಂ
'ನಾನು ಕೊಡ ಮಾಡುವವನನ್ನು ನೋಡಿದೆ'

(೧೨ಕ)ದಲ್ಲಿ ಭಗ್ನ 'ಒಡೆದ' ಕೃದಂತಕ್ಕೆ ದ್ವಿತೀಯಾ ವಿಭಕ್ತಿ ಪ್ರತ್ಯಯವನ್ನು ನೇರವಾಗಿ ಸೇರಿಸಲಾಗಿದೆ; ಆದರೆ ಈ ವಾಕ್ಯದ ಅನುವಾದದಲ್ಲಿ ಕಾಣಿಸಿದ ಹಾಗೆ, ಕನ್ನಡದಲ್ಲಿ ಒಡೆದ ಕೃದಂತಕ್ಕೆ ಅನ್ನು ಪ್ರತ್ಯಯವನ್ನು ಸೇರಿಸಬೇಕಿದ್ದಲ್ಲಿ ಅದಕ್ಕೆ ಮೊದಲು ಲಿಂಗ-ವಚನವನ್ನು ಸೂಚಿಸುವ ಉದು ಪ್ರತ್ಯಯವನ್ನು ಸೇರಿಸ ಬೇಕಾಗಿದೆ. ಇದೇ ರೀತಿಯಲ್ಲಿ (೧೨ಖ) ವಾಕ್ಯದಲ್ಲಿ ಸಂಸ್ಕೃತದ ಕುರ್ವಾಣ 'ಮಾಡುವ' ಕೃದಂತಕ್ಕೆ ದ್ವಿತೀಯಾ ವಿಭಕ್ತಿಯನ್ನು ನೇರವಾಗಿ ಸೇರಿಸಲಾಗಿದೆ; ಆದರೆ, ಅದರ ಅನುವಾದದಲ್ಲಿ ಕಾಣಿಸಿದ ಹಾಗೆ, ಕನ್ನಡದ ಮಾಡುವ ಎಂಬ ಕೃದಂತಕ್ಕೆ ಮೊದಲಿಗೆ ಲಿಂಗ-ವಚನವನ್ನು ಸೂಚಿಸುವ ಅವನು ಎಂಬುದನ್ನು ಸೇರಿಸಿ, ಅನಂತರ ಅನ್ನು ಪ್ರತ್ಯಯವನ್ನು ಸೇರಿಸಲಾಗಿದೆ.

ಈ ವಿಷಯದಲ್ಲಿ ಹಳೆಗನ್ನಡ ಹೊಸಗನ್ನಡದ ಹಾಗೆಯೇ ಇದೆ ಎಂಬುದನ್ನು ಮೇಲೆಯೇ (೪.೨.೧ರಲ್ಲಿ) ನೋಡಿರುವೆವು.

ಹಳೆಗನ್ನಡದ ಕೃದಂತಕ್ಕೂ ಸಂಸ್ಕೃತದ ಕೃದಂತಕ್ಕೂ ನಡುವಿರುವ ವ್ಯತ್ಯಾಸ ಇದರಿಂದ ಸ್ಪಷ್ಟವಾಗುತ್ತದೆ: ಹಳೆಗನ್ನಡದ ಕೃದಂತಗಳು ಗುಣಪದದ ಜಾಗದಲ್ಲಿ ಬರುವ ಕಾರಣ, ಅವು ಕ್ರಿಯಾಪದಗಳ ಗುಣರೂಪಗಳು; ನಾಮಪದದ ಜಾಗದಲ್ಲಿ ಬರಬೇಕಿದ್ದರೆ, ಅವಕ್ಕೆ ಲಿಂಗ-ವಚನಗಳನ್ನು ಸೂಚಿಸುವ ಪ್ರತ್ಯಯವನ್ನು ಸೇರಿಸುವುದರ ಮೂಲಕ, ಅವನ್ನು ನಾಮರೂಪಗಳನ್ನಾಗಿ ಬದಲಾಯಿಸುವ ಅವಶ್ಯಕತೆಯಿದೆ.

ಆದರೆ, ಸಂಸ್ಕೃತದಲ್ಲಿ ಕೃದಂತಗಳು ನೇರವಾಗಿ ನಾಮಪದದ ಜಾಗದಲ್ಲಿ ಬರುತ್ತವೆ; ಅವು ಕ್ರಿಯಾಪದಗಳ ನಾಮರೂಪಗಳಲ್ಲದೆ ಗುಣರೂಪಗಳಲ್ಲ. (ಸಂಸ್ಕೃತದಲ್ಲಿ ಗುಣಪದವೆಂಬ ಮೂರನೆಯ ಪದವರ್ಗ ಇಲ್ಲದಿರುವುದೇ ಈ ರೀತಿ ಅದರ ಕ್ರಿಯಾಪದಗಳಿಗೆ ಗುಣರೂಪಗಳಿಲ್ಲದಿರುವುದಕ್ಕೆ ಕಾರಣ).

(ಖ) ಕ್ರಿಯಾಪದದ ಜಾಗ: ಸಂಸ್ಕೃತದಲ್ಲಿ ನಾಮಪದಗಳನ್ನು ನೇರವಾಗಿ ಕ್ರಿಯಾಪದಗಳ ಜಾಗದಲ್ಲಿ ಬಳಸಲು ಸಾಧ್ಯವಿದೆ. ಇದಕ್ಕಾಗಿ ಅವುಗಳಿಗೆ ತಿಙ್ ಪ್ರತ್ಯಯಗಳನ್ನು ನೇರವಾಗಿ ಸೇರಿಸಲಾಗುತ್ತದೆ (ಪಿತೃ-ಪಿತರತಿ, ಮಾಲಾ-ಮಾಲಾತಿ, ಕವಿ-ಕವಯತಿ).

ಇದಲ್ಲದೆ, ನಾಮಪದಗಳಿಗೆ ಯ ಪ್ರತ್ಯಯವನ್ನು ಸೇರಿಸಿಯೂ ಅವನ್ನು ಕ್ರಿಯಾರೂಪಕ್ಕೆ ಬದಲಾಯಿಸಿಕೊಳ್ಳಲು ಸಾಧ್ಯವಿದೆ. ಈ ಪ್ರತ್ಯಯ ಸೇರಿದಾಗ ಅವುಗಳ ಕೊನೆಯ ಸ್ವರ ಮತ್ತು ವ್ಯಂಜನಗಳಲ್ಲಿ ಕೆಲವು ಬದಲಾವಣೆಗಳು ತೋರಿಬರುತ್ತವೆ (ಪುತ್ರ-ಪುತ್ರೀಯತಿ, ಕವಿ-ಕವೀಯತಿ, ಗೋ-ಗವ್ಯತಿ).

### ೪.೨.೩ ಹಳೆಗನ್ನಡ ವ್ಯಾಕರಣಗಳ ಸಮಸ್ಯೆಗಳು

ಗುಣಪದಗಳ ಬಳಕೆಯಲ್ಲಿ ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವಿರುವ ಈ ಅತ್ಯಂತ ಮುಖ್ಯವಾದ ವ್ಯತ್ಯಾಸವನ್ನು ಗಮನಿಸದ ಕಾರಣ, ಹೆಚ್ಚಿನ ಹಳೆಗನ್ನಡ ವ್ಯಾಕರಣಗಳಲ್ಲೂ ಹಲವು ರೀತಿಯ ಸಮಸ್ಯೆಗಳು ತಲೆದೋರಿವೆ.

(ಕ) ಸಂಸ್ಕೃತದ ಹಾಗೆ ಹಳೆಗನ್ನಡದಲ್ಲೂ ಗುಣಪದ (ಗುಣವಾಚಕ)ಗಳು ನಾಮಪದ ವರ್ಗದಲ್ಲೇನೇ ಬರುವವುಗಳೆಂದು ಭಾವಿಸಿರುವ ಕಾರಣ, ಒಳ್ಳಿತು, ಕರಿದು, ಇನಿಯದು ಮೊದಲಾದ ಗುಣಪದಗಳ ನಾಮರೂಪಗಳನ್ನೇ ಅವುಗಳ ಸಹಜರೂಪಗಳೆಂದು ಪರಿಗಣಿಸಬೇಕಾಗಿದೆ (ಕೇಶಿರಾಜ, ಸೂ. ೮೭, ಭಟ್ಟಾಕಳಂಕ, ಸೂ. ೧೬೬ ನೋಡಿ). ಯಾಕೆಂದರೆ, ವಿಭಕ್ತಿ ಪ್ರತ್ಯಯಗಳು ಇಂತಹ ನಾಮರೂಪಗಳೊಂದಿಗೆ ಮಾತ್ರ ಬರಬಲ್ಲುವಲ್ಲದೆ, ನೇರವಾಗಿ ಒಳ್, ಕರಿ, ಇನಿ ಮೊದಲಾದ ಗುಣಪದಗಳೊಂದಿಗೆ ಬರಲಾರವು.

ಆದರೆ, ನಿಜಕ್ಕೂ ಒಳ್ಳಿತು, ಕರಿದು, ಇನಿಯದು ಮೊದಲಾದವುಗಳನ್ನು ಒಳ್ಳಿದನ್, ಒಳ್ಳಿದಳ್, ಒಳ್ಳಿದರ್, ಒಳ್ಳಿದುವು ಮೊದಲಾದವುಗಳ ಹಾಗೆ, ಗುಣಪದಗಳಿಗೆ ಲಿಂಗ-ವಚನ (ನಪುಂಸಕ-ಏಕವಚನ) ಪ್ರತ್ಯಯವನ್ನು ಸೇರಿಸಿ ತಯಾರಿಸಲಾಗಿದೆ. ಅವು ಗುಣಪದಗಳ ನಾಮರೂಪಗಳಲ್ಲದೆ ಸಹಜ ರೂಪಗಳಲ್ಲ.

(ಖ) ಗುಣಪದಗಳೊಂದಿಗೆ ನಾಮಪದಗಳನ್ನು ಬಳಸಿ ರಚಿಸಿರುವ ನಾಮಪದ ಕಂತೆಗಳನ್ನು ಸಮಾಸ('ಕರ್ಮಧಾರಯ')ವೆಂದು ಕರೆಯಬೇಕಾಗಿದೆ. ಆದರೆ, ನಿಜಕ್ಕೂ ನಲ್ಲಂಬು, ಕೂರಂಬು, ಬೆಳ್ಮುಗಿಲ್, ನಿಡುದೋಳ್, ಪೆರ್ದೊಡೆ, ಎಳವುಲ್ ಮೊದಲಾದವುಗಳಲ್ಲಿ ನಲ್, ಕೂರ್, ಬೆಳ್, ನಿಡು, ಪೆರ್, ಎಳ ಗುಣಪದಗಳು ತಮ್ಮ ಸಹಜರೂಪದಲ್ಲಿ (ಎಂದರೆ ಯಾವ ಪ್ರತ್ಯಯವನ್ನೂ ಸೇರಿಸಿಕೊಳ್ಳದೆ) ನೇರವಾಗಿ ನಾಮಪದಗಳೊಂದಿಗೆ ಬಂದಿವೆ; ಅವು ಪದಕಂತೆಗಳಲ್ಲದೆ ಸಮಾಸಗಳಲ್ಲ.

(ಗ) ಹಳೆಗನ್ನಡದಲ್ಲಿ ಕೃಲ್ಲಿಂಗಗಳು ಕೃದಂತಗಳಿಗಿಂತ ಭಿನ್ನವಾದವುಗಳು; ಕೃದಂತಗಳಿಗೆ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸಿದಾಗ ಮಾತ್ರ ಕೃಲ್ಲಿಂಗಗಳು ಸಿದ್ಧವಾಗುತ್ತವೆ (ಇರ್ದ-ಇರ್ದನ್, ಇರ್ದರ್, ಇರ್ದುದು, ಪಡೆವ-ಪಡೆವನ್, ಪಡೆವಳ್, ಈಯದ-ಈಯದನ್, ಈಯದರ್ ಇತ್ಯಾದಿ). ಹಾಗಾಗಿ, ಕೃದಂತಗಳನ್ನು ಕ್ರಿಯಾಪದಗಳ ಗುಣರೂಪಗಳೆಂದು ಮತ್ತು ಕೃಲ್ಲಿಂಗಗಳನ್ನು ಅವುಗಳಿಂದ ಸಿದ್ಧವಾದ ನಾಮರೂಪಗಳೆಂದು ಪರಿಗಣಿಸುವ ಅವಶ್ಯಕತೆಯಿದೆ.

ಆದರೆ, ಸಂಸ್ಕೃತದಲ್ಲಿ ಕೃದಂತಗಳೇ ಕೃಲ್ಲಿಂಗಗಳು. ಹಳೆಗನ್ನಡ ಮತ್ತು ಸಂಸ್ಕೃತಗಳ ನಡುವಿರುವ ಈ ವ್ಯತ್ಯಾಸವನ್ನು ಗಮನಿಸದುದರಿಂದಾಗಿ, ಕೃದಂತ ಮತ್ತು ಕೃಲ್ಲಿಂಗಗಳ ಕುರಿತು ಪ್ರಾಚೀನ ವೈಯಾಕರಣಿಗಳು ಕೊಡುವ ನಿಯಮಗಳೆಲ್ಲ ಸಿಕ್ಕುಸಿಕ್ಕಾಗಿವೆ.

(ಘ) ಹಳೆಗನ್ನಡದಲ್ಲಿ ಕೊಳನ, ಮರದ, ಅರಸಿನ, ಕೋಂಟೆಯ ಮೊದಲಾದ ರೂಪಗಳು ಕೊಳ, ಮರ, ಅರಸು, ಕೋಂಟೆ ಮೊದಲಾದ ನಾಮಪದಗಳ ಗುಣರೂಪಗಳಲ್ಲದೆ ವಿಭಕ್ತಿರೂಪ ಗಳಲ್ಲ. ಗುಣಪದಗಳ ಹಾಗೆ, ಮತ್ತು ಕ್ರಿಯಾಪದಗಳ ಗುಣರೂಪಗಳ ಹಾಗೆ, ಇವು ನಾಮಪದ ಗಳೊಂದಿಗೆ ಪದಕಂತೆಗಳಲ್ಲಿ ಬರಬಲ್ಲುವಲ್ಲದೆ, ನೇರವಾಗಿ ಒಂದು ವಾಕ್ಯದ ಅಂಗವಾಗಿ ಬರಲಾರವು. ಆದರೆ, ಹಳೆಗನ್ನಡ ವ್ಯಾಕರಣಗಳಲ್ಲಿ ಇವನ್ನು ವಿಭಕ್ತಿ ರೂಪಗಳೆಂದು ಪರಿಗಣಿಸಲಾಗಿದೆ.

ಹಳೆಗನ್ನಡದ ಈ ರೂಪಗಳನ್ನು ವಿಭಕ್ತಿ ರೂಪಗಳೆಂದು ಪರಿಗಣಿಸಿದಲ್ಲಿ, ಅವು ಗುಣಪದಗಳ ಹಾಗೆ ಲಿಂಗ-ವಚನ ಪ್ರತ್ಯಯಗಳೊಂದಿಗೆ ಬರುವುದನ್ನು, ಮತ್ತು ಇವುಗಳ ಅನಂತರ ಬೇರೆ

ವಿಭಕ್ತಿ ಪ್ರತ್ಯಯಗಳು ಬರುವುದನ್ನು ವಿವರಿಸುವುದು ಒಂದು ಸಮಸ್ಯೆಯಾಗುತ್ತದೆ (೮.೭.೫ ನೋಡಿ).

(ಐ) ಗುಣಪದ (ಗುಣವಚನ), ಸರ್ವನಾಮ, ಗುಣೋಕ್ತಿಯಾಗಿ ಬಂದ ನಾಮಪದ, ಮೊದಲಾದವುಗಳೊಂದಿಗೆ ಘಟಕವನ್ನು ಸೂಚಿಸುವ ಆಖ್ಯಾತ ಪ್ರತ್ಯಯಗಳು ಬರುತ್ತವೆಯೆಂದು ಹಳೆಗನ್ನಡದ ವೈಯಾಕರಣಿಗಳು ಹೇಳುತ್ತಾರೆ (ಕೇಶಿರಾಜ, ಸೂ. ೨೩೦ ನೋಡಿ). ಆದರೆ, ನಿಜಕ್ಕೂ ಒಳ್ಳಿದನಯ್, ಒಳ್ಳಿದರಿರ್, ಪೆಜಿನಯ್ ಮೊದಲಾದವುಗಳಲ್ಲಿ, ಮೇಲೆ ೪.೧.೨ರಲ್ಲಿ ವಿವರಿಸಿದ ಹಾಗೆ, ಎರಡೆರಡು ಪ್ರತ್ಯಯಗಳು ಬಂದಿವೆ.

ಮೊದಲಿಗೆ ಗುಣಪದಗಳನ್ನು ನಾಮರೂಪಕ್ಕೆ ಬದಲಾಯಿಸುವುದಕ್ಕಾಗಿ ಅವಕ್ಕೆ ಲಿಂಗ-ವಚನಗಳನ್ನು ಸೂಚಿಸುವ ಪ್ರತ್ಯಯಗಳನ್ನು ಸೇರಿಸಲಾಗಿದೆ, ಮತ್ತು ಅನಂತರ ಅವನ್ನು ವಿಷಯ ವಾಕ್ಯಗಳ ಕ್ರಿಯಾಪದದ ಜಾಗದಲ್ಲಿ ಇರಿಸಿದಾಗ, ಆಡುಗ ಮತ್ತು ಕೇಳುಗರನ್ನು ಸೂಚಿಸಬೇಕಾಗಿರುವಲ್ಲಿ ಪುರುಷ ಪ್ರತ್ಯಯಗಳನ್ನು ಸೇರಿಸಲಾಗಿದೆ.

## ೪.೩ ಸರ್ವನಾಮಗಳು

ಹೆಚ್ಚಿನ ಭಾಷೆಗಳಲ್ಲೂ 'ಪುರುಷಪದ' ಮತ್ತು 'ಸರ್ವಪದ' ಎಂಬುದಾಗಿ ಎರಡು ಪದವರ್ಗಗಳಿಗೆ ಸೇರುವ ಪದಗಳಿರುತ್ತವೆ. ಇವುಗಳಲ್ಲಿ ಪುರುಷಪದಗಳು ಒಂದು ವಾಕ್ಯವನ್ನು ಬಳಸುವ ವ್ಯಕ್ತಿಗಳನ್ನು (ವಾಕ್ಯದ ಆಡುಗ, ಕೇಳುಗ ಮತ್ತು ಇತರ ವ್ಯಕ್ತಿಗಳನ್ನು) ಆ ವಾಕ್ಯದಲ್ಲೇನೇ ಸೂಚಿಸುವುದಕ್ಕಾಗಿ ಬಳಕೆಯಾಗುತ್ತವೆ. ಬೇರೆ ಪದಗಳು ಆ ವ್ಯಕ್ತಿಗಳನ್ನು ಗುರುತಿಸಬಲ್ಲುವಾದರೂ, ಅಂತಹ ವ್ಯಕ್ತಿಗಳು ಆ ವಾಕ್ಯವನ್ನು ಬಳಸುತ್ತಿರುವವರು ಎಂಬುದನ್ನು ಸೂಚಿಸಲಾರವು.

ಉದಾಹರಣೆಗಾಗಿ, ಒಂದು ವಾಕ್ಯದ ಆಡುಗ ಪಾತ್ರವನ್ನು ಆ ವಾಕ್ಯದಲ್ಲೇನೇ ಸೂಚಿಸುವುದಕ್ಕಾಗಿ ಹಳೆಗನ್ನಡದಲ್ಲಿ ಆನ್ (ಆಂ) ಪುರುಷಪದವನ್ನೂ, ಕೇಳುಗ ಪಾತ್ರವನ್ನು ಸೂಚಿಸುವುದಕ್ಕಾಗಿ ನೀನ್ (ನೀಂ) ಪುರುಷಪದವನ್ನೂ, ಮತ್ತು ಇವರಿಬ್ಬರಿಗಿಂತ ಭಿನ್ನವಾದ ವ್ಯಕ್ತಿಯೊಬ್ಬನನ್ನು ಸೂಚಿಸುವುದಕ್ಕಾಗಿ ತಾನ್ (ತಾಂ) ಪುರುಷಪದವನ್ನೂ ಬಳಸಲಾಗುತ್ತದೆ. ಇವುಗಳ ಬಳಕೆಯನ್ನು ಪಂಪ ಭಾರತದ ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು.

(೧೩ಕ) ಆಂ ಇಂತಿದನೆ ಬೇಡಿದೆನ್ (೨.೬೧)
'ಇದನ್ನೇ ನಾನು ಬೇಡಿದ್ದೇನೆ'

(೧೩ಖ) ನೀಂ ಸಾಮಾನ್ಯೆಯಲ್ಲೆ (೮.೫೫ವ)
'ನೀನು ಸಾಮಾನ್ಯಳಲ್ಲ'

(೧೩ಗ) ಗಾಂಧಾರಿ ಸೂರ್ವರ್ಮಕ್ಕಳಂ ಪಡೆವಂತು ಪರಾಶರ ಮುನೀದ್ರನೊಳ್ ಬರಂಬಡೆದಳೆಂಬುದಂ ಕುಂತಿ ಕೇಳ್ದು ತಾನುಂ ಪುತ್ರಾರ್ಥಿನಿಯಾಗಲ್ ಬಗೆದು (೧.೧೧೬ವ)
'ಗಾಂಧಾರಿ ನೂರು ಮಕ್ಕಳನ್ನು ಪಡೆಯುವಂತೆ ವ್ಯಾಸಮಹರ್ಷಿಗಳಿಂದ ವರವನ್ನು ಪಡೆದಳೆಂಬುದನ್ನು ಕುಂತಿ ಕೇಳಿ ತಾನೂ ಮಕ್ಕಳನ್ನು ಬಯಸುವವಳಾಗಿ...'

(೧೩ಕ) ವಾಕ್ಯವನ್ನು ದ್ರೋಣಾಚಾರ್ಯನು ಆಡಿದ್ದು, ಆತನನ್ನೇ ಅದರಲ್ಲಿ ಬಂದಿರುವ ಆಂ ಪದ ಸೂಚಿಸುತ್ತದೆ. ಇದಕ್ಕೆ ಬದಲು, (೧೩ಖ) ವಾಕ್ಯವನ್ನು ವಿರಾಟನ ಮಹಾರಾಣಿಯಾದ ಸುದೇಷ್ಣೆ ಆಡಿದ್ದು, ಅದನ್ನು ಆಕೆ ಸೈರಂಧ್ರಿ ವೇಷದಲ್ಲಿರುವ ದ್ರೌಪದಿಯನ್ನುದ್ದೇಶಿಸಿ ಹೇಳಿದ್ದಾಳೆ.

ಹಾಗಾಗಿ, ಅದರ ಕೇಳುಗಳು ದ್ರೌಪದಿಯಾಗಿದ್ದು, ಆಕೆಯನ್ನು ಅದರಲ್ಲಿ ಬಂದಿರುವ ನೀಂ ಪದ ಸೂಚಿಸುತ್ತದೆ.

(೧೩ಗ) ವಾಕ್ಯದಲ್ಲಿ ಕವಿಯೇ ಆ ವಾಕ್ಯದ ಆಡುಗ, ಮತ್ತು ಅವನ ಕಾವ್ಯವನ್ನು ಓದುವವರೇ ಆ ವಾಕ್ಯದ 'ಕೇಳುಗರು'; ಇವರಿಬ್ಬರಿಗಿಂತ ಭಿನ್ನವಾಗಿರುವ ಕುಂತಿಯನ್ನು ತಾನ್ ಎಂಬ ಮೂರನೆಯ ಪುರುಷಪದ ಸೂಚಿಸುತ್ತದೆ.

ಸರ್ವಪದಗಳಿಗೆ ಈ ಪುರುಷಪದಗಳಿಗಿಂತ ತೀರ ಭಿನ್ನವಾದ ಕೆಲಸವಿದೆ. ಅವುಗಳ ರಚನೆಯೂ ಪುರುಷಪದಗಳ ರಚನೆಗಿಂತ ಭಿನ್ನವಾಗಿದೆ. ಸರ್ವಪದಗಳಲ್ಲೆಲ್ಲ ಸಾಮಾನ್ಯವಾಗಿ ಎರಡೆರಡು ಅಂಗಗಳು ಬರುತ್ತಿದ್ದು, ಅವುಗಳಲ್ಲಿ ಮೊದಲನೆಯ ಅಂಗ ಆ ಸರ್ವಪದದ ಕೆಲಸವೇನೆಂಬುದನ್ನು ಮತ್ತು ಎರಡನೆಯ ಅಂಗ ಅದರ ವ್ಯಾಪ್ತಿಯೇನೆಂಬುದನ್ನು ತಿಳಿಸುತ್ತವೆ.

ಉದಾಹರಣೆಗಾಗಿ, ಎನಿತು ಸರ್ವಪದದಲ್ಲಿ ಮೊದಲನೆಯ ಅಂಗವಾದ ಎ ಎಂಬುದು ಆ ಸರ್ವಪದಕ್ಕೆ ಅನಿಶ್ಚಿತತೆಯನ್ನು ಸೂಚಿಸುವ ಕೆಲಸವಿದೆಯೆಂದು ತಿಳಿಸುತ್ತದೆ, ಮತ್ತು ಎರಡನೆಯ ಅಂಗವಾದ ನಿತು ಎಂಬುದು ಆ ಸರ್ವಪದ ಸೂಚಿಸುವ ಅನಿಶ್ಚಿತತೆ ವಸ್ತುವೊಂದರ ಪರಿಮಾಣಕ್ಕೆ ಸೀಮಿತವಾಗಿದೆ ಎಂಬುದಾಗಿ ಅದರ ವ್ಯಾಪ್ತಿಯನ್ನು ತಿಳಿಸುತ್ತದೆ (ಹೆಚ್ಚಿನ ವಿವರಗಳಿಗೆ ಭಟ್ ೨೦೦೩, ೨೦೦೪ ನೋಡಿ).

ಹೆಚ್ಚಿನ ವ್ಯಾಕರಣಗಳಲ್ಲೂ ಈ ಎರಡು ರೀತಿಯ ಪದಗಳನ್ನು ಒಟ್ಟಾಗಿ 'ಸರ್ವನಾಮ' ಎಂಬ ಒಂದು ಪದವರ್ಗದಲ್ಲಿ ಸೇರಿಸಿ ಹೇಳುವುದು ರೂಢಿ. ಆದರೆ, ನಿಜಕ್ಕೂ ಈ ಎರಡು ರೀತಿಯ ಪದಗಳ ನಡುವೆ ಯಾವ ಸಾದೃಶ್ಯವೂ ಇಲ್ಲ. ಹಾಗಾಗಿ, ಅವನ್ನು ಬೇರೆ ಬೇರೆ ಪದವರ್ಗಗಳಲ್ಲಿರಿಸಿ ಹೇಳುವುದೇ ಒಳ್ಳೆಯದು.

ಈ ಎರಡು ಪದವರ್ಗಗಳ ಮಟ್ಟಿಗೆ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಹಲವು ಮುಖ್ಯವಾದ ವ್ಯತ್ಯಾಸಗಳಿವೆ. ಇವುಗಳಲ್ಲಿ ಪುರುಷಪದಗಳನ್ನು ಕೆಳಗೆ (೪.೪)ನೇ ವಿಭಾಗದಲ್ಲೂ ಸರ್ವಪದಗಳನ್ನು ಮುಂದೆ (೪.೫)ನೇ ವಿಭಾಗದಲ್ಲೂ ಪರಿಶೀಲಿಸಲಾಗುವುದು.

### ೪.೪ ಪುರುಷಪದಗಳು

ಮೇಲೆ ಸೂಚಿಸಿದ ಹಾಗೆ, ಹಳೆಗನ್ನಡದಲ್ಲಿ ಆನ್, ನೀನ್ ಮತ್ತು ತಾನ್ ಎಂಬುದಾಗಿ ಮೂರು ಪುರುಷಪದಗಳು ಬಳಕೆಯಲ್ಲಿದ್ದು, ಇವು ವಾಕ್ಯದ ಆಡುಗ, ಕೇಳುಗ ಮತ್ತು ಇತರ ಎಂಬುದಾಗಿ ವಾಕ್ಯವನ್ನು ಉಂಟುಮಾಡುವ ಮತ್ತು ಬಳಸುವ ಕೆಲಸಕ್ಕೆ ಸಂಬಂದಿಸಿದ ವ್ಯಕ್ತಿಗಳನ್ನು ಸೂಚಿಸುತ್ತವೆ.

ಆದರೆ, ಸಂಸ್ಕೃತದಲ್ಲಿ ಅಹಂ ಮತ್ತು ತ್ವಂ ಎಂಬುದಾಗಿ ಎರಡು ಪುರುಷಪದಗಳು ಮಾತ್ರ ಬಳಕೆಯಲ್ಲಿವೆ. ಆಡುಗ ಮತ್ತು ಕೇಳುಗರಿಗಿಂತ ಭಿನ್ನವಾಗಿರುವ ವ್ಯಕ್ತಿಯನ್ನು ಸೂಚಿಸುವಂತಹ ವಿಶಿಷ್ಟವಾದ ಪುರುಷಪದ ಸಂಸ್ಕೃತದಲ್ಲಿಲ್ಲ (೪.೪.೨ ನೋಡಿ).

### ೪.೪.೧ ಕೇಳುಗನ ಸೇರಿಕೆ

ಪುರುಷಪದಗಳ ಬಹುವಚನ ರೂಪಗಳಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಒಂದು ಮುಖ್ಯವಾದ ವ್ಯತ್ಯಾಸವಿದೆ. ಹಳೆಗನ್ನಡದಲ್ಲಿ ಆಡುಗ ಮತ್ತು ಕೇಳುಗರನ್ನು ಸೂಚಿಸುವ ಆನ್ ಮತ್ತು ನೀನ್ ಎಂಬ ಎರಡು ಪುರುಷ ಪದಗಳಿಗೆ ಬಹುವಚನದಲ್ಲಿ ಮೂರು ರೂಪಗಳಿವೆ:

ಮೊದಲನೆಯದಾಗಿ, ಆನ್ ಎಂಬುದರ ಕೊನೆಯ ನಕಾರವನ್ನು ಮಕಾರವಾಗಿ ಬದಲಾಯಿಸಿ ತಯಾರಿಸಿದ ಆಮ್ ಎಂಬ ಬಹುವಚನ ರೂಪದ ಮೂಲಕ ಹಳೆಗನ್ನಡದಲ್ಲಿ 'ಆಡುಗ ಮತ್ತು ಬೇರೊಬ್ಬ ವ್ಯಕ್ತಿ' ಎಂಬ ಅರ್ಥವನ್ನು ಸೂಚಿಸಲಾಗುತ್ತದೆ.

ಎರಡನೆಯದಾಗಿ, ನೀನ್ ಎಂಬುದರ ಕೊನೆಯ ನಕಾರವನ್ನು ಮಕಾರವಾಗಿ ಬದಲಾಯಿಸಿ ತಯಾರಿಸಿದ ನೀಮ್ ಎಂಬ ಬಹುವಚನ ರೂಪದ ಮೂಲಕ 'ಕೇಳುಗ ಮತ್ತು ಬೇರೊಬ್ಬ ವ್ಯಕ್ತಿ' ಎಂಬ ಅರ್ಥವನ್ನು, ಇಲ್ಲವೇ 'ಒಬ್ಬನಿಗಿಂತ ಜಾಸ್ತಿ ಕೇಳುಗರು' ಎಂಬ ಅರ್ಥವನ್ನು ಸೂಚಿಸಲಾಗುತ್ತದೆ.

ಮೂರನೆಯದಾಗಿ, ಆನ್ ಎಂಬುದರ ಕೊನೆಯ ನಕಾರವನ್ನು ಮಕಾರವಾಗಿ ಬದಲಾಯಿಸುವುದರೊಂದಿಗೆ ಅದರ ಸುರುವಿನಲ್ಲಿ ಒಂದು ನಕಾರವನ್ನೂ ಸೇರಿಸಿ ತಯಾರಿಸಿದ ನಾಮ್ ಎಂಬ ಬಹುವಚನ ರೂಪದ ಮೂಲಕ 'ಆಡುಗ ಮತ್ತು ಕೇಳುಗ' ಎಂಬ ಅರ್ಥವನ್ನು ಸೂಚಿಸಲಾಗುತ್ತದೆ.

ಈ ರೀತಿ, ಹಳೆಗನ್ನಡದ ಆನ್ ಮತ್ತು ನಾನ್ ಎಂಬ ಪುರುಷಪದಗಳಿಗೆ ಮೂರು ಬಹುವಚನ ರೂಪಗಳಿವೆಯಾದ ಕಾರಣ, ಆಮ್ ಎಂಬುದಕ್ಕೆ ಆಡುಗ ಮತ್ತು ಕೇಳುಗರ ಸೇರಿಕೆಯನ್ನು ಸೂಚಿಸುವ ಅರ್ಥವಿಲ್ಲ.

ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ವಾಕ್ಯಗಳನ್ನು ಗಮನಿಸಬಹುದು.

(೧೪ಕ) ಆಮ್ ಅಲ್ಲಿಗೆ ಪೋಪೆವು (೪.೪೮)
'ನಾವು (ಚಕ್ರವಾಕಪಕ್ಷಿಗಳು) ಅಲ್ಲಿಗೆ ಹೋಗುತ್ತೇವೆ'

(೧೪ಖ) ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ (೧.೭೦)
'ನೀವು (ನನ್ನನ್ನು) ಬೇಡುವುದಾದರೆ ನಮ್ಮ ತಂದೆಯನ್ನು ಪ್ರಾರ್ಥಿಸಿ'

(೧೫ಕ) ನಾಮ್ ಆಡುವಮೆ ಬನ್ನಿ (೬.೭೦)
'ನಾವು ಆಡೋಣವೇ? ಬನ್ನಿ'

(೧೫ಖ) ತೊಡರ್ದರ್ ನಮ್ಮಯ ಭಕ್ಷದೊಳ್ (೩.೧೨)
'ನಮ್ಮ ಆಹಾರದಲ್ಲಿ ಸಿಕ್ಕಿಬಿದ್ದರು'

ಮೇಲೆ (೧೪ಕ)ದಲ್ಲಿ ಬಂದಿರುವ ಆಮ್ ಪದಕ್ಕೆ ಆಡುಗ (ಚಕ್ರವಾಕ ಪಕ್ಷಿ) ಮತ್ತು ಇತರರು (ಬೇರೆ ಚಕ್ರವಾಕಪಕ್ಷಿಗಳು) ಎಂಬ ಅರ್ಥವಿದೆಯಲ್ಲದೆ, ಆ ವಾಕ್ಯದ ಕೇಳುಗರಾಗಿರುವ ಇತರ ಪಕ್ಷಿಗಳನ್ನು ಆಡುಗನೊಂದಿಗೆ ಸೇರಿಸಿ ಹೇಳುವ ಅರ್ಥವಿಲ್ಲ. ಇದೇ ರೀತಿಯಲ್ಲಿ, (೧೪ಖ)ದಲ್ಲಿ ಬಂದಿರುವ ಎಮ್ಮ ಎಂಬುದಕ್ಕೂ ಆಡುಗನೊಂದಿಗೆ ಕೇಳುಗನನ್ನು ಸೇರಿಸಿ ಹೇಳುವ ಅರ್ಥವಿಲ್ಲ.

ಇದಕ್ಕೆ ಬದಲು, (೧೫ಕ)ದಲ್ಲಿ ಬಂದಿರುವ ನಾಮ್ ಪದಕ್ಕೆ ಆಡುಗನಾಗಿರುವ ದುರ್ಯೋಧನನೊಂದಿಗೆ ಆ ವಾಕ್ಯದ ಕೇಳುಗನಾಗಿರುವ ಧರ್ಮರಾಯನನ್ನೂ ಸೇರಿಸಿ ಹೇಳುವ ಅರ್ಥವಿದೆ. ಇದೇ ರೀತಿಯಲ್ಲಿ, (೧೫ಖ)ದಲ್ಲಿ ಬಂದಿರುವ ನಮ್ಮಯ ಪುರುಷಪದಕ್ಕೆ ಆಡುಗನಾದ ಓಡಿಂಬನೊಂದಿಗೆ ಕೇಳುಗಳಾಗಿರುವ ಓಡಿಂಬೆಯನ್ನೂ ಸೇರಿಸಿ ಹೇಳುವ ಅರ್ಥವಿದೆ.

ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯಗಳಲ್ಲಿ ಈ ಮೂರು ರೀತಿಯ ಬಹುವಚನ ರೂಪಗಳೂ ಒಟ್ಟಿಗೆ ಬಂದಿದ್ದು, ಅವುಗಳ ನಡುವಿರುವ ಅರ್ಥ ವ್ಯತ್ಯಾಸ ಇನ್ನಷ್ಟು ಸ್ಪಷ್ಟವಾಗಿದೆ.

(೧೫ಗ) ನಾಮೆಲ್ಲಂ ಒಂದೆ ಗರುಡಿಯೊಳ್ ಒದಿದ ಮಾನಸರೆವು; ಎಮ್ಮಂ ನಿಮ್ಮಡಿ ಕೆಮ್ಮನೆ ಬಟಲಿಸವೇಡ (೯.೪೮೮)
'ನಾವೆಲ್ಲ ಒಂದೇ ಗರಡಿಯಲ್ಲಿ ಕಲಿತ ಮನುಷ್ಯರಾಗಿದ್ದೇವೆ; ನೀವು ನಮ್ಮನ್ನು ವೃಥಾ ಆಯಾಸಪಡಿಸಬೇಡಿ'

ಹಳೆಗನ್ನಡದ ಪುರುಷಪದಗಳಲ್ಲಿ ಕಾಣಿಸುವ ಈ ವ್ಯತ್ಯಾಸ ಸಂಸ್ಕೃತದಲ್ಲಿಲ್ಲ. ಆ ಭಾಷೆಯಲ್ಲಿ ಅಹಂ ಮತ್ತು ತ್ವಂ ಎಂಬ ಎರಡು ಪುರುಷಪದಗಳು ಮಾತ್ರ ಬಳಕೆಯಲ್ಲಿದ್ದು, ಇವುಗಳ ದ್ವಿವಚನ ಇಲ್ಲವೇ ಬಹುವಚನ ರೂಪಗಳಿಗೆ, ಹಳೆಗನ್ನಡದಲ್ಲಿರುವ ಹಾಗೆ, ಆಡುಗ ಮತ್ತು ಕೇಳುಗರ ಸೇರಿಕೆಯನ್ನು ಇತರ ಸೇರಿಕೆಗಳಿಂದ ಬೇರ್ಪಡಿಸಿ ಹೇಳುವ ಶಕ್ತಿಯಿಲ್ಲ.

ಉದಾಹರಣೆಗಾಗಿ, ಅಹಂ ಪದದ ದ್ವಿವಚನ ರೂಪವಾಗಿರುವ ಆವಾಂ ಎಂಬುದರ ಬಳಕೆಯಾಗಿರುವ ಕೆಳಗಿನ ವಾಕ್ಯವನ್ನು ಗಮನಿಸಬಹುದು.

(೧೬ಕ) ಆವಾಂ ನಗರಂ ಗಚ್ಛಾಮಃ
(೧) 'ನಾವು ಪೇಟೆಗೆ ಹೋಗೋಣ'
(೨) 'ನಾವು ಪೇಟೆಗೆ ಹೋಗುತ್ತೇವೆ'

(೧೬ಕ) ವಾಕ್ಯ ಎರಡು ಅರ್ಥಗಳಲ್ಲಿ ಬರಲು ಸಾಧ್ಯವಿದ್ದು, ಅದರಲ್ಲಿರುವ ಆವಾಂ ಪದಕ್ಕೆ ಮೊದಲನೆಯ ಅರ್ಥದಲ್ಲಿ ಬಳಕೆಯಾದಾಗ 'ನಾನು ಮತ್ತು ನೀನು' ಎಂಬುದಾಗಿ ಆಡುಗನೊಂದಿಗೆ ಕೇಳುಗನನ್ನು ಸೇರಿಸಿ ಹೇಳುವ ಅರ್ಥವೂ, ಎರಡನೆಯ ಅರ್ಥದಲ್ಲಿ ಬಳಕೆಯಾದಾಗ 'ನಾನು ಮತ್ತು ಅವನು' ಎಂಬುದಾಗಿ ಕೇಳುಗನನ್ನು ಸೇರಿಸದೆ ಬೇರೊಬ್ಬನನ್ನು ಸೇರಿಸಿ ಹೇಳುವ ಅರ್ಥವೂ ಬರುತ್ತದೆ. ಆದರೆ, ಹಳೆಗನ್ನಡದ ಹಾಗೆ ಇಲ್ಲಿ ಎರಡು ಬೇರೆ ಬೇರೆ ಪುರುಷ ಪದರೂಪಗಳು ಬಳಕೆಯಾಗುವುದಿಲ್ಲ.

ಹಳೆಗನ್ನಡದ ಈ ವ್ಯತ್ಯಾಸ ಹೊಸಗನ್ನಡದಲ್ಲೂ ಇಲ್ಲ ಎಂಬುದು (೧೬ಕ) ಸಂಸ್ಕೃತ ವಾಕ್ಯಕ್ಕೆ ಕೊಟ್ಟಿರುವ ಹೊಸಗನ್ನಡದ (೧-೨) ಅನುವಾದ ವಾಕ್ಯಗಳಲ್ಲಿ ಕಾಣಬಹುದು. ಆಡುಗನೊಂದಿಗೆ ಕೇಳುಗನನ್ನು ಸೇರಿಸದಿರುವ (೧)ನೇ ಅನುವಾದ ವಾಕ್ಯದಲ್ಲಿ, ಮತ್ತು ಕೇಳುಗನನ್ನು ಸೇರಿಸಿರುವ (೨)ನೇ ಅನುವಾದ ವಾಕ್ಯದಲ್ಲಿ – ಈ ಎರಡು ಸಂದರ್ಭಗಳಲ್ಲೂ ಹೊಸಗನ್ನಡದಲ್ಲಿ ನಾವು ಎಂಬ ಪುರುಷಪದವೇ ಬಳಕೆಯಾಗಿದೆ. (೧೫ಕ-ಗ) ವಾಕ್ಯಗಳ ಹೊಸಗನ್ನಡ ಅನುವಾದಗಳಲ್ಲೂ ಈ ವಿಷಯ ಸೂಚಿತವಾಗಿದೆ.

ಹಳೆಗನ್ನಡದ ಪುರುಷಪದಗಳಲ್ಲಿ ಕಾಣಿಸುವ ಈ ವ್ಯತ್ಯಾಸ ಕರಾವಳಿಯ ಕನ್ನಡ ಪ್ರಭೇದಗಳಲ್ಲಿ ಇವತ್ತಿಗೂ ಉಳಿದುಕೊಂಡಿದೆ. ಉದಾಹರಣೆಗಾಗಿ, ಕರಾವಳಿಯ ಹವ್ಯಕ ಕನ್ನಡ ಪ್ರಭೇದದಲ್ಲಿ ಹಳೆಗನ್ನಡದ ಆಮ್ ಎಂಬುದಕ್ಕೆ ಎಂಗೊ ಎಂಬ ರೂಪವೂ ಮತ್ತು ನಾಮ್ ಎಂಬುದಕ್ಕೆ ನಾವು ಎಂಬ ರೂಪವೂ ಬಳಕೆಯಲ್ಲಿವೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಹವ್ಯಕ ಕನ್ನಡ ವಾಕ್ಯಗಳನ್ನು ಗಮನಿಸಬಹುದು.

(೧೬ಖ) ನಾವು ಪೇಟೆಗೆ ಹೋಪೊ'
'ನಾವು ಪೇಟೆಗೆ ಹೋಗೋಣ'

(೧೬ಗ) ಎಂಗೊ ಪೇಟೆಗೆ ಹೋವುತ್ತೆಯೊ'
'ನಾವು ಪೇಟೆಗೆ ಹೋಗುತ್ತೇವೆ'

(೧೬ಖ)ದಲ್ಲಿ ಬಂದಿರುವ ನಾವು ಎಂಬುದು ಆಡುಗನೊಂದಿಗೆ ಕೇಳುಗನನ್ನೂ ಸೇರಿಸಿ ಸೂಚಿಸುತ್ತದೆ, ಆದರೆ (೧೬ಗ)ದಲ್ಲಿ ಬಂದಿರುವ ಎಂಗೊ ಎಂಬುದು ಆಡುಗನೊಂದಿಗೆ ಕೇಳುಗನನ್ನು ಹೊರತುಪಡಿಸಿ, ಬೇರೆ ಯಾವುದೋ ವ್ಯಕ್ತಿಯನ್ನು (ಅಥವಾ ವ್ಯಕ್ತಿಗಳನ್ನು) ಸೇರಿಸಿ ಸೂಚಿಸುತ್ತದೆ. ಈ ಎರಡು ಸಂದರ್ಭಗಳಲ್ಲೂ ಬರಹದ ಕನ್ನಡದಲ್ಲಿ ನಾವು ಎಂಬುದೇ ಬಳಕೆಯಾಗುತ್ತದೆ.

ಪುರುಷಪದಗಳ ಬಳಕೆಯಲ್ಲಿ ಹಳೆಗನ್ನಡದಲ್ಲಿ ಮಾತ್ರ ಕಾಣಿಸುವ, ಮತ್ತು ಸಂಸ್ಕೃತದಲ್ಲಿಲ್ಲದ ಈ ವೈಶಿಷ್ಟ್ಯವನ್ನು ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳು ಗಮನಿಸಿದ ಹಾಗೆ ಕಾಣಿಸುವುದಿಲ್ಲ. ಕಿಟ್ಟೆಲ್ (೧೯೦೩:೭೮) ಕೂಡ ಈ ಪದಗಳ ಆದಿಯಲ್ಲಿ ಬರುವ ನಕಾರಕ್ಕೆ ವಿಶಿಷ್ಟವಾದ ಅರ್ಥವನ್ನು ಕೊಡುವ ಶಕ್ತಿಯಿದೆಯೆಂಬುದನ್ನು ಗಮನಿಸಿಲ್ಲ.

ಕನ್ನಡ ಕೈಪಿಡಿಯಲ್ಲೂ (೧೯೨೭:೩೬೭) ಆಮ್ ಮತ್ತು ನಾಮ್ ಎಂಬವುಗಳು ಪ್ರಥಮ ಪುರುಷದ ಎರಡು ರೂಪಗಳೆಂದಿಷ್ಟೇ ಹೇಳಲಾಗಿದೆ. ಕಾಲ್ಡ್‌ವೆಲ್ (೧೯೧೩) ಕೂಡ, ಕನ್ನಡದ ಪುರುಷ ಪದಗಳಲ್ಲಿ ಕಾಣಿಸುವ ಈ ವ್ಯತ್ಯಾಸವನ್ನು ಗಮನಿಸಿರಲಿಲ್ಲ.

ಆದರೆ, ಇದು ತಪ್ಪು, ಹಳೆಗನ್ನಡದಲ್ಲೂ ಈ ಅರ್ಥಭೇದ ಸೂಚಿತವಾಗುತ್ತಿತ್ತು ಎಂಬುದನ್ನು ಆರ್. ನರಸಿಂಹಾಚಾರ್ (೧೯೨೪:೮೪) ತೋರಿಸಿಕೊಟ್ಟಿದ್ದಾರೆ. ಹತ್ತನೇ ಶತಮಾನದ ವಡ್ಡಾರಾಧನೆಯಲ್ಲೂ ಆಮ್, ಎಮಗೆ ಮತ್ತು ನಾಮ್, ನಮಗೆ ಎಂಬವುಗಳ ನಡುವೆ ಈ ಅರ್ಥವ್ಯತ್ಯಾಸವಿತ್ತೆಂಬುದನ್ನು ಗಾಯ್ (೧೯೫೫) ತೋರಿಸಿಕೊಟ್ಟಿದ್ದಾರೆ.

ಬಹುಶಃ ಹಳೆಗನ್ನಡದಲ್ಲೇನೇ ಬೇರೆ ಕೆಲವು ಕಾವ್ಯಗಳಲ್ಲಿ ಈ ವ್ಯತ್ಯಾಸ ಉಳಿದಿಲ್ಲದಿರಲು ಸಾಧ್ಯವಿದೆ. 'ಪ್ರಾಚೀನ ಪ್ರಯೋಗಗಳನ್ನು ಗಮನಿಸಿದರೆ ಇವು ಪರ್ಯಾಯವಾಗಿ ಬಳಕೆಯಾಗಿವೆಯಲ್ಲದೆ ಪದಗಳ ಅರ್ಥದಲ್ಲಿ ಅಲ್ಲ' ಎಂಬುದಾಗಿ ವೆಂಕಟಾಚಲ ಶಾಸ್ತ್ರಿಗಳು (೧೯೯೪:೬೮) ಹೇಳಿರುವುದು ಅಂತಹ ಕಾವ್ಯಗಳಲ್ಲಿ ಕಾಣಿಸುವ ಪ್ರಯೋಗಗಳ ಆಧಾರದ ಮೇಲಿರಬಹುದು.

### ೪.೪.೨ ಮೂರನೆಯ ವ್ಯಕ್ತಿ

ಪುರುಷಪದಗಳ ಮಟ್ಟಿಗೆ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವಿರುವ ಇನ್ನೊಂದು ವ್ಯತ್ಯಾಸವೇನೆಂದರೆ, ಹಳೆಗನ್ನಡದಲ್ಲಿ ಆನ್, ನೀನ್ ಮತ್ತು ತಾನ್ ಎಂಬುದಾಗಿ ಮೂರು ಪುರುಷಪದಗಳು ಬಳಕೆಯಲ್ಲಿವೆ. ಇವು ಮೇಲೆ ಸೂಚಿಸಿದ ಹಾಗೆ, ವಾಕ್ಯದ ಆಡುಗ, ಕೇಳುಗ ಮತ್ತು ಇತರ ಎಂಬುದಾಗಿ ಒಂದು ವಾಕ್ಯದ ಬಳಕೆಗೆ ಸಂಬಂಧಿಸಿದಂತೆ ಮೂರು ರೀತಿಯ ಪಾತ್ರಗಳನ್ನು ಸೂಚಿಸಬಲ್ಲುವು.

ಮೂರನೆಯ ವ್ಯಕ್ತಿಯನ್ನು ಸೂಚಿಸುವುದಕ್ಕಾಗಿ ತಾನ್ ಮತ್ತು ತಾಮ್ ಎಂಬವುಗಳ ಬಳಕೆಯಾಗುವುದನ್ನು ಪಂಪಭಾರತದ ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು.

(೧೭ಕ) ತಾನಾರಂದಮಲ್ಲ, ಅವಂ ನಿನ್ನನೆ ಪೋಲ್ವಂ (೮.೧೧)
'ಅವನು (ಬೇರೆ) ಯಾರ ಹಾಗೂ ಅಲ್ಲ, ಅವನು ನಿನ್ನನ್ನೇ ಹೋಲುತ್ತಾನೆ'

(೧೭೩) ನೀಮುಂ ತಾಮುಂ ಒಂದೆಡೆಯೊಳಿರೆ ಕಿಸುರುಂ ಕಲಹಮುಂ
ಎಂದುಂ ಕುಂದದು (೪.೮೭)
'ನೀವೂ ಅವರೂ ಒಂದೇ ಕಡೆ ಇದ್ದರೆ ಅಸೂಯೆಯೂ ಕಲಹವೂ
ಎಂದೂ ತಪ್ಪುವುದಿಲ್ಲ'

ಅವನ್, ಅವರ್ ಮೊದಲಾದ ಸರ್ವಪದಗಳಿಗೂ ಮತ್ತು ತಾನ್, ತಾಮ್ ಎಂಬ ಪುರುಷಪದಗಳಿಗೂ ನಡುವಿರುವ ವ್ಯತ್ಯಾಸವೇನೆಂದರೆ, ತಾನ್, ತಾಮ್ ಎಂಬವುಗಳ ಬಳಕೆ ಅವನ್ನು ಬಳಸಿರುವ ವಾಕ್ಯದ ಆಡುಗ ಮತ್ತು ಕೇಳುಗರಿಗೆ ಸಂಬಂಧಿಸಿದೆ. ಅವರಿಬ್ಬರಿಗಿಂತಲೂ ಭಿನ್ನವಾದ ವ್ಯಕ್ತಿ(ಗಳು) ಎಂಬರ್ಥ ಅವಕ್ಕಿದೆ. ಅವನ್, ಅವರ್ ಮೊದಲಾದವುಗಳಿಗೆ ಈ ರೀತಿ ವಾಕ್ಯದ ಆಡುಗ ಮತ್ತು ಕೇಳುಗರಿಗೆ ಸಂಬಂಧಿಸಿರುವಂತಹ ಅರ್ಥವಿಲ್ಲ.

ತಾನ್ ಎಂಬುದರ ಬಹುವಚನ ರೂಪ, ಉಳಿದೆರಡು ಪುರುಷಪದಗಳ ಬಹುವಚನ ರೂಪಗಳ ಹಾಗೆ, ನಕಾರದ ಬದಲು ಮಕಾರವನ್ನು ಬಳಸುವುದರ ಮೂಲಕ ಸಿದ್ಧಿಸುತ್ತದೆ, ಮತ್ತು ವಿಭಕ್ತಿ ಪ್ರತ್ಯಯಗಳೊಂದಿಗೆ ಬಂದಾಗ, ಅದರ ಉದ್ದಸ್ವರ, ಉಳಿದೆರಡು ಪುರುಷ ಪದಗಳ ಉದ್ದಸ್ವರದ ಹಾಗೆ, ಗಿಡ್ಡ ಸ್ವರವಾಗಿ ಬದಲಾಗುತ್ತದೆ (ಆನ್–ಎನಗೆ, ನೀನ್–ನಿನಗೆ, ತಾನ್–ತನಗೆ, ಇತ್ಯಾದಿ).

ಇದಲ್ಲದೆ, ಅವನ್, ಅವರ್ ಮೊದಲಾದವುಗಳಿಗಿರುವಂತಹ ಒಳರಚನೆ ತಾನ್ ಎಂಬುದಕ್ಕಿಲ್ಲ (೪.೫ ನೋಡಿ).

ಸಂಸ್ಕೃತದಲ್ಲಿ ಅಹಂ ಮತ್ತು ತ್ವಂ ಎಂಬುದಾಗಿ ಎರಡು ಪುರುಷಪದಗಳು ಮಾತ್ರ ಇವೆ. ಹಳೆಗನ್ನಡದ ತಾನ್ ಎಂಬುದಕ್ಕೆ ಪ್ರತಿಯಾಗಿ ಕೆಲವು ಸಂದರ್ಭಗಳಲ್ಲಿ ಸಂಸ್ಕೃತದ ಆತ್ಮನ್ ಇಲ್ಲವೇ ಸ್ವ ಪದವನ್ನು ಬಳಸಲು ಸಾಧ್ಯವಿದೆಯಾದರೂ, ಅವು ತಾನ್ ಎಂಬುದರ ಹಾಗೆ ಪುರುಷಪದಗಳಲ್ಲ. ಸ್ವ ಎಂಬ ಪದ ಸಂಸ್ಕೃತದ ಸರ್ವನಾಮವೆಂಬ ಪದವರ್ಗದಲ್ಲಿ ಸೇರುವುದೇನೋ ನಿಜ, ಆದರೆ ಈ ಪದವೂ ಸಂಸ್ಕೃತದ ಪುರುಷಪದಗಳಿಗಿಂತ ಭಿನ್ನವಾಗಿದೆ.

### ೪.೫ ಸರ್ವಪದಗಳು

ಮೇಲೆ ಸೂಚಿಸಿದ ಹಾಗೆ, ಸರ್ವಪದಗಳಲ್ಲಿ ಸಾಮಾನ್ಯವಾಗಿ ಎರಡು ಅಂಗಗಳಿದ್ದು, ಅವುಗಳಲ್ಲಿ ಒಂದು ಆ ಪದದ ಕೆಲಸವೇನೆಂಬುದನ್ನೂ ಇನ್ನೊಂದು ಅದರ ವ್ಯಾಪ್ತಿಯೇನೆಂಬುದನ್ನೂ ತಿಳಿಸುತ್ತವೆ. ಉದಾಹರಣೆಗಾಗಿ, ಇವನ್ ಎಂಬ ಸರ್ವಪದದಲ್ಲಿ ಮೊದಲನೆಯ ಅಂಗವಾದ ಇ ಎಂಬುದು ಆ ಪದಕ್ಕೆ 'ಸೂಚಿಸುತ್ತಿರುವ ವ್ಯಕ್ತಿ ಆಡುಗನ ಹತ್ತಿರ ಇರುವವನು' ಎಂಬುದಾಗಿ ಆ ವ್ಯಕ್ತಿಯ ಜಾಗವನ್ನು ನಿರ್ದೇಶಿಸುವಂತಹ ಕೆಲಸವಿದೆಯೆಂದು ತಿಳಿಸುತ್ತದೆ, ಮತ್ತು ಎರಡನೆಯ ಅಂಗವಾದ ಅನ್ ಎಂಬುದು ಆ ಪದಕ್ಕೆ ಗಂಡಸರನ್ನು ಸೂಚಿಸುವಷ್ಟಕ್ಕೇ ಸೀಮಿತವಾಗಿರುವಂತಹ ವ್ಯಾಪ್ತಿಯಿದೆಯೆಂದು ತಿಳಿಸುತ್ತದೆ.

ಈ ಕಾರಣಕ್ಕಾಗಿ, ಒಂದು ಭಾಷೆಯಲ್ಲಿ ಬಳಕೆಯಾಗುವ ಸರ್ವಪದಗಳನ್ನೆಲ್ಲ ಒಂದು ಕೋಷ್ಟಕದಲ್ಲಿ ಇರಿಸಿ ಹೇಳಲು ಸಾಧ್ಯವಾಗುತ್ತದೆ. ಈ ಕೋಷ್ಟಕದ ಕಾಲಂಗಳು ಆ ಪದಗಳ ಕೆಲಸವನ್ನು ಮತ್ತು ಸಾಲುಗಳು ಅವುಗಳ ವ್ಯಾಪ್ತಿಯನ್ನು ಸೂಚಿಸುತ್ತವೆ. ಉದಾಹರಣೆಗಾಗಿ, ಹಳೆಗನ್ನಡದ ಸರ್ವಪದಗಳನ್ನು ಕೆಳಗೆ ಕೊಟ್ಟಿರುವ ಕೋಷ್ಟಕದಲ್ಲಿರಿಸಿ ಹೇಳಲು ಸಾಧ್ಯವಿದೆ.

| | ನಿರ್ದೇಶಕ ಪದಗಳು | | | ಅನಿಶ್ಚಿತ ಪದಗಳು |
|---|---|---|---|---|
| | ದೂರದವು | ಹತ್ತಿರದವು | ನಡುವಿನವು | |
| **ನಾಮಪದಗಳು** | | | | |
| | ಅವನ್ | ಇವನ್ | ಉವನ್ | ಆವನ್ |
| | ಅವಳ್ | ಇವಳ್ | ಉವಳ್ | ಆವಳ್ |
| | ಅವರ್ | ಇವರ್ | ಉವರ್ | ಆವರ್ |
| | ಅದು | ಇದು | ಉದು | ಆವುದು |
| | ಅವು | ಇವು | ಉವು | ಆವುವು |
| | ಆತನ್ | ಈತನ್ | ಊತನ್ | --- |
| | ಆಕೆ | ಈಕೆ | ಊಕೆ | --- |
| **ಗುಣಪದಗಳು** | | | | |
| | ಆ | ಈ | ಊ | ಆವ, ಏ |
| | ಅನಿತು | ಇನಿತು | ಉನಿತು | ಎನಿತು |
| **ಕ್ರಿಯಾಗುಣಪದಗಳು** | | | | |
| | ಅಲ್ಲಿ | ಇಲ್ಲಿ | ಉಲ್ಲಿ | ಎಲ್ಲಿ |
| | ಅಂದು | ಇಂದು | ಉಂದು | ಎಂದು |
| | ಅಂತು | ಇಂತು | ಉಂತು | ಎಂತು |
| | ಅನ್ನೆ | ಇನ್ನೆ | ಉನ್ನೆ | ಎನ್ನೆ |
| | ಅತ್ತ | ಇತ್ತ | ಉತ್ತ | ಎತ್ತ |

ಹಳೆಗನ್ನಡದ ಏನ್ ಮತ್ತು ಏಕೆ ಎಂಬವುಗಳೂ ಈ ಪಟ್ಟಿಗೆ ಸೇರಬೇಕಾಗಿದ್ದರೂ, ಅವುಗಳಿಗೆ ಸಮನಾಗಿರುವ ನಿರ್ದೇಶಕಪದಗಳಿಲ್ಲ. ಇದೇ ರೀತಿಯಲ್ಲಿ ಹಳೆಗನ್ನಡದ ಏವನ್, ಏವಳ್, ಏವರ್, ಏವುದು ಮತ್ತು ಏವುವು ಎಂಬ ಪದರೂಪಗಳಲ್ಲಿ ಕ್ರಿಯಾಪದವರ್ಗಕ್ಕೆ ಸೇರಬಲ್ಲ ಅನಿಶ್ಚಿತ ಸರ್ವಪದವೊಂದರ ಬಳಕೆಯಿರುವ ಹಾಗೆ ಕಾಣಿಸುತ್ತದೆ. ಆದರೆ, ಇದಕ್ಕೆ ಸಮನಾದ ನಿರ್ದೇಶಕ ಪದಗಳೂ ಹಳೆಗನ್ನಡದಲ್ಲಿಲ್ಲ.

ಆವನ್, ಆವಳ್, ಆವುದು, ಎಲ್ಲಿ, ಎಂತು ಮೊದಲಾದುವನ್ನು ಸಾಮಾನ್ಯವಾಗಿ 'ಪ್ರಶ್ನಾರ್ಥಕ' ಪದಗಳೆಂದು ಕರೆಯಲಾಗುತ್ತದೆ. ಆದರೆ, ಅವನ್ನಿಲ್ಲಿ ಅನಿಶ್ಚಿತ ಪದಗಳೆಂದು ಕರೆಯಲಾಗಿದೆ. ಇದಕ್ಕೆ ಕಾರಣವೇನೆಂಬುದನ್ನು, ಮತ್ತು ಪ್ರಶ್ನೆಯನ್ನು ಸೂಚಿಸುವುದಕ್ಕಿಂತಲೂ ಅನಿಶ್ಚಿತತೆಯನ್ನು ಸೂಚಿಸುವುದೇ ಈ ಪದಗಳ ನಿಜವಾದ ಕೆಲಸ ಎಂಬುದನ್ನು (ಭಟ್ ೨೦೦೩, ೨೦೦೪)ರಲ್ಲಿ ನಾನು ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದೇನೆ.

### ೪.೫.೧ ಸರ್ವನಾಮಗಳ ಪಟ್ಟಿ

ಸಂಸ್ಕೃತ ವ್ಯಾಕರಣಗಳಲ್ಲಿ 'ಸರ್ವಾದಿ' ಎಂಬ ಪಟ್ಟಿಯಲ್ಲಿ ಸರ್ವ, ವಿಶ್ವ, ಏಕ, ತದ್, ಏತದ್, ಇದಂ, ಕಿಂ, ಅನ್ಯ, ಇತರ, ಕತರ, ಯತರ, ಉಭಯ, ಅಲ್ಪ ಮೊದಲಾದ ಮೂವತ್ತೈದು ಪದಗಳನ್ನು ಒಟ್ಟಿಗೆ ಸೇರಿಸಿ ಹೇಳಲಾಗಿದ್ದು, ಅವನ್ನು ಸರ್ವನಾಮಗಳೆಂದು ಕರೆಯಲಾಗಿದೆ.

ಆದರೆ ಇದರಲ್ಲಿ ಬರುವ ಪದಗಳಲ್ಲಿ ಹೆಚ್ಚಿನವೂ, ಮೇಲೆ ಕೋಷ್ಟಕದಲ್ಲಿ ಕೊಟ್ಟಿರುವ ಪದಗಳ ಹಾಗೆ, ಒಂದು ನಿಶ್ಚಿತವಾದ ಒಳರಚನೆಯಿರುವವುಗಳಲ್ಲ. ಅವುಗಳೊಂದಿಗೆ ಬರುವ ವಿಭಕ್ತಿ ಪ್ರತ್ಯಯಗಳು ಬೇರೆ ನಾಮಪದಗಳೊಂದಿಗೆ ಬರುವ ವಿಭಕ್ತಿ ಪ್ರತ್ಯಯಗಳಿಂದ ಭಿನ್ನವಾಗಿವೆಯೆಂಬುದೇ ಈ ಪಟ್ಟಿಗೆ ಆಧಾರ.

ಉದಾಹರಣೆಗಾಗಿ, ಸಂಸ್ಕೃತದಲ್ಲಿ ಸರ್ವ 'ಎಲ್ಲ' ಸರ್ವನಾಮ ಮಾತ್ರವಲ್ಲದೆ ಅದೇ ರೂಪದ ಸರ್ವ 'ಶಿವ' ನಾಮಪದವೂ ಇದೆ. ಈ ಎರಡು ಪದಗಳೊಂದಿಗೆ ಬರುವ ವಿಭಕ್ತಿ ಪ್ರತ್ಯಯಗಳ ರೂಪದಲ್ಲಿ ವ್ಯತ್ಯಾಸಗಳಿವೆ.

| | ಎಲ್ಲ | ಶಿವ |
|---|---|---|
| ಪ್ರಥಮಾ–ಬಹುವಚನ | ಸರ್ವೇ | ಸರ್ವಾಃ |
| ಚತುರ್ಥೀ–ಏಕವಚನ | ಸರ್ವಸ್ಮೈ | ಸರ್ವಾಯ |
| ಪಂಚಮೀ–ಏಕವಚನ | ಸರ್ವಸ್ಮಾತ್ | ಸರ್ವಾತ್ |
| ಸಪ್ತಮೀ–ಏಕವಚನ | ಸರ್ವಸ್ಮಿನ್ | ಸರ್ವೇ |
| ಷಷ್ಠೀ–ಬಹುವಚನ | ಸರ್ವೇಷಾಂ | ಸರ್ವಾಣಾಂ |

ಸರ್ವ ಪಟ್ಟಿಯಲ್ಲಿ ಬಂದಿರುವ ಇತರ ಪದಗಳಿಗೂ ಮೇಲೆ ಕೊಟ್ಟಿರುವ ಸರ್ವ 'ಎಲ್ಲ' ಪದದ ಹಾಗೆಯೇ ಇರುವಂತಹ ವಿಭಕ್ತಿ ರೂಪಗಳಿವೆ.

ಕೇಶಿರಾಜನು ಹಳೆಗನ್ನಡದ ಅದು, ಇದು, ಉದು, ಆವುದು, ಎಲ್ಲದು, ಪೆಱತು, ಪೆಱದು, ಏನ್ ಮೊದಲಾದವುಗಳನ್ನು ಸರ್ವನಾಮಗಳೆಂದು ಕರೆದಿದ್ದಾನೆ (ಸೂ. ೮೮). ಇವುಗಳಿಗೆ ಸಮಾನವಾದ ಪದಗಳು ಸಂಸ್ಕೃತದ ಸರ್ವಾದಿ ಪಟ್ಟಿಯಲ್ಲಿವೆ ಎಂಬುದನ್ನು ಬಿಟ್ಟರೆ, ಹಳೆಗನ್ನಡದ ಈ ಪಟ್ಟಿಗೆ ಏನು ಆಧಾರ ಎಂಬುದು ಸ್ಪಷ್ಟವಾಗುವುದಿಲ್ಲ.

ಸಂಸ್ಕೃತದ ಸರ್ವಾದಿ ಪಟ್ಟಿಯಲ್ಲಿ ಪುರುಷವಾಚಕ (ಯುಷ್ಮದ್, ಅಸ್ಮದ್), ಸಂಖ್ಯಾವಾಚಕ (ಉಭಯ, ಏಕ, ದ್ವಿ) ಮತ್ತು ದಿಗ್ವಾಚಕ (ಪೂರ್ವ, ಅವರ, ಉತ್ತರ, ದಕ್ಷಿಣ) ಪದಗಳೂ ಸೇರಿವೆ. ಇವೆಲ್ಲವೂ, ಮೇಲೆ ಸೂಚಿಸಿದ ಹಾಗೆ, ವಿಭಕ್ತಿ ರೂಪದಲ್ಲಿ ಇತರ ನಾಮಪದಗಳಿಂದ ಭಿನ್ನವಾಗಿವೆಯೆಂಬುದೇ ಅವನ್ನೆಲ್ಲ ಸರ್ವಾದಿ ಎಂಬ ಪಟ್ಟಿಯಲ್ಲಿರಿಸಿ ಹೇಳಲು ಆಧಾರ.

ಅದರೆ, ಹಳೆಗನ್ನಡದಲ್ಲಿ ಮೇಲೆ ಕೊಟ್ಟ ಕೇಶಿರಾಜನ ಪಟ್ಟಿಗೆ ಅಂತಹ ಆಧಾರವೇನೂ ಇರುವ ಹಾಗೆ ಕಾಣಿಸುವುದಿಲ್ಲ. ಅವುಗಳಲ್ಲಿ ಹೆಚ್ಚಿನವನ್ನೂ ಮೇಲೆ (೪.೫)ರಲ್ಲಿ ಕೊಟ್ಟಿರುವ ಸರ್ವಪದಗಳ ಕೋಷ್ಟಕದಲ್ಲಿ ಇರಿಸಲು ಸಾಧ್ಯವಿದೆ, ಆದರೆ ಎಲ್ಲದು, ಪೆಱತು ಮತ್ತು ಪೆಱದು ಎಂಬವುಗಳು ಅದರಲ್ಲಿ ಸೇರಲಾರವು.

## ೪.೫.೨ ಸರ್ವನಾಮಗಳು ಮತ್ತು ಆಖ್ಯಾತ ಪ್ರತ್ಯಯಗಳು

(೪.೫)ರ ಕೋಷ್ಟಕದಲ್ಲಿ ಬಂದಿರುವ ಅವನ್, ಅವಳ್, ಆವನ್, ಆವಳ್ ಮೊದಲಾದುವನ್ನು ಕೇಶಿರಾಜನು ಅದು ಮತ್ತು ಆವುದು ಎಂಬವುಗಳಿಂದ ಸಾಧಿಸಿರುವುದು (ಸೂ. ೧೬೧–೨, ೧೬೫) ಸಂಸ್ಕೃತ ವ್ಯಾಕರಣ ನಿಯಮವನ್ನು ಹಳೆಗನ್ನಡಕ್ಕೆ ಅಳವಡಿಸಲು ನಡೆಸಿರುವ ಇನ್ನೊಂದು ಪ್ರಯತ್ನದ ಫಲ. ಆದರೆ ಇದು ಹಳೆಗನ್ನಡಕ್ಕೆ ಉಚಿತವಲ್ಲ.

ಯಾಕೆಂದರೆ, ಸಂಸ್ಕೃತದಲ್ಲಿ ಇಂತಹ ಪದಗಳ ನಡುವಿರುವ ಲಿಂಗಭೇದ ವಿಭಕ್ತಿ ಪ್ರತ್ಯಯಗಳ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತದೆ; ಆದರೆ, ಹಳೆಗನ್ನಡದಲ್ಲಿ ಅದು ಈ ಸರ್ವನಾಮಗಳ ಎರಡನೆಯ ಅಂಗದಲ್ಲೇನೇ ಕಾಣಿಸಿಕೊಳ್ಳುತ್ತದೆ. ಹಾಗಾಗಿ, ಮೇಲೆ ಕೋಷ್ಟಕದಲ್ಲಿ ಸೂಚಿಸಿದ ಹಾಗೆ, ಅವನ್, ಅವಳ್, ಇವನ್, ಇವಳ್ ಮೊದಲಾದುವನ್ನು ಅದು, ಇದು ಮೊದಲಾದವುಗಳಿಗಿಂತ ಭಿನ್ನವಾದ ಸರ್ವನಾಮ (ಸರ್ವಪದ)ಗಳೆಂದು ಪರಿಗಣಿಸುವ ಅವಶ್ಯಕತೆಯಿದೆ.

ಹಳೆಗನ್ನಡದ ವೈಯಾಕರಣಿಗಳು ಈ ಸರ್ವನಾಮಗಳನ್ನು ಸಾಧಿಸುವುದಕ್ಕಾಗಿ ಬಳಸಿದ ವಿಧಾನಕ್ಕೂ, ಕ್ರಿಯಾರೂಪಗಳ ಕೊನೆಯಲ್ಲಿ ಘಟಕಗಳನ್ನು ಸೂಚಿಸುವುದಕ್ಕಾಗಿ ಬರುವ ಅಮ್, ಅಳ್, ಉದು ಮೊದಲಾದ ಆಖ್ಯಾತ ಪ್ರತ್ಯಯಗಳನ್ನು ಸಾಧಿಸುವುದಕ್ಕಾಗಿ ಬಳಸಿದ ವಿಧಾನಕ್ಕೂ ನಡುವೆ ಒಂದು ವಿಚಿತ್ರವಾದ ವ್ಯತ್ಯಾಸವಿದೆ.

ಮೇಲೆ ಸೂಚಿಸಿದ ಹಾಗೆ, ಸರ್ವನಾಮಗಳಲ್ಲಿ ನಪುಂಸಕ ಲಿಂಗದ ಅದು ಎಂಬುದನ್ನು ಮೂಲವಾಗಿಟ್ಟುಕೊಂಡು, ಅದರಿಂದ ಅವನ್, ಅವಳ್, ಆತ, ಆಕೆ ಮೊದಲಾದುವನ್ನು ಸಾಧಿಸಲಾಗಿದೆ (ಕೇಶಿರಾಜ, ಸೂ. ೧೬೫); ಆದರೆ, ಘಟಕಗಳನ್ನು ಸೂಚಿಸುವ ಆಖ್ಯಾತ ಪ್ರತ್ಯಯಗಳಲ್ಲಿ ಪುಲ್ಲಿಂಗದ ಅಮ್ ಎಂಬುದನ್ನು ಮೂಲವಾಗಿಟ್ಟುಕೊಂಡು, ಅದರಿಂದ ಅಳ್, ಉದು (ಅದು) ಮೊದಲಾದುವನ್ನು ಸಾಧಿಸಲಾಗಿದೆ (ಕೇಶಿರಾಜ, ಸೂ. ೨೨೮, ೨೩೬–೭, ಮತ್ತು ಇದೇ ಪುಸ್ತಕದ ೯.೩ ನೋಡಿ).

ಎರಡು ಕಡೆಯಲ್ಲೂ ಒಂದೇ ಲಿಂಗದ (ಪುಲ್ಲಿಂಗದ ಇಲ್ಲವೇ ನಪುಂಸಕ ಲಿಂಗದ) ರೂಪವನ್ನೇ ಮೂಲವಾಗಿ ಇರಿಸಿಕೊಳ್ಳಬಹುದಾಗಿತ್ತಲ್ಲವೇ ಎಂದು ಯಾರಾದರೂ ಕೇಳುವುದಿದ್ದಲ್ಲಿ, ಅದಕ್ಕೆ ಉತ್ತರ ಸಂಸ್ಕೃತ ವ್ಯಾಕರಣದಲ್ಲಿದೆ! ಸಂಸ್ಕೃತದ ಕ್ರಿಯಾರೂಪಗಳಲ್ಲಿ ಲಿಂಗಭೇದ ಸೂಚಿತವಾಗುವುದಿಲ್ಲ. 'ಹೋಗುತ್ತಾನೆ', 'ಹೋಗುತ್ತಾಳೆ', ಮತ್ತು 'ಹೋಗುತ್ತದೆ' ಎಂಬ ಮೂರು ಅರ್ಥಗಳಲ್ಲೂ ಗಚ್ಛತಿ ಎಂಬ ಒಂದೇ ಕ್ರಿಯಾರೂಪ ಆ ಭಾಷೆಯಲ್ಲಿ ಬಳಕೆಯಾಗುತ್ತದೆ.

ಆದರೆ, ಸಾಮಾನ್ಯವಾಗಿ ಸಂಸ್ಕೃತದ ಪ್ರಥಮಪುರುಷ ಏಕವಚನದ ಕ್ರಿಯಾರೂಪಗಳನ್ನು ಕನ್ನಡದಲ್ಲಿ ಪ್ರಥಮಪುರುಷ ಪುಲ್ಲಿಂಗ ಏಕವಚನದ ಕ್ರಿಯಾರೂಪಗಳ ಮೂಲಕವೇ ಅನುವಾದಿಸುವುದು ರೂಡಿ (ಗಚ್ಛತಿ 'ಹೋಗುತ್ತಾನೆ'). ಅವನ್ನು ವಿಶಿಷ್ಟವಾದ ಸ್ತ್ರೀಲಿಂಗ ಇಲ್ಲವೇ ನಪುಂಸಕ ಲಿಂಗದ ಅರ್ಥ ಕೊಡುವ ನಾಮಪದಗಳೊಂದಿಗೆ ಬಳಸಿರುವಲ್ಲಿ ಮಾತ್ರ (ಸೀತಾ ಗಚ್ಛತಿ 'ಸೀತೆ ಹೋಗುತ್ತಾಳೆ', ಸಿಂಹಃ ಗಚ್ಛತಿ 'ಸಿಂಹ ಹೋಗುತ್ತದೆ') ಸ್ತ್ರೀಲಿಂಗ ಏಕವಚನ ಇಲ್ಲವೇ ನಪುಂಸಕ ಲಿಂಗ ಏಕವಚನ ರೂಪಗಳ ಮೂಲಕ ಅನುವಾದಿಸಲಾಗುತ್ತದೆ.

ಕೇಶಿರಾಜನು 'ಆಖ್ಯಾತ ವಿಭಕ್ತಿ' ಪ್ರತ್ಯಯಗಳನ್ನು ಹೆಸರಿಸುವಾಗ ಪುಲ್ಲಿಂಗದ ಅಮ್ ಪ್ರತ್ಯಯವನ್ನು ಮೂಲವಾಗಿ ಇಟ್ಟುಕೊಳ್ಳಲು ಇದೇ ಕಾರಣವಿರಬೇಕು.

ಇನ್ನು ಸಂಸ್ಕೃತ ವ್ಯಾಕರಣದಲ್ಲಿ 'ಅವನು', 'ಅವಳು' ಮತ್ತು 'ಅದು' ಎಂಬ ಈ ಮೂರು ಅರ್ಥಗಳನ್ನು ಕೊಡುವ ಸರ್ವನಾಮಗಳಿಗೆ ತತ್ ಎಂಬ ಒಂದೇ ಪದ ಮೂಲವಾಗಿದೆ; ಪುಲ್ಲಿಂಗದಲ್ಲಿ ಇದು ಸಃ ಎಂದಾಗುತ್ತದೆ, ಮತ್ತು ಸ್ತ್ರೀಲಿಂಗದಲ್ಲಿ ಸಾ ಎಂದಾಗುತ್ತದೆ. ಆದರೆ ಇದು ಪ್ರಥಮಾ ವಿಭಕ್ತಿಯಲ್ಲಿ ಮಾತ್ರ ಕಾಣಿಸುವ ವ್ಯತ್ಯಾಸ. ಇತರ ವಿಭಕ್ತಿಗಳಲ್ಲಿ ಪುಲ್ಲಿಂಗ ಸರ್ವನಾಮಕ್ಕೆ ತಮ್, ತೇನ, ತಸ್ಮೈ ಮೊದಲಾದ ರೂಪಗಳೂ, ಸ್ತ್ರೀಲಿಂಗ ಸರ್ವನಾಮಕ್ಕೆ ತಾಮ್, ತಯಾ, ತಸ್ಯೈ ಮೊದಲಾದ ರೂಪಗಳೂ ಇವೆ. ಹಾಗಾಗಿ, ಸಂಸ್ಕೃತ ವ್ಯಾಕರಣದಲ್ಲಿ ಇವಕ್ಕೆಲ್ಲ ತತ್ ಎಂಬುದನ್ನೇ ಮೂಲವಾಗಿ ಇರಿಸಿಕೊಳ್ಳಲಾಗಿದೆ.

ಈ ತತ್ ಎಂಬುದು ಸಂಸ್ಕೃತದಲ್ಲಿ ನಪುಂಸಕ ಏಕವಚನದ ಸರ್ವನಾಮವೂ ಆಗಿದೆಯಾದ

ಕಾರಣ, ಹಳೆಗನ್ನಡದಲ್ಲಿ ಅದಕ್ಕೆ ಸಮನಾಗಿರುವ ಅದು ಎಂಬುದನ್ನು ನಮ್ಮ ವೈಯಾಕರಣಿಗಳು ಹಳೆಗನ್ನಡದ ಪ್ರಥಮಪುರುಷ ಸರ್ವನಾಮಗಳಿಗೂ ಮೂಲ ಪದವಾಗಿ ಮಾಡಿಕೊಂಡಿದ್ದಾರೆ. ಆದರೆ, ಹಳೆಗನ್ನಡದಲ್ಲಿ ಅವನ್ ಮತ್ತು ಅವಳ್ ಎಂಬವು ಎಲ್ಲಾ ವಿಭಕ್ತಿಗಳಲ್ಲೂ ಬದಲಾಗದೆ ಹಾಗೆಯೇ ಉಳಿಯುತ್ತವೆ, ಸಂಸ್ಕೃತದ ಸಃ ಮತ್ತು ಸಾ ಎಂಬವುಗಳ ಹಾಗೆ ಬದಲಾಗುವುದಿಲ್ಲ.

ಈ ವಿಧಾನವನ್ನೇ ಮುಂದುವರಿಸಿ, ಕೇಶಿರಾಜನು ಎಳೆಯಂ, ಎಳೆಯರ್, ಎಳೆಯಳ್ ಮೊದಲಾದ ಪುಲ್ಲಿಂಗ ಮತ್ತು ಸ್ತ್ರೀಲಿಂಗಗಳಲ್ಲಿ ಬರುವ ಗುಣಪದಗಳ ರೂಪವನ್ನು ಎಳದು ಎಂಬಂತಹ ನಪುಂಸಕ ಲಿಂಗದಲ್ಲಿ ಬರುವ ಗುಣಪದಗಳ ರೂಪದಿಂದ ಸಾಧಿಸುತ್ತಾನೆ (ಸೂ. ೧೬೪).

ಹಳೆಗನ್ನಡ ವೈಯಾಕರಣಿಗಳ ಮೇಲೆ ಸಂಸ್ಕೃತ ವ್ಯಾಕರಣಕ್ಕೆ ಎಂತಹ ಹಿಡಿತವಿತ್ತು ಎಂಬುದನ್ನು ಅವರ ಈ ವಿಚಿತ್ರವಾದ ರೂಪಸಾಧನೆ ಬಹಳ ಸ್ಪಷ್ಟವಾಗಿ ತೋರಿಸಿಕೊಡುತ್ತದೆ.

### ೪.೫.೩ ಕೆಲಸದಲ್ಲಿ ವ್ಯತ್ಯಾಸ

ಮೇಲೆ ಕೋಷ್ಟಕದಲ್ಲಿ ಕಾಣಿಸಿದ ಹಾಗೆ, ಹಳೆಗನ್ನಡದಲ್ಲಿ ನಿರ್ದೇಶಿಸುವುದು ಮತ್ತು ಅನಿಶ್ಚಿತತೆಯನ್ನು ಸೂಚಿಸುವುದು ಎಂಬುದಾಗಿ ಎರಡು ಕೆಲಸಗಳನ್ನು ಮಾಡಬಲ್ಲ ಸರ್ವಪದಗಳು ಮಾತ್ರ ಬಳಕೆಯಲ್ಲಿವೆ; ಆದರೆ ಸಂಸ್ಕೃತದಲ್ಲಿ ನಿರ್ದೇಶಿಸುವುದು, ಅನಿಶ್ಚಿತತೆಯನ್ನು ಸೂಚಿಸುವುದು ಮತ್ತು ಸಂಬಂಧಿಸುವುದು ಎಂಬುದಾಗಿ ಮೂರು ಕೆಲಸಗಳನ್ನು ಮಾಡಬಲ್ಲ ಸರ್ವಪದಗಳು ಬಳಕೆಯಲ್ಲಿವೆ. ಹಳೆಗನ್ನಡದಲ್ಲಿ ಅನಿಶ್ಚಿತತೆಯನ್ನು ಸೂಚಿಸುವ ಸರ್ವಪದಗಳನ್ನೇ ಸಂಬಂಧಿಸುವ ಕೆಲಸದಲ್ಲೂ ಬಳಸಲಾಗುತ್ತದೆ.

ಉದಾಹರಣೆಗಾಗಿ, ಕೆಳಗೆ (೧೭ಕ–ಖ)ಗಳಲ್ಲಿ ಕೊಟ್ಟಿರುವ ವಾಕ್ಯಗಳನ್ನು ಗಮನಿಸಬಹುದು.

(೧೭ಕ) ಯತ್ರ ತ್ವಂ ಅವಸಃ ಸ ದೇಶೋ ರಮಣೀಯಃ
‘ನೀನು ಯಾವ ದೇಶದಲ್ಲಿದ್ದೆಯೋ ಆ ದೇಶ ರಮಣೀಯವಾದುದು’

(೧೭ಖ) ತ್ವಂ ಕುತ್ರ ಗಚ್ಛಸಿ?
‘ನೀನು ಎಲ್ಲಿಗೆ (ಯಾವ ಜಾಗಕ್ಕೆ) ಹೋಗುತ್ತೀ?’

(೧೭ಕ)ದಲ್ಲಿ ‘ನೀನು ಇದ್ದ’ ದೇಶಕ್ಕೂ ಮತ್ತು ‘ರಮಣೀಯವಾದ ದೇಶ’ಕ್ಕೂ ನಡುವೆ ಸಂಬಂಧವಿದೆ ಎಂಬುದನ್ನು (ಅವೆರಡೂ ಒಂದೇ ಎಂಬುದನ್ನು) ಸೂಚಿಸುವುದಕ್ಕಾಗಿ ಸಂಸ್ಕೃತದಲ್ಲಿ ಯತ್ರ ಪದದ ಬಳಕೆಯಾಗಿದೆ; ಮತ್ತು (೧೭ಖ)ದಲ್ಲಿ ಕೇಳುಗನು ಹೋಗುವ ಜಾಗದ ಕುರಿತು ಆಡುಗನಿಗಿರುವ ಅನಿಶ್ಚಿತತೆಯನ್ನು ಸೂಚಿಸುವುದಕ್ಕಾಗಿ ಕುತ್ರ ಪದದ ಬಳಕೆಯಾಗಿದೆ.

ಆದರೆ, ಈ ವಾಕ್ಯಗಳ ಕೆಳಗೆ ಕೊಟ್ಟಿರುವ ಅವುಗಳ ಹೊಸಗನ್ನಡ ಅನುವಾದಗಳಲ್ಲಿ ಈ ಎರಡು ಸಂದರ್ಭಗಳಲ್ಲೂ ಅನಿಶ್ಚಿತ ಸರ್ವಪದವೇ ಅದರ ಎರಡು ರೂಪಗಳಲ್ಲಿ (ಯಾವ ಮತ್ತು ಎಲ್ಲಿ ಎಂಬುದಾಗಿ) ಬಳಕೆಯಾಗಿದೆ.

ಹಳೆಗನ್ನಡದಲ್ಲೂ ಸಂಬಂಧ ಮತ್ತು ಅನಿಶ್ಚಿತತೆಗಳೆಂಬ ಎರಡು ಅರ್ಥಗಳನ್ನು ಸೂಚಿಸುವುದಕ್ಕಾಗಿ ಒಂದೇ ಸರ್ವಪದದ ಬಳಕೆಯಾಗುತ್ತದೆ ಎಂಬುದನ್ನು ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯಗಳಲ್ಲಿ ಕಾಣಬಹುದು.

(೧೮ಕ) ಈ ಧರಣಿಯಂ ರಸಾತಲದಿಂದೆತ್ತಿದನಾವನ್ ಆತನೆ ದಲಂ ತಕ್ಕಂ
'ಈ ಭೂಮಿಯನ್ನು ಯಾವನು ಪಾತಾಳದಿಂದ ಎತ್ತಿದ್ದಾನೋ ಅವನೇ ನಿಜಕ್ಕೂ (ಅಗ್ರಪೂಜೆಗೆ) ಅರ್ಹನು'

(೧೮ಖ) ಎನ್ನನಾವನ್ ಎಚ್ಚಂ ಪೇೞಿಂ
'ನನಗೆ ಯಾವನು ಹೊಡೆದನು, ಹೇಳಿ'

(೧೯ಕ) ಅದೆಂತು ಹರಿ ನರನಂ ಗೆಲಿಪಂ ಅಂತೆ ನೀಮುಂ ಗೆಲ್ಲಂಗೊಳ್ಳಿಂ (೧೨.೯೧)
'ಕೃಷ್ಣನು ಅರ್ಜುನನನ್ನು ಹೇಗೆ ಗೆಲಿಸುತ್ತಾನೋ ಹಾಗೆಯೇ ನೀವೂ ಗೆದ್ದುಕೊಳ್ಳಿರಿ'

(೧೯ಖ) ನಿನ್ನ ಬಿಸುಟೆಂತಿರ್ಪೆಂ (೨.೨೫)
'ನಿನ್ನ ಬಿಟ್ಟು ಹೇಗಿರಲಿ?

ಆವನ್ ಎಂಬುದನ್ನು (೧೮ಕ)ದಲ್ಲಿ ಸಂಬಂಧಿಸುವ ಅರ್ಥದಲ್ಲಿ ಮತ್ತು (೧೮ಖ)ದಲ್ಲಿ ಅನಿಶ್ಚಿತಾರ್ಥದಲ್ಲಿ ಬಳಸಲಾಗಿದೆ, ಮತ್ತು ಇದೇ ರೀತಿಯಲ್ಲಿ ಎಂತು ಎಂಬುದನ್ನು (೧೯ಕ) ಮತ್ತು (೧೯ಖ)ಗಳಲ್ಲಿ ಸಂಬಂಧಾರ್ಥ ಮತ್ತು ಅನಿಶ್ಚಿತಾರ್ಥಗಳಲ್ಲಿ ಬಳಸಲಾಗಿದೆ.

### ೪.೫.೪ ನಿರ್ದೇಶಕಗಳಲ್ಲಿ ವ್ಯತ್ಯಾಸ

ಮೇಲೆ ಸರ್ವಪದಗಳ ಕೋಷ್ಟಕದಲ್ಲಿ ಕಾಣಿಸಿದ ಹಾಗೆ, ಹಳೆಗನ್ನಡದಲ್ಲಿ (ಕ) ಆಡುಗನ ಹತ್ತಿರ (ಈ, ಇವನ್, ಈಕೆ, ಇಲ್ಲಿ, ಇಂದು, ಇತ್ಯಾದಿ), (ಖ) ಆಡುಗನಿಂದ ದೂರ (ಆ, ಅವನ್, ಆಕೆ, ಅಲ್ಲಿ, ಅಂದು ಇತ್ಯಾದಿ), ಮತ್ತು (ಗ) ಈ ಎರಡು ಜಾಗಗಳ ನಡುವೆ (ಊ, ಉವನ್, ಊಕೆ, ಉಂದು, ಇತ್ಯಾದಿ) ಎಂಬುದಾಗಿ ನಿರ್ದೇಶಕ ಪದಗಳಲ್ಲಿ ಮೂರು ಜಾಗಗಳನ್ನು ಸೂಚಿಸುವ ವ್ಯವಸ್ಥೆಯಿದೆ.

(೨೦ಕ) ಕುಲಮನಿಂತು ಪಿಕ್ಕದಿರಿಂ
'(ಕರ್ಣನ) ಕುಲವನ್ನು ಹೀಗೆ ಬಿಡಿಸಿ ನೋಡಬೇಡಿ'

(೨೦ಖ) ಅಂತು ಪಿರಿದೋಲಗಂಗೊಟ್ಟಿರ್ಪನ್ನೆಗಂ
'ಹಾಗೆ ದೊಡ್ಡ ಓಲಗವನ್ನು ಕೊಟ್ಟಿದ್ದಾಗ'

(೨೦ಗ) ಅಲ್ಲದೆ ಉಂತು ತಲೆಯುರ್ಚುಗುಮೇ ರಣರಂಗ ಭೂಮಿಯೊಳ್
'ಅಲ್ಲ(ದಿದ್ದರೆ) ಹಾಗೆ/ಹೀಗೆ ರಣರಂಗದಲ್ಲಿ ತಲೆತಪ್ಪಿಸಿಕೊಳ್ಳುತ್ತಿದ್ದನೇ'

ಇವುಗಳಲ್ಲಿ ಮೊದಲಿನ ಎರಡು ರೀತಿಯವು ಮಾತ್ರ ಹೊಸಗನ್ನಡದಲ್ಲಿ ಉಳಿದುಕೊಂಡಿವೆ. ಹಾಗಾಗಿ, ಉಕಾರದಲ್ಲಿ ಸುರುವಾಗುವ ಮೂರನೇ ರೀತಿಯ ಸರ್ವಪದಗಳನ್ನು ಹೊಸಗನ್ನಡದಲ್ಲಿ ಅನುವಾದಿಸುವುದು ಕಷ್ಟ (೨೦ಗ ನೋಡಿ).

ಸಂಸ್ಕೃತದಲ್ಲಿ ನಿರ್ದೇಶಕ ಪದಗಳು ಸೂಚಿಸುವ ವ್ಯತ್ಯಾಸ ಇದಕ್ಕಿಂತ ಭಿನ್ನವಾಗಿದೆ. ಅವು ಮೊದಲಿಗೆ (ಕ) ಆಡುಗನ ಹತ್ತಿರ (ಏಷಃ 'ಇವನು', ಏಷಾ 'ಇವಳು', ಏತತ್ 'ಇದು' ಇತ್ಯಾದಿ), ಮತ್ತು (ಖ) ಆಡುಗನಿಂದ ದೂರ (ಅಸೌ 'ಅವನು, ಅವಳು', ಅದಃ 'ಅದು' ಇತ್ಯಾದಿ) ಎಂಬ ವ್ಯತ್ಯಾಸದೊಂದಿಗೆ (ಕ) ಎದುರಿಗೆ ಇರುವವರು (ಅಯಂ 'ಇವನು', ಇಯಂ 'ಇವಳು', ಇದಂ 'ಇದು' ಇತ್ಯಾದಿ), ಮತ್ತು (ಖ) ಎದುರಿಗೆ ಇಲ್ಲದವರು (ಸಃ 'ಅವನು', ಸಾ 'ಅವಳು', ತತ್

'ಅದು', ಇತ್ಯಾದಿ) ಎಂಬ ಇನ್ನೊಂದು ವ್ಯತ್ಯಾಸವನ್ನು ಸೇರಿಸಿ ಸೂಚಿಸಬಲ್ಲುವಾಗಿದ್ದುವು. ಆದರೆ, ಅನಂತರದ ಸಂಸ್ಕೃತದಲ್ಲಿ ಎರಡನೆಯ (ಕ–ಖ) ವ್ಯತ್ಯಾಸ ಇಲ್ಲವಾಗಿದೆ.

### ೪.೫.೫ ಸರ್ವಪದಗಳಲ್ಲಿ ಪದವರ್ಗಗಳು

ಸಂಸ್ಕೃತದ ಸರ್ವಪದಗಳನ್ನೆಲ್ಲ ಒಂದೇ ಪದವರ್ಗದಲ್ಲಿ (ನಾಮಪದವರ್ಗದಲ್ಲಿ) ಸೇರಿಸಿ ಹೇಳಲು ಸಾಧ್ಯವಿದೆ; ಆದರೆ, ಹಳೆಗನ್ನಡದ ಸರ್ವಪದಗಳನ್ನು ಈ ರೀತಿ ಒಂದೇ ಪದವರ್ಗದಲ್ಲಿ ಸೇರಿಸಿ ಹೇಳಲು ಸಾಧ್ಯವಾಗದು. ಅವುಗಳಲ್ಲಿ ಅವನ್, ಇದು, ಇವಳ್, ಮೊದಲಾದವು ನಾಮಪದವರ್ಗಕ್ಕೆ ಸೇರುತ್ತವೆಯಾದರೆ, ಆವ, ಈ, ಇತ್ತ, ಎಲ್ಲಿ ಮೊದಲಾದವು ಗುಣಪದವರ್ಗಕ್ಕೆ ಸೇರುತ್ತವೆ.

ಗುಣಪದವರ್ಗದಲ್ಲೂ ನಾಮಪದದೊಂದಿಗೆ ಬರುವವು ಮತ್ತು ಕ್ರಿಯಾಪದದೊಂದಿಗೆ ಬರುವವು ಎಂಬುದಾಗಿ ಎರಡು ಉಪವರ್ಗಗಳನ್ನು ಮಾಡಲು ಸಾಧ್ಯವಿದ್ದು, ಅವೆರಡಕ್ಕೂ ಸೇರಬಲ್ಲ ಸರ್ವಪದಗಳು ಹಳೆಗನ್ನಡದಲ್ಲಿವೆ ಎಂಬುದನ್ನು ಮೇಲೆ (೪.೫)ರಲ್ಲಿ ಕೊಟ್ಟಿರುವ ಕೋಷ್ಟಕದಲ್ಲಿ ನೋಡಬಹುದು.

ಇದಲ್ಲದೆ, ಕ್ರಿಯಾಪದವರ್ಗಕ್ಕೆ ಸೇರಬಹುದಾದ ಏವನ್, ಏವರ್, ಏವುದು ಎಂಬಂತಹ ಸರ್ವಪದಗಳೂ ಹಳೆಗನ್ನಡದಲ್ಲಿ ಬಳಕೆಯಲ್ಲಿವೆ. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ವಾಕ್ಯಗಳನ್ನು ಗಮನಿಸಬಹುದು.

(೨೧ಕ) ಒಡೆಯರದೇವರ್ (೪.೬)
'ಒಡೆಯರಾದ (ಪಾಂಡವರು) ಏನು ಮಾಡಬಲ್ಲರು?'
(೨೧ಖ) ಈ ತೊಡವು ಏವುದೊ (೩.೪೬)
'ಈ ಆಭರಣ ಏನು ಮಾಡಬಲ್ಲುದೋ'

(೨೧ಕ)ದಲ್ಲಿ ಏವರ್ ಎಂಬುದು, ಮತ್ತು (೨೧ಖ)ದಲ್ಲಿ ಏವುದು ಎಂಬುದು ಕ್ರಿಯಾಪದದ ಜಾಗದಲ್ಲಿ ಬಂದಿರುವುದನ್ನು ಕಾಣಬಹುದು.

### ೪.೬ ಎರವಲಾಗಿ ಬಂದ ಪದಗಳು

ಕೇಶಿರಾಜನ ವ್ಯಾಕರಣದಲ್ಲಿ ಹಳೆಗನ್ನಡದ ಪದಗಳನ್ನು 'ದೇಶ್ಯ' (ಅಥವಾ 'ದೇಶೀಯ'), 'ಸಮಸಂಸ್ಕೃತ', 'ತದ್ಭವ' ಮತ್ತು 'ತತ್ಸಮ' ಎಂಬುದಾಗಿ ನಾಲ್ಕು ಗುಂಪುಗಳಲ್ಲಿ ವಿಂಗಡಿಸಲಾಗಿದೆ. ಸಂಸ್ಕೃತದಲ್ಲಿ ಹೇಗಿದೆಯೋ ಹಾಗೆಯೇ ಹಳೆಗನ್ನಡದಲ್ಲೂ ಇರುವ ಪದಗಳನ್ನು 'ಸಮಸಂಸ್ಕೃತ' ಪದಗಳೆಂದು, ಮತ್ತು ಸಂಸ್ಕೃತದಲ್ಲಿರುವ ಪದಗಳಿಂದ ಸ್ವರೂಪದಲ್ಲಿ ಭಿನ್ನವಾಗಿವೆಯಾದರೂ ಆ ಪದಗಳಿಂದಲೇನೇ ಬೇರೆ ಬೇರೆ ಬದಲಾವಣೆಗಳ ಮೂಲಕ ಸಾಧಿಸಲು ಸಾಧ್ಯವಾಗುವಂತಹ ಪದಗಳನ್ನು 'ತದ್ಭವ' (ಇಲ್ಲವೇ 'ಅಪಭ್ರಂಶ') ಪದಗಳೆಂದು ಕರೆಯಲಾಗಿದೆ.

ಈ ಎರಡು ರೀತಿಯ (ಸಮಸಂಸ್ಕೃತ ಮತ್ತು ತದ್ಭವ ಇಲ್ಲವೇ ಅಪಭ್ರಂಶ ಪದಗಳು) ಹಳೆಗನ್ನಡಕ್ಕೆ ಸಂಸ್ಕೃತದಿಂದ ಎರವಲಾಗಿ ಬಂದಿರುವ ಪದಗಳು.

ಉದಾಹರಣೆಗಾಗಿ, ಹಳೆಗನ್ನಡದಲ್ಲಿ ಬಳಕೆಯಾಗುವ ಪ್ರಚಂಡ, ವಿಷ, ಸಂಪೂರ್ಣ,

ಮನೋರಥ, ಉತ್ಪನ್ನ, ಇಂದ್ರಪ್ರಸ್ಥ ಮೊದಲಾದ ಪದಗಳು ಸಂಸ್ಕೃತದಲ್ಲಿ ಹೇಗಿವೆಯೋ ಹಾಗೆಯೇ ಹಳೆಗನ್ನಡದಲ್ಲೂ ಇವೆಯಾದ ಕಾರಣ, ಸಮಸಂಸ್ಕೃತ ಪದಗಳು; ದೀವಂ (<ದೀಪ), ಸಗ್ಗಂ (<ಸ್ವರ್ಗ), ಅಚ್ಚರಿ (<ಆಶ್ಚರ್ಯ), ಉಗ್ಗಡಂ (<ಉತ್ಕಟ) ಮೊದಲಾದವುಗಳು ಕಂಸದಲ್ಲಿ ಕೊಟ್ಟಿರುವ ಸಂಸ್ಕೃತ ಪದಗಳಿಗಿಂತ ಭಿನ್ನವಾಗಿವೆಯಾದರೂ, ಆ ಪದಗಳಿಂದ ಅವನ್ನು ಸಾಧಿಸಲು ಸಾಧ್ಯವಿದೆಯಾದ ಕಾರಣ, ತದ್ಭವ (ಇಲ್ಲವೇ ಅಪಭ್ರಂಶ) ಪದಗಳು.

ಬೇರೆಲ್ಲಾ ವಿಷಯಗಳಲ್ಲೂ ಸಂಸ್ಕೃತ ಪದಗಳ ಹಾಗೆಯೇ ಇದ್ದು, ಕೊನೆಯ ಭಾಗದಲ್ಲಿ ಮಾತ್ರ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ತೋರಿಸುವ ಪದಗಳನ್ನು ತದ್ಭವಗಳೆಂದು ಕರೆಯದೆ ಸಮಸಂಸ್ಕೃತ ಪದಗಳೆಂದೇ ಕರೆಯಲಾಗುತ್ತದೆ. ಉದಾಹರಣೆಗಾಗಿ, ಸೀತೆ (<ಸೀತಾ), ಶಾಲೆ (<ಶಾಲಾ), ಜನನಿ (<ಜನನೀ) ಮೊದಲಾದವುಗಳು ಕಂಸದೊಳಗೆ ಕೊಟ್ಟಿರುವ ಸಂಸ್ಕೃತ ಪದಗಳಿಂದ ಸ್ವಲ್ಪ ಮಟ್ಟಿಗೆ ಮಾತ್ರ ಭಿನ್ನವಾಗಿವೆ; ಹಾಗಾಗಿ, ಅವನ್ನು ಸಮಸಂಸ್ಕೃತ ಪದಗಳೆಂದೇ ಪರಿಗಣಿಸಲಾಗಿದೆ.

'ತತ್ಸಮ' ಎಂಬ ಪದವನ್ನು ಕೇಶಿರಾಜನು ಒಂದು ವಿಶಿಷ್ಟವಾದ ಅರ್ಥದಲ್ಲಿ ಬಳಸಿದ್ದಾನೆ. ಸಂಸ್ಕೃತದವೂ ಮತ್ತು ಕನ್ನಡದವೂ ಆಗಿರುವ ಮಣಿ, ಮಂಚಂ, ಪಟ್ಟಂ, ತೋರಣಂ ಮೊದಲಾದ ೨೧ ಪದಗಳನ್ನು ಆತನು ಈ ಗುಂಪಿನಲ್ಲಿ ಇರಿಸಿದ್ದಾನೆ (ಸೂ. ೩೧೨-೩). ಇವು ಸಂಸ್ಕೃತ ಪದಗಳೊಂದಿಗೆ ಮಾತ್ರವಲ್ಲದೆ ದೇಶ್ಯ ಪದಗಳೊಂದಿಗೂ ಸಮಾಸಗಳಲ್ಲಿ ಬರಬಲ್ಲುವು (ಆದರೆ ಸಮಸಂಸ್ಕೃತ (ಮತ್ತು ತದ್ಭವ) ಪದಗಳು ಆ ರೀತಿ ದೇಶ್ಯ ಪದಗಳೊಂದಿಗೆ ಸಮಾಸದಲ್ಲಿ ಬರಲಾರವು) ಎಂಬುದೇ ಅವನ್ನು ತತ್ಸಮಗಳೆಂಬ ಬೇರೆಯೇ ಒಂದು ಗುಂಪಿನಲ್ಲಿ ಇರಿಸಿ ಹೇಳಲು ಕಾರಣ.

ವೆಂಕಟಾಚಲ ಶಾಸ್ತ್ರಿಗಳು (೧೯೪೪:೧೩೮) ಸೂಚಿಸಿರುವ ಹಾಗೆ, ಈ ತತ್ಸಮ ಪದಗಳಲ್ಲಿ ಕೆಲವಾದರೂ ದ್ರಾವಿಡ ಭಾಷೆಗಳಿಂದ ಸಂಸ್ಕೃತಕ್ಕೆ ಎರವಲಾಗಿ ಹೋಗಿರುವ 'ದೇಶ್ಯ' ಪದಗಳಾಗಿರಲು ಸಾಧ್ಯವಿದೆ. ಉದಾಹರಣೆಗಾಗಿ, ಕೇಶಿರಾಜನ ೨೧ ತತ್ಸಮ ಪದಗಳ ಪಟ್ಟಿಯಲ್ಲಿ ಬಂದಿರುವ ಅಂಕಂ, ಅಟ್ಟಂ, ಕೋಂಟೆ, ಗಂಡಂ, ಗೋಣಿ, ಮಲ್ಲಂ ಮೊದಲಾದ ಕೆಲವು ಪದಗಳಿಗೆ ದ್ರಾವಿಡ ಮೂಲವನ್ನು ಸಾಧಿಸಲಾಗಿದೆ (ಅನುಕ್ರಮವಾಗಿ ಎಮೆನೋ ಮತ್ತು ಬರೋ ಅವರ ದ್ರಾವಿಡ ಜ್ಞಾತಿ ಪದಕೋಶದ (ಎಮೆನೋ ಮತ್ತು ಬರೋ ೧೯೬೧) ೨೯, ೯೩, ೨೨೦೭, ೧೧೭೩, ಅನುಬಂಧ ೩೩ ಮತ್ತು ೪೭೩೦ನೇ ಸಂಖ್ಯೆಯ ಪದಗಳನ್ನು ಗಮನಿಸಬಹುದು).

ಈ ಪದಗಳಿಗೆ ಇಂಡೋ-ಆರ್ಯನ್ ಇಲ್ಲವೇ ಇಂಡೋ-ಯುರೋಪಿಯನ್ ಮೂಲವನ್ನು ಕಂಡುಹಿಡಿಯಲು ಸಾಧ್ಯವಾಗಿಲ್ಲವಾದ ಕಾರಣ, ಅವು ಸಂಸ್ಕೃತಕ್ಕೆ ದ್ರಾವಿಡ ಭಾಷೆಗಳಿಂದ ಎರವಲಾಗಿ ಹೋಗಿರುವ ಪದಗಳೆಂದು ಪರಿಗಣಿಸಬಹುದು.

ಮೇಲೆ ವಿವರಿಸಿದ ಮೂರು ಗುಂಪುಗಳಲ್ಲೂ ಸೇರದಿರುವ ಪದಗಳನ್ನು ದೇಶ್ಯ ಪದಗಳೆಂದು ಪರಿಗಣಿಸಲಾಗಿದೆ. ಇವು ಕನ್ನಡದವೇ ಆದ ಪದಗಳು.

ಭಟ್ಟಾಕಳಂಕನೇ ಮೊದಲಾದ ಇತರ ವೈಯಾಕರಣಿಗಳು ಕೇಶಿರಾಜನು ಸೂಚಿಸಿರುವ ತತ್ಸಮ-ತದ್ಭವ ವ್ಯತ್ಯಾಸವನ್ನು ಪರಿಗಣಿಸಿಲ್ಲ. ಇದಲ್ಲದೆ, ತತ್ಸಮ ಪದವನ್ನು ಇವರು 'ಸಮಸಂಸ್ಕೃತ' ಎಂಬ ಪದದ ಅರ್ಥದಲ್ಲೇ ಬಳಸಿದ್ದಾರೆ. (ಇದನ್ನು ಅನುಸರಿಸಿ, ಈ ಪುಸ್ತಕದ ಮುಂದಿನ ವಿಭಾಗಗಳಲ್ಲಿ ತತ್ಸಮ ಪದವನ್ನು ಈ ಅರ್ಥದಲ್ಲೇ (ಎಂದರೆ ಕೇಶಿರಾಜನ ಸಮಸಂಸ್ಕೃತ ಪದದ ಅರ್ಥದಲ್ಲೇ) ಬಳಸಲಾಗುತ್ತದೆ).

### ೪.೬.೧ ವಿಂಗಡಣೆಯ ಸ್ವರೂಪ

ಹಳೆಗನ್ನಡ ವ್ಯಾಕರಣಗಳಲ್ಲಿ ತತ್ಸಮ (ಸಮಸಂಸ್ಕೃತ) ಪದಗಳು ಮತ್ತು ತದ್ಭವ (ಅಪಭ್ರಂಶ) ಪದಗಳು ಎಂಬುದಾಗಿ ಸಂಸ್ಕೃತದಿಂದ ಎರವಲಾಗಿ ಬಂದಿರುವ ಪದಗಳನ್ನು ವಿಂಗಡಿಸಿರುವುದು ಪ್ರಾಕೃತ, ಪಾಲಿ ಮೊದಲಾದ ಭಾಷೆಗಳ ವ್ಯಾಕರಣಗಳಲ್ಲಿ ಮಾಡಿರುವ ಅಂತಹದೇ ಹೆಸರಿನ ಪದಗಳ ವಿಭಜನೆಯನ್ನು ಹಳೆಗನ್ನಡ ವ್ಯಾಕರಣಕ್ಕೆ ಅಳವಡಿಸಿಕೊಳ್ಳಲು ಮಾಡಿರುವ ಪ್ರಯತ್ನವಲ್ಲದೆ ಬೇರೇನಲ್ಲ.

ಪಾಲಿ, ಪ್ರಾಕೃತ, ಅರ್ಧಮಾಗಧಿ ಮೊದಲಾದ ಭಾಷೆಗಳು ಸಂಸ್ಕೃತದ ಹಾಗೆ ಇಂಡೋ-ಆರ್ಯನ್ ಭಾಷಾಕುಟುಂಬಕ್ಕೆ ಸೇರಿದ ಭಾಷೆಗಳು. ವೇದಗಳ ಕಾಲದಲ್ಲಿ ಮಾತಿನ ಬಳಕೆಯಲ್ಲಿದ್ದ ಭಾಷೆಯೊಂದರಿಂದ ಈ ಭಾಷೆಗಳು ಬೆಳೆದು ಬಂದಿವೆ. ಆ ಕಾಲದ ಭಾಷೆಯನ್ನು ಬರಹಕ್ಕೆ ಮತ್ತು ಸಾಹಿತ್ಯ ರಚನೆಗೆ ಅಳವಡಿಸಿದಾಗ, ಸಂಸ್ಕೃತವೆಂಬ 'ಪರಿಷ್ಕೃತ' ಪ್ರಭೇದ ಸಿದ್ಧವಾಯಿತು. ಮಾತಿನ ಬಳಕೆಯಲ್ಲಿದ್ದ ಭಾಷೆ ಕಾಲ ಕಳೆದಂತೆ ಬದಲಾಗುತ್ತಾ ಹೋಯಿತಾದರೂ, ಈ ಬರಹದ ಭಾಷೆ ಜಾಸ್ತಿ ಬದಲಾಗದೆ ಹಾಗೆಯೇ ಉಳಿಯಿತು.

ಅನಂತರದ ಕಾಲದಲ್ಲಿ, ಬುದ್ಧನ ಅನುಯಾಯಿಗಳು ಮತ್ತು ಮಹಾವೀರನ ಅನುಯಾಯಿಗಳು (ಜೈನರು) ಅವರ ಉಪದೇಶಗಳನ್ನು ಬರೆದಿರಿಸುವುದಕ್ಕಾಗಿ ಸಾಮಾನ್ಯ ಜನರಿಗೆ ಅರ್ಥವಾಗದ ಸಂಸ್ಕೃತವೆಂಬ ಸಾಹಿತ್ಯಿಕ ಭಾಷೆಯನ್ನು ಬಳಸುವ ಬದಲು, ಅವರ ಕಾಲದಲ್ಲಿ ಸಾಮಾನ್ಯ ಜನರ ಮಾತಿನಲ್ಲಿ ಬಳಕೆಯಲ್ಲಿದ್ದ ಪಾಲಿ ಮತ್ತು ಪ್ರಾಕೃತಗಳೆಂಬ ಬೇರೆ ಪ್ರಭೇದಗಳನ್ನು ಬಳಸಲು ಪ್ರಾರಂಭಿಸಿದರು.

ವೇದಕಾಲದಿಂದ ಬುದ್ಧ ಮತ್ತು ಮಹಾವೀರರ ಕಾಲದ ವರೆಗೆ, ಮಾತಿನ ಬಳಕೆಯಲ್ಲಿದ್ದ ಈ ಭಾಷೆಯಲ್ಲಿ ನಡೆದ (ಮತ್ತು ಸಂಸ್ಕೃತದಲ್ಲಿ ನಡೆಯದಿದ್ದ) ಹಲವಾರು ಬದಲಾವಣೆಗಳ ಪರಿಣಾಮವನ್ನು ಈ ಪ್ರಭೇದಗಳ ಪದಗಳಲ್ಲಿ ಕಾಣಬಹುದು. ಈ ಬದಲಾವಣೆಗಳಿಂದಾಗಿ, ಅವುಗಳ ಪದಗಳು ಸಂಸ್ಕೃತದ ಪದಗಳಿಗಿಂತ ಭಿನ್ನವಾಗಿವೆ. ಸಂಸ್ಕೃತ ಭಾಷೆ ಬರಹದ ಭಾಷೆಯಾಗಿ ಮಾತ್ರ ಉಳಿದಿದ್ದುದೇ ಈ ರೀತಿ ಆ ಕಾಲದ ಮಾತಿನ ಪ್ರಭೇದದಲ್ಲಿ ನಡೆದ ಬದಲಾವಣೆಗಳು ಸಂಸ್ಕೃತದ ಪದಗಳನ್ನು ಬಾಧಿಸದಿರುವುದಕ್ಕೆ ಮುಖ್ಯ ಕಾರಣ.

ಪ್ರಾಕೃತವನ್ನು ಬರಹದ ಭಾಷೆಯಾಗಿ ಬಳಸತೊಡಗಿದಾಗ, ಅದರ ಬರಹಗಾರರು ಹಲವೆಡೆಗಳಲ್ಲಿ 'ಪಾರಿಭಾಷಿಕ' ಪದಗಳ ಕೊರತೆಯನ್ನು ಅನುಭವಿಸಿರಬೇಕು ಮತ್ತು ಅಂತಹ ಸಂದರ್ಭಗಳಲ್ಲೆಲ್ಲ ನೇರವಾಗಿ ಸಂಸ್ಕೃತದಿಂದ ಅವಶ್ಯವಿರುವ ಪದಗಳನ್ನು ಎರವಲಾಗಿ ಪಡೆದುಕೊಂಡಿರಬೇಕು. ಇದರಿಂದಾಗಿ, ಪ್ರಾಕೃತದಲ್ಲಿ ಎರಡು ರೀತಿಯ ಪದಗಳು ಕಾಣಿಸಿಕೊಳ್ಳತೊಡಗಿದುವು.

ವೇದಕಾಲದಿಂದ ಬುದ್ಧ-ಜೈನರ ಕಾಲದ ವರೆಗಿನ ಸಮಯದಲ್ಲಿ ನಡೆದ ಬದಲಾವಣೆಗಳಿಂದ ಬಾಧಿತವಾಗಿರುವ ಪ್ರಾಕೃತದ್ದೇ ಆದ ಪದಗಳು ಒಂದು ರೀತಿಯವು (ತದ್ಭವಗಳು), ಮತ್ತು ಸಂಸ್ಕೃತದಿಂದ ಎರವಲಾಗಿ ಪಡೆದಿರುವ, ಮತ್ತು ಅಂತಹ ಬದಲಾವಣೆಗಳಿಂದ ಬಾಧಿತವಾಗದಿರುವ ಪದಗಳು ಇನ್ನೊಂದು ರೀತಿಯವು (ತತ್ಸಮಗಳು).

ಇದಲ್ಲದೆ, ಬದಲಾವಣೆಗಳ ಮೂಲಕ ಸಂಸ್ಕೃತ ಪದಗಳಿಂದ ಸಾಧಿಸಲು ಸಾಧ್ಯವಾಗದಂತಹ ಬೇರೆಯೂ ಕೆಲವು ಪದಗಳು ಪ್ರಾಕೃತದಲ್ಲಿವೆ. ಇವು ಸಂಸ್ಕೃತ ಗ್ರಂಥಗಳಲ್ಲಿ ಕಾಣಿಸದಿದ್ದರೂ ಇಂಡೋ-ಆರ್ಯನ್ ಮೂಲ ಭಾಷೆಯಿಂದಲೇನೇ ಬಂದಿರುವ ಪದಗಳಿರಬಹುದು, ಇಲ್ಲವೇ

ಬೇರೆ ಭಾಷೆಗಳಿಂದ ಎರವಲಾಗಿ ಬಂದಿರುವ ಪದಗಳಿರಬಹುದು. ಇವನ್ನು ಪ್ರಾಕೃತ ವೈಯಾಕರಣಿಗಳು 'ದೇಶಿ' ಇಲ್ಲವೇ 'ದೇಶಜ' ಪದಗಳೆಂದು ಕರೆದಿದ್ದಾರೆ.

### ೪.೫.೨ ವಿಂಗಡಣೆಯ ಔಚಿತ್ಯ

ಪ್ರಾಕೃತ ವ್ಯಾಕರಣಗಳಲ್ಲಿ ಆ ಭಾಷೆಯ ಪದಗಳನ್ನು ಸಂಸ್ಕೃತದಿಂದ ಎರವಲಾಗಿ ಬಂದಿರುವ ತತ್ಸಮ ಪದಗಳು ಮತ್ತು ಪ್ರಾಕೃತದ್ದೇ ಆದ ತದ್ಭವ ಇಲ್ಲವೇ ಅಪಭ್ರಂಶ ಪದಗಳು ಎಂಬುದಾಗಿ ವಿಂಗಡಿಸುವುದರಲ್ಲಿ ಔಚಿತ್ಯವಿದೆ. ಆದರೆ ಸಂಸ್ಕೃತಕ್ಕಿಂತ ತೀರ ಭಿನ್ನವಾಗಿರುವ ಮೂಲದ್ರಾವಿಡ ಭಾಷೆಯೊಂದರಿಂದ ಬೆಳೆದು ಬಂದಿರುವ ಹಳೆಗನ್ನಡ ಭಾಷೆಯ ವ್ಯಾಕರಣದಲ್ಲಿ ಅಂತಹದೇ ವಿಂಗಡಣೆಯನ್ನು ಬಳಸುವುದರಲ್ಲಿ ಯಾವ ಔಚಿತ್ಯವೂ ಇಲ್ಲ.

ಪ್ರಾಕೃತ ಭಾಷೆಯಲ್ಲಿ ಮುಖ್ಯವಾಗಿ ತತ್ಸಮ ಮತ್ತು ತದ್ಭವ ಪದಗಳು ಎಂಬುದಾಗಿ ಎರಡು ರೀತಿಯ ಪದಗಳು ಮಾತ್ರ ಕಾಣಿಸಿಕೊಳ್ಳುತ್ತವೆ (ದೇಶಿ ಪದಗಳು ಪ್ರಾಕೃತ ವ್ಯಾಕರಣದ ಮಟ್ಟಿಗೆ ತದ್ಭವಗಳ ಹಾಗೆಯೇ ಬಳಕೆಯಾಗುತ್ತವೆ). ಇವುಗಳಲ್ಲಿ ತದ್ಭವ ಪದಗಳು, ಮೇಲೆ ಸೂಚಿಸಿದ ಹಾಗೆ, ಮೂಲ ಭಾಷೆಯಿಂದ ಆನುವಂಶಿಕವಾಗಿ ಬೆಳೆದು ಬಂದ ಪದಗಳು; ಇವು ಕಾಲದಿಂದ ಕಾಲಕ್ಕೆ ಆ ಭಾಷೆಯಲ್ಲಿ ನಡೆದ ಬದಲಾವಣೆಗಳಿಂದಾಗಿ ಇವತ್ತಿನ ರೂಪವನ್ನು ಪಡೆದಿವೆ.

ಹಳೆಗನ್ನಡದಲ್ಲೂ ಇಂತಹ ಪದಗಳಿದ್ದು, ಅವನ್ನು ದೇಶ್ಯ ಪದಗಳೆಂದು ಕರೆಯಲಾಗಿದೆ. ಇವನ್ನು ಹಳೆಗನ್ನಡ ಭಾಷೆ ತನ್ನ ಮೂಲ (ದ್ರಾವಿಡ) ಭಾಷೆಯಿಂದ ಆನುವಂಶಿಕವಾಗಿ ಪಡೆದಿದೆ. ಕಾಲದಿಂದ ಕಾಲಕ್ಕೆ ಈ ಭಾಷೆಯಲ್ಲಿ ನಡೆದ ಬದಲಾವಣೆಗಳ ಫಲವಾಗಿ ಈ ಪದಗಳು ಹಳೆಗನ್ನಡದಲ್ಲಿ ಕಾಣಿಸುವ ರೂಪವನ್ನು ಪಡೆದಿವೆ (ವಿವರಗಳಿಗೆ ಭಟ್ ೨೦೦೭ ನೋಡಿ).

ಪ್ರಾಕೃತ ಭಾಷೆಯಲ್ಲಿ ಕಾಣಿಸುವ ತತ್ಸಮ (ಇಲ್ಲವೇ ಸಮಸಂಸ್ಕೃತ) ಪದಗಳು ಸಂಸ್ಕೃತದಿಂದ ಎರವಲಾಗಿ ಬಂದಿರುವ ಪದಗಳು. ಆ ಭಾಷೆಯಲ್ಲಿ ನಡೆದ ಬದಲಾವಣೆಗಳ ಅವಧಿ ಮುಗಿದ ಮೇಲೆ ಇವನ್ನು ಎರವಲಾಗಿ ಪಡೆದು ಕೊಳ್ಳಲಾಗಿದೆಯಾದ ಕಾರಣ, ಅವು ಆ ಭಾಷೆಯ 'ತದ್ಭವ' ಪದಗಳಿಂದ ಭಿನ್ನವಾಗಿವೆ.

ಹಳೆಗನ್ನಡದಲ್ಲೂ ಈ ರೀತಿ ಹಿಂದಿನ ಪ್ರಭೇದದಿಂದ ಎರವಲಾಗಿ ಪಡೆದ (ದೇಶ್ಯ) ಪದಗಳಿವೆ. ಉದಾಹರಣೆಗಾಗಿ ಮೂಲದ್ರಾವಿಡದ ಆದಿಚಕಾರ ಹಳೆಗನ್ನಡದಲ್ಲಿ ಸಕಾರವಾಗಿ ಬದಲಾಗಿದೆ. ಸಾಯ್, ಸಾಲ್, ಸಿಡಿಲ್, ಸುಡು, ಸೆಱೆ ಮೊದಲಾದ ದೇಶ್ಯ ಪದಗಳಲ್ಲಿ ಈ ಬದಲಾವಣೆಯ ಪರಿಣಾಮವನ್ನು ಕಾಣಬಹುದು. ಆದರೆ, ಆದಿಚಕಾರವನ್ನು ಉಳಿಸಿಕೊಂಡಿರುವ ಬೇರೆ ಕೆಲವು ಪದಗಳೂ ಹಳೆಗನ್ನಡದಲ್ಲಿದ್ದು (ಚಿಕ್ಕ, ಚಿನ್ನ, ಚೆನ್ನ, ಚೆಲ್ವು ಇತ್ಯಾದಿ) ಮೇಲಿನ ಬದಲಾವಣೆಯ ಅವಧಿ ಮುಗಿದ ಮೇಲೆ ಹಿಂದಿನ ಪ್ರಭೇದದಿಂದ (ಇಲ್ಲವೇ ಈ ಬದಲಾವಣೆಯಾಗದಿರುವ ಬೇರೊಂದು ದ್ರಾವಿಡ ಭಾಷಾಪ್ರಭೇದದಿಂದ) ಅವು ಎರವಲಾಗಿ ಬಂದಿರಬೇಕು.

ಈ ವ್ಯತ್ಯಾಸವನ್ನು ಹೊಸಗನ್ನಡ ಪದಗಳಲ್ಲಿ ಇನ್ನಷ್ಟು ಸ್ಪಷ್ಟವಾಗಿ ಕಾಣಬಹುದು. ಕನ್ನಡದ ಚರಿತ್ರೆಯಲ್ಲಿ ಪಕಾರ ಹಕಾರವಾಗುವ ಬದಲಾವಣೆ ಹದಿನಾಲ್ಕು-ಹದಿನೈದನೇ ಶತಮಾನದ ಹೊತ್ತಿಗೆ ಸಂಪೂರ್ಣಗೊಂಡಿರಬೇಕು (ನರಸಿಂಹಯ್ಯ ೧೯೪೧ ನೋಡಿ). ಹೊಸಗನ್ನಡದ ಹಾಲು (<ಪಾಲ್), ಹಣ್ಣು (<ಪಣ್), ಹುಲಿ (<ಪುಲಿ), ಹೋಗು (<ಪೋ) ಮೊದಲಾದ ಪದಗಳಲ್ಲಿ ಈ ಬದಲಾವಣೆಯ ಪರಿಣಾಮವನ್ನು ಕಾಣಬಹುದು.

ಈ ಸಮಯದ ಅನಂತರ, ಕನ್ನಡ ಭಾಷೆ ಆದಿ ಪಕಾರವಿರುವ ಹಲವಾರು ಪದಗಳನ್ನು ಹಳೆಗನ್ನಡದಿಂದ ಎರವಲಾಗಿ ಪಡೆದಿದ್ದು, ಅಂತಹ ಪದಗಳಲ್ಲಿ ಆದಿ ಪಕಾರ ಬದಲಾಗದೆ ಹಾಗೆಯೇ ಉಳಿದಿದೆ. ಹೊಸಗನ್ನಡದ ಪಚ್ಚೆ, ಪಡು (ಕಷ್ಟಪಡು), ಪಾಡು, ಪುಣುಗು, ಪೆಟ್ಟು ಮೊದಲಾದ ಪದಗಳಲ್ಲಿ ಈ ರೀತಿ ಪಕಾರ ಹಕಾರವಾಗದೆ ಉಳಿದಿರುವುದನ್ನು ಕಾಣಬಹುದು.

ನಿಜಕ್ಕೂ ಹಳೆಗನ್ನಡದ (ಇಲ್ಲವೇ ಹೊಸಗನ್ನಡದ) ದೇಶ್ಯ ಪದಗಳಲ್ಲಿ ಕಾಣಿಸುವ ಈ ಮೇಲಿನ ವಿಭಜನೆಯೇ ಪ್ರಾಕೃತದ ತತ್ಸಮ-ತದ್ಭವ ವಿಭಜನೆಗೆ ಸಮನಾದುದು. ಯಾಕೆಂದರೆ, ಪ್ರಾಕೃತದಲ್ಲಿ ಬಳಕೆಯಲ್ಲಿರುವ ತದ್ಭವ ಪದಗಳು ಹಳೆಗನ್ನಡದ ದೇಶ್ಯ ಪದಗಳ ಹಾಗೆ ಮೂಲ ಭಾಷೆಯಿಂದ ಆನುವಂಶಿಕವಾಗಿ ಬೆಳೆದು ಬಂದವುಗಳು, ಮತ್ತು ತತ್ಸಮ ಪದಗಳು ಅದೇ ಮೂಲ ಭಾಷೆಯಿಂದ (ಎಂದರೆ ಅದರ ಸಾಹಿತ್ಯಿಕ ರೂಪದಿಂದ) ಎರವಲಾಗಿ ಪಡೆದ ಪದಗಳು.

### ೪.೬.೩ ಸಂಸ್ಕೃತದ ಎರವಲುಗಳು

ಪ್ರಾಕೃತ ವ್ಯಾಕರಣಗಳಲ್ಲಿ ಕಾಣಿಸುವಂತಹ ತತ್ಸಮ ಮತ್ತು ತದ್ಭವ ವಿಭಜನೆಗೂ ಮತ್ತು ಹಳೆಗನ್ನಡ ವ್ಯಾಕರಣದಲ್ಲಿ ಕಾಣಿಸುವಂತಹ ಅದೇ ಹೆಸರಿನ ವಿಭಜನೆಗೂ ನಡುವೆ ಮೇಲೆ ವಿವರಿಸಿದ ಹಾಗೆ ಒಂದು ಮುಖ್ಯವಾದ ವ್ಯತ್ಯಾಸವಿದೆ.

ಪ್ರಾಕೃತದಲ್ಲಿ ತದ್ಭವ ಇಲ್ಲವೇ ಅಪಭ್ರಂಶ ಎಂಬ ಗುಂಪಿಗೆ ಸೇರುವ ಪದಗಳೆಲ್ಲ ನಿಜಕ್ಕೂ ಆ ಭಾಷೆಯ ದೇಶ್ಯ ಪದಗಳಲ್ಲದೆ ಎರವಲಾಗಿ ಬಂದ ಪದಗಳಲ್ಲ. ಅವನ್ನು 'ದೇಶೀಯ' ಪದಗಳಿಂದ ಭಿನ್ನವಾದುವೆಂದು ಪರಿಗಣಿಸಲು ಅವಕ್ಕೆ ಸಂಸ್ಕೃತ ಮೂಲವಿದೆಯೆಂಬುದು ಮಾತ್ರವೇ ಕಾರಣ. ಸಂಸ್ಕೃತ ಮತ್ತು ಪ್ರಾಕೃತಗಳೆರಡೂ ಇಂಡೋ-ಆರ್ಯನ್ ಭಾಷೆಗಳಾಗಿರುವುದರಿಂದ, ಈ ರೀತಿ ಅವನ್ನು ಒಂದು ಬೇರೆಯೇ ಗುಂಪಿನಲ್ಲಿ ಇರಿಸಿ ಹೇಳಲು ಸಾಧ್ಯವಾಗಿದೆ.

ಪ್ರಾಕೃತದ ತತ್ಸಮ ಪದಗಳೂ ಇಂಡೋ-ಆರ್ಯನ್ ಪದಗಳೇ; ಅವನ್ನು ಅದೇ ಭಾಷೆಯ ಹಿಂದಿನ ಕಾಲದ ಪ್ರಭೇದದಿಂದ (ಎಂದರೆ ಸಂಸ್ಕೃತದಿಂದ) ಎರವಲಾಗಿ ಪಡೆಯಲಾಗಿದೆ.

ಆದರೆ ಹಳೆಗನ್ನಡ ವ್ಯಾಕರಣಗಳು ಗುರುತಿಸುವ ತತ್ಸಮ (ಸಮಸಂಸ್ಕೃತ) ಮತ್ತು ತದ್ಭವ ಪದಗಳೆರಡೂ ಎರವಲಾಗಿ ಬಂದಿರುವ ಪದಗಳೇ. ಮೇಲೆ ಸೂಚಿಸಿದ ಹಾಗೆ, ಇವು ಜಾಸ್ತಿ ಬದಲಾಗದೆ ಎರವಲು ಕೊಟ್ಟಿರುವ ಸಂಸ್ಕೃತ ಭಾಷೆಯ ಪದಗಳ ಹಾಗೆಯೇ ಇವೆಯಾದರೆ ಅವನ್ನು ತತ್ಸಮ ಪದಗಳೆಂದು ಮತ್ತು ಅವುಗಳಲ್ಲಿ ಹೆಚ್ಚಿನ ಬದಲಾವಣೆಗಳಾಗಿವೆಯಾದರೆ ಅವನ್ನು ತದ್ಭವ ಪದಗಳೆಂದು ಕರೆಯಲಾಗುತ್ತದೆ. ಹಳೆಗನ್ನಡದ ದೇಶ್ಯ ಪದಗಳು ಇವೆರಡಕ್ಕಿಂತಲೂ ತೀರ ಭಿನ್ನವಾಗಿರುವ ಹಳೆಗನ್ನಡದವೇ ಆದ ಪದಗಳು.

ಪ್ರಾಕೃತದ ತದ್ಭವ ಪದಗಳೆಲ್ಲವೂ ಒಂದೇ ರೀತಿಯಾಗಿ ಆ ಭಾಷೆಯ ಚರಿತ್ರೆಯಲ್ಲಿ ನಡೆದ ಬದಲಾವಣೆಗಳಿಗೊಳಗಾಗಿವೆ. ಹಾಗಾಗಿ ಅವನ್ನೆಲ್ಲ ಒಂದು ಗುಂಪಿನಲ್ಲಿರಿಸಿ, ಸಂಸ್ಕೃತದಿಂದ ಎರವಲಾಗಿ ಬಂದಿರುವ ತತ್ಸಮ ಪದಗಳಿಂದ ಭಿನ್ನವಾದುವೆಂದು ಪರಿಗಣಿಸುವುದು ಸುಲಭ.

ಆದರೆ ಹಳೆಗನ್ನಡದಲ್ಲಿ ಬಳಕೆಯಲ್ಲಿರುವ ಸಂಸ್ಕೃತದ ಎರವಲು ಪದಗಳು ಹಾಗೆ ಒಂದೇ ರೀತಿಯಾಗಿ ಬದಲಾವಣೆಗಳಿಗೊಳಗಾಗಿಲ್ಲ. ಅವು ಬೇರೆ ಬೇರೆ ಪ್ರಮಾಣಗಳಲ್ಲಿ ಬದಲಾಗಿದ್ದು, ಬದಲಾವಣೆಗಳ ಬೇರೆ ಬೇರೆ ಹಂತಗಳಲ್ಲಿ ಕಾಣಿಸಿಕೊಳ್ಳುತ್ತವೆ. ನಿಜಕ್ಕೂ ಪದಗಳ ಕೊನೆಯ ಸ್ವರವನ್ನು ಬದಲಾಯಿಸುವುದು (ಶಾಲಾ>ಶಾಲೆ, ಜನನೀ> ಜನನಿ ಇತ್ಯಾದಿ) ಇಂತಹ ಹಂತಗಳಲ್ಲಿ ಒಂದೆಂದು ಹೇಳಬಹುದು.

ಇದಕ್ಕೆ ಕಾರಣವೇನೆಂದರೆ, ಪ್ರಾಕೃತದ ತದ್ಭವ ಪದಗಳಲ್ಲಿ ನಡೆದ ಬದಲಾವಣೆಗಳು ಪದಗಳ ಬದಲಾವಣೆಗಳಲ್ಲ, ಆ ಭಾಷೆಯ ಚರಿತ್ರೆಯಲ್ಲಿ ನಡೆದ ವರ್ಣಗಳ ಬದಲಾವಣೆಗಳು. ವರ್ಣಗಳು ಈ ರೀತಿ ಬದಲಾದಾಗ ಆ ಕಾಲದಲ್ಲಿ ಭಾಷೆಯಲ್ಲಿದ್ದ ಪದಗಳೆಲ್ಲವೂ ಒಂದೇ ಬಾರಿಗೆ ಬದಲಾಗುತ್ತವೆ. ಹಾಗಾಗಿ, ಪ್ರಾಕೃತದ ತದ್ಭವ ಪದಗಳನ್ನು ಇಂತಹ ಬದಲಾವಣೆಗಳೆಲ್ಲ ನಿಯಮಿತವಾಗಿ ಬಾಧಿಸಿರುವುದನ್ನು ಕಾಣಬಹುದು.

ಆದರೆ, ಹಳೆಗನ್ನಡದ ತದ್ಭವ ಪದಗಳಲ್ಲಿ ಕಾಣಿಸುವ ಬದಲಾವಣೆಗಳು ವರ್ಣಗಳ ಬದಲಾವಣೆಗಳಲ್ಲ, ಪದಗಳ ಬದಲಾವಣೆಗಳು. ಒಂದು ಭಾಷೆ ಇನ್ನೊಂದು ಭಾಷೆಯಿಂದ ಪದಗಳನ್ನು ಎರವಲಾಗಿ ಪಡೆಯುವಾಗ, ಅವುಗಳ ಸ್ವರೂಪ ಆ ಭಾಷೆಯಲ್ಲಿರುವ ಪದಗಳ ಸ್ವರೂಪಕ್ಕೆ ಹೊಂದಿಕೊಳ್ಳುವಂತೆ ಬೇರೆ ಬೇರೆ ರೀತಿಯಲ್ಲಿ ಬದಲಾವಣೆಗಳಿಗೊಳಗಾಗುತ್ತದೆ. ಈ ಬದಲಾವಣೆಗಳನ್ನು ಪದಗಳನ್ನು ಎರವಲಾಗಿ ಪಡೆಯುವ ವ್ಯಕ್ತಿಗಳು ಬೇರೆ ಬೇರೆ ಸಂದರ್ಭಗಳಲ್ಲಿ ನಡೆಸಿರುತ್ತಾರೆ.

ಇಂತಹ ಬದಲಾವಣೆಗಳು ಒಮ್ಮೆಯೇ ನಡೆಯುವ ಬದಲು, ಹಂತ ಹಂತ ವಾಗಿ ನಡೆಯುತ್ತವೆ. ಇದಲ್ಲದೆ, ಈ ಬದಲಾವಣೆಗಳು ಎರವಲಾಗಿ ಬಂದ ಪದಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬಾಧಿಸುವುವಾದ ಕಾರಣ, ಬದಲಾವಣೆಯ ಎಲ್ಲಾ ಹಂತಗಳನ್ನೂ ಎರವಲಾಗಿ ಬಂದಿರುವ ಪದಗಳಲ್ಲಿ ಕಾಣಲು ಸಾಧ್ಯವಿದೆ, ಮತ್ತು ಬೇರೆ ಬೇರೆ ಪದಗಳಲ್ಲಿ ಬೇರೆ ಬೇರೆ ಹಂತಗಳನ್ನು ಕಾಣಲು ಸಾಧ್ಯವಿದೆ.

ಈ ಕಾರಣಕ್ಕಾಗಿ, ಎರವಲು ಪದಗಳಲ್ಲಿ ಕಾಣಿಸುವ ಬದಲಾವಣೆಗಳು ಸಾಮಾನ್ಯವಾಗಿ ಅನಿಯಮಿತವಾಗಿರುತ್ತವೆ. ಈ ಪದಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಕವಿಗಳು ಮತ್ತು ವಿದ್ವಾಂಸರು ಎರವಲಾಗಿ ಪಡೆದುಕೊಂಡಿರುವರಾದ ಕಾರಣ, ಅವುಗಳಲ್ಲಿ ಕಾಣಿಸುವ ಬದಲಾವಣೆಗಳಲ್ಲಿ ಹಲವು ರೀತಿಯ ವಿಕಲ್ಪಗಳನ್ನು ಕಾಣಲು ಸಾಧ್ಯವಿದೆ.

ಇವನ್ನೆಲ್ಲ ಪರಿಶೀಲಿಸಿದಾಗ, ನಿಜಕ್ಕೂ ಇಂತಹ ಎರವಲು ಪದಗಳನ್ನು ತತ್ಸಮ ಮತ್ತು ತದ್ಭವ ಎಂಬ ಎರಡು ಗುಂಪುಗಳಲ್ಲಿ ವಿಂಗಡಿಸುವುದಕ್ಕಿಂತಲೂ ಕೆಳಗೆ ವಿವರಿಸಿದ ಹಾಗೆ ಹಲವು ಗುಂಪುಗಳಲ್ಲಿ ವಿಂಗಡಿಸುವುದೇ ಒಳ್ಳೆಯದೆಂದು ಅನಿಸದಿರದು.

(೧) ಹಳೆಗನ್ನಡದಲ್ಲಿ ಬಳಕೆಯಲ್ಲಿರುವ ತದ್ಭವ ಪದಗಳಲ್ಲಿ ದಾಡೆ, ಬೆಜ್ಜ, ಬಟ್ಟ, ಕಂಬ ಮೊದಲಾದ ಹಲವು ಪದಗಳನ್ನು ನೇರವಾಗಿ ಸಂಸ್ಕೃತದಿಂದ ಎರವಲಾಗಿ ಪಡೆಯುವ ಬದಲು, ಪ್ರಾಕೃತದಿಂದ ಎರವಲಾಗಿ ಪಡೆದಿರುವ ಹಾಗೆ ಕಾಣಿಸುತ್ತದೆ. ಇವನ್ನು ನೇರವಾಗಿ ಸಂಸ್ಕೃತದ ದಂಷ್ಟ್ರಾ, ವೈದ್ಯ, ವೃತ್ತ, ಸ್ತಂಭ ಮೊದಲಾದ ಪದಗಳಿಂದ ಸಾಧಿಸುವುದಕ್ಕಿಂತಲೂ, ಪ್ರಾಕೃತದ ದಾಢಾ, ವೇಜ್ಜ, ವಟ್ಟ, ಖಂಭ ಮೊದಲಾದ ಪದಗಳಿಂದ ಸಾಧಿಸುವುದು ಸುಲಭ (ಆರ್. ನರಸಿಂಹಾಚಾರ್ ೧೯೬೯:೧೬೫ ನೋಡಿ). ಹಾಗಾಗಿ, ಇವನ್ನು 'ಪ್ರಾಕೃತ-ತದ್ಭವ'ವೆಂಬ ಬೇರೆಯೇ ಒಂದು ಗುಂಪಿನಲ್ಲಿ ಇರಿಸುವ ಅವಶ್ಯಕತೆಯಿದೆ.

(೨) ಈ ರೀತಿ ಪ್ರಾಕೃತದ ಮೂಲಕ ಹಳೆಗನ್ನಡಕ್ಕೆ ಬರುವ ಬದಲು, ಬೇರೆ ಭಾಷೆಗಳ ಮೂಲಕ (ಪಾಲಿ, ತಮಿಳು ಇತ್ಯಾದಿ) ಹಳೆಗನ್ನಡಕ್ಕೆ ಬಂದಿರುವ ಸಂಸ್ಕೃತ ಪದಗಳೂ ಕೆಲವಿವೆ. ಇವನ್ನೂ ನೇರವಾಗಿ ಸಂಸ್ಕೃತ ಪದಗಳಿಂದ ಸಾಧಿಸಲು ಪ್ರಯತ್ನಿಸಿದಲ್ಲಿ, ಇವುಗಳಲ್ಲಿ ಕಾಣಿಸುವ ವ್ಯತ್ಯಾಸಗಳನ್ನು ವಿವರಿಸುವ ಕೆಲಸ ಬಹಳ ಕ್ಲಿಷ್ಟವಾಗುತ್ತದೆ.

ಉದಾಹರಣೆಗಾಗಿ, ಆರ್. ನರಸಿಂಹಾಚಾರ್ ಅವರು (೧೯೬೯:೧೬೮) ಸೂಚಿಸಿರುವಂತೆ,

ಹಳೆಗನ್ನಡದ ಅರಸ, ಅರಸಿ, ನೊಗ, ಬಿನ್ನಪ, ಕೆಲಸ ಮೊದಲಾದ ಕೆಲವು ಪದಗಳನ್ನು ನೇರವಾಗಿ ರಾಜ, ರಾಜ್ಞೀ, ಯುಗ, ವಿಜ್ಞಾಪ್ಯ, ಕ್ರಿಯಾ ಮೊದಲಾದ ಸಂಸ್ಕೃತ ಪದಗಳಿಂದ ಸಾಧಿಸುವ ಬದಲು, ತಮಿಳಿನ ಅರಶನ್, ಅರಶಿ, ನುಗಂ, ವಿಣ್ಣಪ್ಪಂ, ಕಿರಿಶೈ ಮೊದಲಾದ ತದ್ಭವ ಪದಗಳಿಂದ ಸಾಧಿಸುವುದು ಸುಲಭ. ಈ ಸಂಸ್ಕೃತ ಪದಗಳಲ್ಲಿ ಕಾಣಿಸುವ ಬದಲಾವಣೆಗಳು ತಮಿಳು ಪದಗಳ ಸ್ವರೂಪಕ್ಕೆ ಹೊಂದಿಕೊಳ್ಳುವಂತೆ ನಡೆದಿವೆಯಲ್ಲದೆ, ಹಳೆಗನ್ನಡ ಪದಗಳ ಸ್ವರೂಪಕ್ಕೆ ಹೊಂದಿಕೊಳ್ಳುವಂತೆ ನಡೆದಿಲ್ಲ.

(೩) ಇದಲ್ಲದೆ, ಹಳೆಗನ್ನಡದ ನೆಪ, ನೇಹ, ವಕ್ಖಾಣ, ಕಜ್ಜ ಮೊದಲಾದ ಪದಗಳು ಸಂಸ್ಕೃತದ ನಿಭ, ಸ್ನೇಹ, ವ್ಯಾಖ್ಯಾನ, ಕಾರ್ಯ ಮೊದಲಾದ ಪದಗಳಿಂದ ಭಿನ್ನವಾಗಿವೆಯಾದರೂ, ಪ್ರಾಕೃತದ ನೆಪ, ನೇಹ, ವಕ್ಖಾಣ, ಕಜ್ಜ ಮೊದಲಾದ ಪದಗಳಿಗೆ ಸಮಾನವಾಗಿವೆಯಾದ ಕಾರಣ, ಇವನ್ನು ತದ್ಭವಗಳೆಂದು ಕರೆಯುವ ಬದಲು 'ಸಮಪ್ರಾಕೃತ' ಇಲ್ಲವೇ 'ಪ್ರಾಕೃತ-ತತ್ಸಮ' ಪದಗಳೆಂದು ಕರೆಯಲು ಸಾಧ್ಯವಿದೆ (ಆರ್. ನರಸಿಂಹಾಚಾರ್ ೧೯೬೯:೧೬೬ ನೋಡಿ).

(೪) ಮೇಲೆ ವಿವರಿಸಿರುವ ಹಾಗೆ, ಹಳೆಗನ್ನಡದ 'ತದ್ಭವ' ಪದಗಳು ಪ್ರಾಕೃತದಲ್ಲಿರುವ ತದ್ಭವ ಪದಗಳ ಹಾಗೆ ಒಂದೇ ರೀತಿಯವಲ್ಲ. ಅವು ಬದಲಾವಣೆಯ ಹಲವು ಹಂತಗಳನ್ನು ತೋರಿಸುತ್ತವೆ. ಹಾಗಾಗಿ, ಅವನ್ನೆಲ್ಲ ಒಂದೇ ಗುಂಪಿನಲ್ಲಿರಿಸುವುದು ಸರಿಯಲ್ಲ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ತದ್ಭವ ಪದಗಳನ್ನು ಗಮನಿಸಬಹುದು.

| ಸಂಸ್ಕೃತ | ತದ್ಭವ ಪದಗಳು |
|---|---|
| ತಪಸ್ವಿ | ತಪಸಿ, ತವಸಿ |
| ದ್ಯೂತ | ಜೂದು, ಜೂಜು |
| ಅಮಾವಾಸ್ಯಾ | ಅಮಾಸೆ, ಅವಸೆ |
| ಆಷಾಢ | ಆಸಡಿ, ಅಸಡಿ |
| ಅಶೋಕ | ಅಶೋಕೆ, ಅಸುಗೆ |
| ಆಕಾರ | ಆಗರ, ಆರ |
| ಕುಮಾರ | ಕುವರ, ಕೋರ |
| ಉನ್ಮತ್ತ | ಉಮ್ಮತ್ತ, ಉಮ್ಮತ |

ಮೇಲೆ ಕೊಟ್ಟಿರುವ ತದ್ಭವ ಪದಗಳಲ್ಲಿ ಮೊದಲನೆಯದು ಬದಲಾವಣೆಯ ಒಂದು ಹಂತದಲ್ಲೂ, ಮತ್ತು ಎರಡನೆಯದು ಅದರ ಅನಂತರದ ಬೇರೊಂದು ಹಂತದಲ್ಲೂ ಸಿದ್ಧವಾಗಿರುವ ಹಾಗೆ ಕಾಣಿಸುತ್ತವೆ. ಹಾಗಾಗಿ, ಅವನ್ನು ಬೇರೆ ಬೇರೆ ಗುಂಪುಗಳಲ್ಲಿರಿಸುವ ಅವಶ್ಯಕತೆಯಿದೆ.

(೫) ಕೊನೆಯ ಸ್ವರದಲ್ಲಿ ಮಾತ್ರ ಬದಲಾಣೆಯನ್ನು ತೋರಿಸುವ ಶಾಲೆ (<ಶಾಲಾ), ಭಾಷೆ (<ಭಾಷಾ), ಯೋಗಿನಿ (<ಯೋಗಿನೀ), ವಧು (<ವಧೂ) ಮೊದಲಾದ ಪದಗಳನ್ನು ತದ್ಭವಗಳೆಂದು ಕರೆಯದೆ ತತ್ಸಮಗಳೆಂದು ಕರೆದಿರುವುದರ ಔಚಿತ್ಯವೇನೆಂಬುದು ಸ್ಪಷ್ಟವಾಗಿಲ್ಲ. (ಬಹುಶಃ ಪ್ರಾಕೃತ ವ್ಯಾಕರಣದಲ್ಲಿ ಈ ಬಳಕೆಯ ಮೂಲವಿರಬಹುದು). ಆದರೆ, ಹಳೆಗನ್ನಡದಲ್ಲಿ ಇತರ ತದ್ಭವಗಳೆಂದೆನಿಸುವ ಪದಗಳಲ್ಲಿ ನಡೆದಿರುವ ಬದಲಾವಣೆಗಳ ಹಾಗೆ, ಈ ಪದಗಳಲ್ಲಿ ಕಾಣಿಸುವ ಬದಲಾವಣೆಗಳನ್ನೂ ಎರವಲಾಗಿ ಬಂದ ಸಂಸ್ಕೃತದ ಪದಗಳನ್ನು ಹಳೆಗನ್ನಡ ಪದಗಳ ಸ್ವರೂಪಕ್ಕೆ

ಹೊಂದಿಸಿಕೊಳ್ಳುವುದಕ್ಕಾಗಿ ನಡೆಸಲಾಗಿದೆಯಾದ ಕಾರಣ, ಅವನ್ನು ತದ್ಭವಗಳಿಂದ ಭಿನ್ನವಾದ ಪದಗಳೆಂದು ಪರಿಗಣಿಸಲು ಯಾವ ಆಧಾರವೂ ಇಲ್ಲ.

ಉದಾಹರಣೆಗಾಗಿ, ಕುಂಬ (<ಕುಂಭ), ಗಾಡ (<ಗಾಢ), ಚಿನ್ನ (<ಛಿನ್ನ), ಜಗನ (<ಜಘನ), ದೂಪ (<ಧೂಪ), ಬೋಗ (<ಭೋಗ), ಆರಂಬ (<ಆರಂಭ) ಮೊದಲಾದ ಪದಗಳಲ್ಲಿ ಕಾಣಿಸುವ ಹಾಗೆ ಮಹಾಪ್ರಾಣಾಕ್ಷರಗಳು ಅಲ್ಪಪ್ರಾಣಾಕ್ಷರಗಳಾಗಿರುವುದು, ಅಂಕುಸ (<ಅಂಕುಶ), ಸಂಕರ (<ಶಂಕರ), ಪಸು (<ಪಶು), ನಿಮಿಸ (<ನಿಮಿಷ), ವೇಸ (<ವೇಷ) ಮೊದಲಾದವುಗಳಲ್ಲಿ ಕಾಣಿಸುವ ಹಾಗೆ ಶಕಾರ ಇಲ್ಲವೇ ಷಕಾರಗಳು ಸಕಾರ ಗಳಾಗಿರುವುದು, ಮತ್ತು ಜಂತ್ರ (<ಯಂತ್ರ), ಜವನಿಕೆ (<ಯವನಿಕೆ), ಜತಿ (<ಯತಿ), ಜಾತ್ರೆ (<ಯಾತ್ರೆ) ಮೊದಲಾದವುಗಳಲ್ಲಿ ಕಾಣಿಸುವ ಹಾಗೆ ಆದಿ ಯಕಾರ ಜಕಾರವಾಗಿರುವುದು ಹೆಚ್ಚು ಕಡಿಮೆ ಮೇಲಿನ ಪದಗಳ ಕೊನೆಯ ಸ್ವರದಲ್ಲಿ ಕಾಣಿಸುವ ಬದಲಾವಣೆಗಳ ಹಾಗೆಯೇ ಇದೆ. ಇಲ್ಲೂ ಪದಗಳ ಇತರ ಅಂಶಗಳೆಲ್ಲ ಸ್ವಲ್ಪವೂ ಬದಲಾಗದೆ ಹಾಗೆಯೇ ಉಳಿದಿರುವುದನ್ನು ಕಾಣಬಹುದು.

### ೪.೬.೪ ವಿಭಜನೆಯ ಮಹತ್ವ

ಹಳೆಗನ್ನಡ ವ್ಯಾಕರಣದ ಮಟ್ಟಿಗೆ ದೇಶ್ಯ ಪದಗಳಿಗೂ ತತ್ಸಮ ಹಾಗೂ ತದ್ಭವ ಪದಗಳಿಗೂ ನಡುವಿರುವ ವಿಭಜನೆಯೇ ಅತ್ಯಂತ ಮಹತ್ವದ ವಿಭಜನೆ. ತತ್ಸಮ ಮತ್ತು ತದ್ಭವ ಪದಗಳ ನಡುವಿರುವ ವಿಭಜನೆಗೆ ಹಳೆಗನ್ನಡ ವ್ಯಾಕರಣದಲ್ಲಿ ಅಂತಹ ಮಹತ್ವವಿಲ್ಲ. ಅವೆರಡೂ 'ಎರವಲು ಪದಗಳು' ಎಂಬ ಒಂದೇ ಗುಂಪಿನಲ್ಲಿ ಬರುತ್ತವೆ.

ಇದಲ್ಲದೆ, ಮೇಲೆ ಸೂಚಿಸಿದ ಹಾಗೆ ಈ ಎರವಲು ಪದಗಳನ್ನು ತತ್ಸಮ ಮತ್ತು ತದ್ಭವ ಎಂಬ ಎರಡು ಗುಂಪುಗಳಲ್ಲಿ ವಿಂಗಡಿಸುವುದಕ್ಕಿಂತಲೂ ಹಲವು ಗುಂಪುಗಳಲ್ಲಿ ವಿಂಗಡಿಸುವುದೇ ಹಳೆಗನ್ನಡದ ಮಟ್ಟಿಗೆ ಸರಿಯಾದ ಮಾರ್ಗ.

ಹಳೆಗನ್ನಡದಲ್ಲಿ ದೇಶ್ಯ ಪದಗಳನ್ನು ಎರವಲು (ತತ್ಸಮ ಮತ್ತು ತದ್ಭವ) ಪದಗಳಿಂದ ಪ್ರತ್ಯೇಕಿಸುವಂತಹ ಹಲವು ವ್ಯಾಕರಣ ನಿಯಮಗಳಿವೆ. ಉದಾಹರಣೆಗಾಗಿ, ಎರವಲು ಪದಗಳನ್ನು, ಅವು ತತ್ಸಮಗಳಿರಲಿ, ತದ್ಭವಗಳಿರಲಿ, ಕ್ರಿಯಾಪದಗಳ ಜಾಗದಲ್ಲಿ ಬಳಸಬೇಕಿದ್ದಲ್ಲಿ ಅವಕ್ಕೆ ಇಸು ಪ್ರತ್ಯಯವನ್ನು ಸೇರಿಸಬೇಕಾಗುತ್ತದೆ (ಅರ್ಚಿಸು, ನಿನ್ದಿಸು, ಪೂಜಿಸು, ಭಾವಿಸು, ಬಂಚಿಸು, ಬಣ್ಣಿಸು, ಸೈರಿಸು, ಪಜ್ಜಳಿಸು, ಇತ್ಯಾದಿ).

ಆದರೆ, ಪ್ರಾಕೃತದ ವ್ಯಾಕರಣಕ್ಕೆ ತತ್ಸಮ ಮತ್ತು ತದ್ಭವ ಪದಗಳ ನಡುವಿನ ವಿಭಜನೆಯೇ ಅತ್ಯಂತ ಮಹತ್ವದ ವಿಭಜನೆ. ತದ್ಭವ ಮತ್ತು ದೇಶಿ ಪದಗಳ ನಡುವಿನ ವಿಭಜನೆಗೆ ಆ ಭಾಷೆಯ ವ್ಯಾಕರಣದಲ್ಲಿ ಹೆಚ್ಚಿನ ಮಹತ್ವವಿಲ್ಲ. ಮೇಲೆ ಸೂಚಿಸಿದ ಹಾಗೆ, ಸಂಸ್ಕೃತ ಪದಗಳೊಂದಿಗೆ ಸಂಬಂಧವನ್ನು ತೋರಿಸಲು ಸಾಧ್ಯವಾಗದಿರುವಂತಹ ಪ್ರಾಕೃತ ಪದಗಳನ್ನು ದೇಶಿ ಪದಗಳೆಂದು ಪರಿಗಣಿಸಲಾಗಿದೆ; ಪ್ರಾಕೃತ ವ್ಯಾಕರಣದ ಮಟ್ಟಿಗೆ ಇವು ಯಾವ ವಿಷಯದಲ್ಲೂ ತದ್ಭವ ಪದಗಳಿಗಿಂತ ಭಿನ್ನವಾಗಿಲ್ಲ.

ಹಳೆಗನ್ನಡ ಮತ್ತು ಪ್ರಾಕೃತ ಭಾಷೆಗಳ ನಡುವೆ ಈ ರೀತಿ ತತ್ಸಮ–ತದ್ಭವ ಭೇದವನ್ನು ಬಳಸುವಲ್ಲಿ ಮೂಲಭೂತ ವ್ಯತ್ಯಾಸಗಳಿವೆ. ಇವನ್ನು ಗಮನಿಸದೆ, ಹಳೆಗನ್ನಡ ವೈಯಾಕರಣಿಗಳು ಪ್ರಾಕೃತ ಪದಗಳ ವಿಭಜನೆಯನ್ನು ಹಾಗೆಯೇ ಹಳೆಗನ್ನಡಕ್ಕೆ ಅಳವಡಿಸಲು ಪ್ರಯತ್ನಿಸಿದುದರಿಂದಾಗಿ, ಆ ಭಾಷೆಯ ನಿಜವಾದ ಸ್ವರೂಪವನ್ನು ವಿವರಿಸುವಲ್ಲಿ ಅವರು ಸೋತಿದ್ದಾರೆ.

### ೪.೭ ಸಾರಾಂಶ

ಹಳೆಗನ್ನಡದಲ್ಲಿ ನಾಮಪದ, ಕ್ರಿಯಾಪದ, ಮತ್ತು ಗುಣಪದಗಳೆಂಬುದಾಗಿ ಮೂರು ಮುಖ್ಯ ಪದವರ್ಗಗಳಲ್ಲಿ ಬರಬಲ್ಲ ಪದಗಳಿವೆ. ಆದರೆ, ಸಂಸ್ಕೃತದಲ್ಲಿ ನಾಮಪದ ಮತ್ತು ಕ್ರಿಯಾಪದಗಳೆಂಬ ಎರಡು ಮುಖ್ಯ ಪದವರ್ಗಗಳಲ್ಲಿ ಬರಬಲ್ಲ ಪದಗಳು ಮಾತ್ರ ಇವೆ. ಹಳೆಗನ್ನಡದ ಗುಣಪದಗಳಿಗೆ ಸಮಾನವಾಗಿರುವ ಪದಗಳು ಸಂಸ್ಕೃತದಲ್ಲಿ ನಾಮಪದಗಳಿಗಿಂತ ಭಿನ್ನವಾಗಿಲ್ಲ.

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವಿರುವ ಈ ಅತಿ ಮುಖ್ಯವಾದ ವ್ಯತ್ಯಾಸವನ್ನು ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳು ತಿಳಿದಿರಲಿಲ್ಲವಾದ ಕಾರಣ, ಅವರು ರಚಿಸಿದ ವ್ಯಾಕರಣಗಳಲ್ಲಿ ಹಲವಾರು ರೀತಿಯ ಸಮಸ್ಯೆಗಳು ಮತ್ತು ಗೊಂದಲಗಳು ಮೂಡಿಬಂದಿವೆ.

ಸರ್ವನಾಮಗಳ ಸ್ವರೂಪ ಮತ್ತು ಬಳಕೆಗಳಲ್ಲೂ ಈ ಎರಡು ಭಾಷೆಗಳ ನಡುವೆ ಹಲವು ವ್ಯತ್ಯಾಸಗಳಿದ್ದು, ಇವನ್ನೂ ಈ ವೈಯಾಕರಣಿಗಳು ವಿವರಿಸಿಲ್ಲ.

ಸಂಸ್ಕೃತದಿಂದ ಎರವಲಾಗಿ ಬಂದ ಪದಗಳನ್ನು ತತ್ಸಮ ಮತ್ತು ತದ್ಭವ ಪದಗಳೆಂಬುದಾಗಿ ವಿಭಜಿಸುವಲ್ಲೂ ಇವರು ಪ್ರಾಕೃತ ವ್ಯಾಕರಣಗಳನ್ನು ಅನುಸರಿ ಸಿದುದರಿಂದಾಗಿ, ಹಳೆಗನ್ನಡದ ನಿಜವಾದ ಸ್ವರೂಪವನ್ನು ವಿವರಿಸಲು ಶಕ್ತರಾಗಿಲ್ಲ.

## ಅಧ್ಯಾಯ ಐದು

# ಪದಗಳ ಒಳರಚನೆ

### ೫.೧ ಪೀಠಿಕೆ

ಹಳೆಗನ್ನಡದಲ್ಲಿ ಬಳಕೆಯಾಗುವ ಪದಗಳ ಒಳರಚನೆಯೆಂತಹದು ಎಂಬುದನ್ನು ತಿಳಿಯಲು ಪ್ರಯತ್ನಿಸುವ ಮೊದಲು, ಪದ ಮತ್ತು ಪದರೂಪಗಳ ನಡುವಿರುವ ವ್ಯತ್ಯಾಸವೆಂತಹದು ಎಂಬುದನ್ನು ತಿಳಿದುಕೊಳ್ಳುವ ಅವಶ್ಯಕತೆಯಿದೆ. ಪದಗಳ ಒಳರಚನೆಯಲ್ಲಿ ಬರುವ ಪ್ರತ್ಯಯಗಳೆಲ್ಲ ಅವುಗಳ ತಯಾರಿಕೆಗೆ ಸಂಬಂಧಿಸಿದವುಗಳು ಮತ್ತು ಪದರೂಪಗಳಲ್ಲಿ ಬರುವ ಪ್ರತ್ಯಯಗಳೆಲ್ಲ ಅವುಗಳ ಬಳಕೆಗೆ ಸಂಬಂಧಿಸಿದವುಗಳು.

ಉದಾಹರಣೆಗಾಗಿ, ಹಳೆಗನ್ನಡದಲ್ಲಿ ಕೆಯ್ ಎಂಬ ಪದಕ್ಕೆ ಕೆಯ್ಗಳ್, ಕೆಯ್ಯನ್, ಕೆಯ್ಯಿನ್, ಕೆಯ್ಗೆ, ಕೆಯ್ಯೊಳ್ ಮೊದಲಾದ ಪದರೂಪಗಳಿವೆ. ಇವೆಲ್ಲ ಕೆಯ್ ಎಂಬ ಒಂದೇ ಪದದ ಪದರೂಪಗಳು. ಇವುಗಳಲ್ಲಿ ಬರುವ ಗಳ್, ಅನ್, ಇನ್, ಗೆ, ಒಳ್ ಮೊದಲಾದ ಪ್ರತ್ಯಯಗಳು ಆ ಪದವನ್ನು ವಾಕ್ಯದ ಬೇರೆ ಬೇರೆ ಸನ್ನಿವೇಶಗಳಲ್ಲಿ ಬಳಸಬೇಕಾದಾಗ, ಅದಕ್ಕೆ ಬೇರೆ ಬೇರೆ ರೂಪಗಳನ್ನು ಕೊಡಬೇಕಾಗಿದೆಯಾದ ಕಾರಣ ಬಳಕೆಯಾಗುತ್ತವೆ.

ಕೆಯ್ತ 'ಕೆಲಸ', ಕೆಯ್ದು 'ಆಯುಧ', ಕೆಯ್ಕೆ 'ಮೋಸ', ಮೊದಲಾದ ಬೇರೆ ಕೆಲವು ಪದಗಳಲ್ಲೂ ಕೆಯ್ ಎಂಬುದು ಕಾಣಿಸುತ್ತದೆ; ಆದರೆ, ಇವು ಕೆಯ್ ಪದದ ಪದರೂಪಗಳಲ್ಲ; ಆ ಪದಕ್ಕೆ ತ, ದು, ಕೆ ಮೊದಲಾದ ಪ್ರತ್ಯಯಗಳನ್ನು ಸೇರಿಸಿ ತಯಾರಿಸಿರುವ, ಅದಕ್ಕಿಂತ ಭಿನ್ನವಾದ, ಪದಗಳು. ಹಾಗಾಗಿ, ಈ ಪದಗಳಲ್ಲಿ ಕಾಣಿಸುವ ಪ್ರತ್ಯಯಗಳನ್ನು ಅವುಗಳ ಒಳರಚನೆಗೆ ಸಂಬಂಧಿಸಿದ ಪ್ರತ್ಯಯಗಳೆಂದು ಪರಿಗಣಿಸಬೇಕಾಗುತ್ತದೆ.

ಇದೇ ರೀತಿಯಲ್ಲಿ, ಪದ ಮತ್ತು ಪದಕಂತೆಗಳ ನಡುವಿರುವ ವ್ಯತ್ಯಾಸವನ್ನೂ ಇಲ್ಲಿ ಗಮನಿಸುವುದು ಅವಶ್ಯ. ಪದಗಳ ಒಳರಚನೆಯಲ್ಲಿ ಒಂದಕ್ಕಿಂತ ಹೆಚ್ಚು ಪದಗಳು ಸೇರಿಕೊಂಡಿರಲು ಸಾಧ್ಯವಿದೆ, ಮತ್ತು ಪದಕಂತೆಗಳ ರಚನೆಯಲ್ಲೂ ಒಂದಕ್ಕಿಂತ ಹೆಚ್ಚು ಪದಗಳ ಬಳಕೆಯಾಗಿರುತ್ತದೆ; ಆದರೆ, ಒಂದು ಪದದ ಒಳರಚನೆಯಲ್ಲಿ ಕಾಣಿಸುವ ಪದಗಳು ಆ ಪದದ ತಯಾರಿಕೆಗೆ ಸಂಬಂಧಿಸಿದವು, ಮತ್ತು ಒಂದು ಪದಕಂತೆಯಲ್ಲಿ ಕಾಣಿಸುವ ಪದಗಳು ಆ ಪದಗಳ ಬಳಕೆಗೆ ಸಂಬಂಧಿಸಿದವು.

ಉದಾಹರಣೆಗಾಗಿ, ಎಳನೀರ್ 'ಸೀಯಾಳ' ಪದದಲ್ಲಿ ಎಳ ಮತ್ತು ನೀರ್ ಎಂಬ ಎರಡು ಪದಗಳು ಸೇರಿವೆ. ಅದರೆ ಎಳನೀರ್ ಎಂಬುದು ಎಳ ಮತ್ತು ನೀರ್ ಎಂಬ ಎರಡು ಪದಗಳಿಂದ ತೀರ ಭಿನ್ನವಾಗಿರುವ ಬೇರೊಂದು ಪದ. ಹಾಗಾಗಿ, ಇಲ್ಲಿ ಕಾಣಿಸುವ ಪದಗಳ ಸೇರಿಕೆ ಎಳನೀರ್ ಪದದ ಒಳರಚನೆಗೆ ಸಂಬಂಧಿಸಿದುದು. ಇದೇ ರೀತಿಯಲ್ಲಿ ಬೆಳ್ದಿಂಗಳ್, ಕರ್ಬೊನ್, ಆಲಿಕಲ್ ಮೊದಲಾದವುಗಳಲ್ಲೂ ಎರಡೆರಡು ಪದಗಳು ಸೇರಿದ್ದು, ಈ ಸೇರುವಿಕೆಯ ಮೂಲಕ ಅವೆರಡಕ್ಕಿಂತಲೂ ಭಿನ್ನವಾದ ಬೇರೆಯೇ ಪದಗಳ ಸೃಷ್ಟಿಯಾಗಿದೆ.

ಆದರೆ, ಎಳವಾಳೆ 'ಎಳೇ ಬಾಳೆಗಿಡ' ಎಂಬುದರಲ್ಲಿ ಎಳ ಮತ್ತು ಬಾಳೆ(ಟಿ) ಎಂಬ ಎರಡು ಪದಗಳ ಸೇರಿಕೆಯಿಂದ ಒಂದು ಪದಕಂತೆ ರಚಿತ ವಾಗಿದೆಯಲ್ಲದೆ, ಹೊಸದೊಂದು ಪದ ರಚಿತವಾಗಿಲ್ಲ. ಪೊಸವೂ 'ಹೊಸ ಹೂವು', ಪೇರಾನೆ 'ದೊಡ್ಡ ಆನೆ', ಪೆರ್ವೇಂಟೆ 'ದೊಡ್ಡ ಬೇಟೆ' ಮೊದಲಾದವುಗಳಲ್ಲೂ, ಇದೇ ರೀತಿಯಲ್ಲಿ, ಎರಡೆರಡು ಪದಗಳ ಸೇರಿಕೆಯಿಂದ ಪದಕಂತೆಗಳನ್ನು ರಚಿಸಲಾಗಿದೆಯಲ್ಲದೆ, ಹೊಸ ಪದಗಳ ಸೃಷ್ಟಿಯಾಗಿಲ್ಲ. ಇಲ್ಲಿ ಕಾಣಿಸುವ ಪದಗಳ ಸೇರಿಕೆ ಪದಗಳ ಬಳಕೆಗೆ ಸಂಬಂಧಿಸಿದುದಲ್ಲದೆ ಹೊಸ ಪದಗಳ ತಯಾರಿಕೆಗೆ ಇಲ್ಲವೇ ಸೃಷ್ಟಿಗೆ ಸಂಬಂಧಿಸಿದುದಲ್ಲ (ಹೆಚ್ಚಿನ ವಿವರಗಳಿಗೆ ಭಟ್ ೨೦೦೨ ನೋಡಿ).

ಪದ ಮತ್ತು ಪದರೂಪಗಳ ನಡುವಿರುವ ವ್ಯತ್ಯಾಸ, ಹಾಗೂ ಪದ ಮತ್ತು ಪದಕಂತೆಗಳ ನಡುವಿರುವ ವ್ಯತ್ಯಾಸ – ಇವೆರಡೂ ಮಾತಿನ ಬಳಕೆಯಲ್ಲಿ ಉಳಿದಿರುವಂತಹ ಭಾಷಾಪ್ರಭೇದಗಳಲ್ಲಿ ಮಾತ್ರ ಬಹಳ ಸ್ಪಷ್ಟವಾಗಿ ಕಾಣಿಸುತ್ತವೆ. ಮಾತಿನ ಬಳಕೆ ತಪ್ಪಿಹೋಗಿ ಬರಿಯ ಗ್ರಾಂಥಿಕ ಬಳಕೆಯಲ್ಲಿ ಮಾತ್ರವೇ ಉಳಿದಿರುವಂತಹ ಭಾಷಾಪ್ರಭೇದಗಳಲ್ಲಿ ಈ ಎರಡು ರೀತಿಯ ವ್ಯತ್ಯಾಸಗಳನ್ನು ಕಾಣುವುದು ಸ್ವಲ್ಪ ಕಷ್ಟ.

ಇದಕ್ಕೆ ಕಾರಣವೇನೆಂದರೆ, ಮಾತಿನ ಬಳಕೆಯಲ್ಲಿ ಉಳಿದಿರುವ ಭಾಷೆಯ ವ್ಯಾಕರಣ ಜನರ ಮಾತಿನ ಮೇಲೆ ಅವಲಂಬಿಸಿರುತ್ತದೆ. ದೊಡ್ಡವರು ಬಳಸುವ ಮಾತನ್ನು ಕೇಳುತ್ತಾ ಕೇಳುತ್ತಾ ಚಿಕ್ಕವರು ಮಾತು ಕಲಿಯುತ್ತಾರೆ. ಹೀಗೆ ಕಲಿಯುವಾಗ, ಆ ಭಾಷೆಯ ವ್ಯಾಕರಣ ಅವರ ಅರಿವಿಲ್ಲದಂತೆಯೇ ಅವರ ಮಿದುಳಿನಲ್ಲಿ ನೆಲೆಗೊಳ್ಳುತ್ತದೆ. ಭಾಷೆಯ ಅತಿ ಸೂಕ್ಷ್ಮವಾದ ವ್ಯಾಕರಣ ನಿಯಮಗಳೂ ಈ ರೀತಿ ಅರಿವಿಗೆ ಬಾರದ ರೂಪದಲ್ಲಿ ಅವರ ಸ್ವಾಧೀನವಾಗುತ್ತವೆ.

ಮಾತಿನ ಬಳಕೆ ತಪ್ಪಿಹೋಗಿ, ಬರೇ ಗ್ರಾಂಥಿಕವಾಗಿರುವ ಭಾಷೆಯನ್ನು ಸಾಮಾನ್ಯವಾಗಿ ಜನರು ತಮ್ಮ 'ಎರಡನೆಯ' ಭಾಷೆಯಾಗಿ ವಿದ್ಯಾಭ್ಯಾಸದ ಸಮಯದಲ್ಲಿ ಕಲಿಯುತ್ತಾರೆ, ಮತ್ತು ಇಂತಹ ಕಲಿಯುವಿಕೆಯಲ್ಲಿ ಆ ಭಾಷೆಯ ಮೇಲೆ ವಿದ್ವಾಂಸರು ರಚಿಸಿರುವ ವ್ಯಾಕರಣದ ಪುಸ್ತಕಗಳು ಮಹತ್ವದ ಪಾತ್ರವನ್ನು ವಹಿಸಬೇಕಾಗುತ್ತದೆ. ವ್ಯಾಕರಣ ಪುಸ್ತಕಗಳಲ್ಲಿರುವ ನಿಯಮಗಳನ್ನು ಅವರು ಮೊದಲಿಗೆ ಅರಿವಿಗೆ ಎಟಕುವ ರೂಪದಲ್ಲಿ ಕಲಿತು, ಅನಂತರ ಅವನ್ನು ಅರಿವಿಗೆ ಎಟಕದ ರೂಪಕ್ಕೆ ಪರಿವರ್ತಿಸಿಕೊಳ್ಳಬೇಕಾಗುತ್ತದೆ.

ಇಂತಹ ಅರಿವಿಗೆ ಎಟಕುವ ವ್ಯಾಕರಣಗಳಲ್ಲಿ (ವ್ಯಾಕರಣ ಪುಸ್ತಕಗಳಲ್ಲಿ) ಮೇಲೆ ವಿವರಿಸಿದಂತಹ ಭಾಷೆಯ ಸೂಕ್ಷ್ಮವಾದ ವ್ಯತ್ಯಾಸಗಳನ್ನು ನಿಯಮಗಳ ಮೂಲಕ ವರ್ಣಿಸಲು ಸಾಧ್ಯವಾಗಿರುವುದಿಲ್ಲ. ಹಾಗಾಗಿ, ವಿದ್ಯಾರ್ಥಿಗಳಿಗೆ ಅವನ್ನು ಕಲಿಯಲೂ ಸಾಧ್ಯವಾಗುವುದಿಲ್ಲ. ಇದರಿಂದಾಗಿ, ಮಾತಿನ ಬಳಕೆ ತಪ್ಪಿಹೋಗಿರುವ ಭಾಷೆಗಳಲ್ಲಿ ಇಂತಹ ಸೂಕ್ಷ್ಮವಾದ ವ್ಯತ್ಯಾಸಗಳು ಕ್ರಮೇಣ ಇಲ್ಲವಾಗುತ್ತವೆ.

ಪಾಣಿನಿಯ ಕಾಲದ ಅನಂತರ ಸಂಸ್ಕೃತ ಭಾಷೆ ವಿದ್ವಾಂಸರ ಬಳಕೆಯಲ್ಲಿ ಮಾತ್ರ ಉಳಿದು, ಸಾಮಾನ್ಯ ಜನರ ಮಾತಿನ ಬಳಕೆಯಿಂದ ದೂರವಾಗಿರುವ ಹಾಗೆ ಕಾಣಿಸುತ್ತದೆ. ಅಶೋಕನೇ ಮೊದಲಾದವರು ಸಾಮಾನ್ಯ ಜನರಿಗಾಗಿ ರಚಿಸಿದ ತಮ್ಮ ಶಾಸನಗಳಲ್ಲಿ ಸಂಸ್ಕೃತದ ಬದಲು ಪಾಲಿ, ಪ್ರಾಕೃತ ಮೊದಲಾದುವನ್ನು ಬಳಸಲು ಇದೇ ಕಾರಣವಿರಬೇಕು.

ಈ ರೀತಿ ಮಾತಿನ ಬಳಕೆ ತಪ್ಪಿರುವ ಕಾರಣ, ಸಂಸ್ಕೃತ ಪದಗಳ ಒಳರಚನೆಯಲ್ಲಿ ಪದ ಮತ್ತು ಪದರೂಪಗಳ ನಡುವಿರುವ ವ್ಯತ್ಯಾಸ, ಹಾಗೂ ಪದ ಮತ್ತು ಪದಕಂತೆಗಳ ನಡುವಿರುವ ವ್ಯತ್ಯಾಸ ಇವೆರಡೂ ಕ್ರಮೇಣ ಮಾಯವಾಗುತ್ತಾ ಬಂದಿವೆ. ಪಾಣಿನಿಗಿಂತ ಹಿಂದಿನ ವೇದಕಾಲದ ಸಂಸ್ಕೃತದಲ್ಲಿ ಈ ವ್ಯತ್ಯಾಸಗಳೆರಡೂ ಸ್ಪಷ್ಟವಾಗಿ ಕಾಣಿಸುತ್ತವೆ.

ಹಳೆಗನ್ನಡದಲ್ಲೂ ಪಂಪನೇ ಮೊದಲಾದ ಪ್ರಾಚೀನ ಕವಿಗಳ ಕಾಲದಲ್ಲಿ ಮಾತಿನ ಬಳಕೆ ತಪ್ಪಿಹೋಗಿರಲಿಲ್ಲ. ಆದರೆ, ಹನ್ನೆರಡು–ಹದಿಮೂರನೇ ಶತಮಾನಗಳ ಅನಂತರದ ಕಾಲದಲ್ಲಿ ಹಳೆಗನ್ನಡ ನಡುಗನ್ನಡವಾಗಿ ಬದಲಾಗಿತ್ತು. ಹಾಗಾಗಿ, ಇದಕ್ಕೆ ಮುಂದೆ ಹಳೆಗನ್ನಡವನ್ನು ಬಳಸಿದವರೆಲ್ಲ ಅದನ್ನು ಬರಿಯ ಗ್ರಾಂಥಿಕ ಭಾಷೆಯಾಗಿಯೇ ಕಲಿತು ಬಳಸುತ್ತಿದ್ದಿರಬೇಕು.

ಹಾಗಾಗಿ, ಹಳೆಗನ್ನಡದಲ್ಲೂ ಪಂಪನ ಕಾಲದಲ್ಲಿ ರಚಿತವಾದ ಗ್ರಂಥಗಳಲ್ಲಿ ಮೇಲಿನ ವ್ಯತ್ಯಾಸಗಳು ಸ್ಪಷ್ಟವಾಗಿ ಕಾಣಿಸುತ್ತವೆ, ಆದರೆ ಅವನ ಅನಂತರ ರಚಿತವಾದ ಗ್ರಂಥಗಳಲ್ಲಿ ಇವು ಅಸ್ಪಷ್ಟವಾಗುತ್ತಾ ಹೋಗುತ್ತವೆ.

ಪದಗಳ ಒಳರಚನೆಯನ್ನು ಪರಿಶೀಲಿಸುವ ಈ ಅಧ್ಯಾಯದಲ್ಲಿ ಪದ ಮತ್ತು ಪ್ರತ್ಯಯಗಳನ್ನು ಬಳಸಿ ಹೊಸ ಪದಗಳನ್ನು ತಯಾರಿಸುವುದಕ್ಕಾಗಿ ಭಾಷೆಯೊಂದರಲ್ಲಿ ಎಂತಹ ವಿಧಾನಗಳೆಲ್ಲ ಬಳಕೆಯಲ್ಲಿವೆ (ಇಲ್ಲವೇ ಬಳಕೆಯಲ್ಲಿದ್ದುವು) ಎಂಬುದನ್ನು ಪರಿಶೀಲಿಸಬೇಕಾಗಿದೆ, ಮತ್ತು ಇದಕ್ಕಾಗಿ, ಮೇಲೆ ಸೂಚಿಸಿದ ಹಾಗೆ, ಪದಗಳ ಒಳರಚನೆಯನ್ನು ಪದರೂಪಗಳ ರಚನೆಯಿಂದ, ಮತ್ತು ಪದಕಂತೆಗಳ ರಚನೆಯಿಂದ ಪ್ರತ್ಯೇಕಿಸಿಕೊಳ್ಳುವುದು ಅತ್ಯವಶ್ಯ.

ಈ ಎರಡು ವಿಷಯಗಳಲ್ಲೂ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಹಲವು ಮೂಲಭೂತವಾದ ವ್ಯತ್ಯಾಸಗಳಿವೆ. ಹಳೆಗನ್ನಡದ ವೈಯ್ಯಾಕರಣಿಗಳು ಸಂಸ್ಕೃತ ವ್ಯಾಕರಣವನ್ನೇ ಮಾದರಿಯಾಗಿ ಇರಿಸಿಕೊಂಡುದರಿಂದಾಗಿ, ಈ ವ್ಯತ್ಯಾಸಗಳನ್ನು ಗಮನಿಸಲು ಅವರಿಗೆ ಸಾಧ್ಯವಾಗಲಿಲ್ಲ. ಇದರಿಂದಾಗಿ, ಅವರ ವ್ಯಾಕರಣಗಳಲ್ಲಿ ಹಲವು ರೀತಿಯ ಗೊಂದಲಗಳು ಕಾಣಿಸಿಕೊಂಡಿವೆ ಎಂಬುದನ್ನು ಕೆಳಗಿನ ಪರಿಶೀಲನೆ ಸ್ಪಷ್ಟಪಡಿಸುತ್ತದೆ.

## ೫.೨ ಪ್ರತ್ಯಯಗಳ ಬಳಕೆ

ಹೊಸ ಪದಗಳನ್ನು ತಯಾರಿಸುವುದಕ್ಕಾಗಿ ಈ ಎರಡು ಭಾಷೆಗಳಲ್ಲೂ ಮುಖ್ಯವಾಗಿ (೧) ಪದಗಳಿಗೆ ಪ್ರತ್ಯಯಗಳನ್ನು ಸೇರಿಸುವುದು, ಮತ್ತು (೨) ಎರಡು (ಅಥವಾ ಹೆಚ್ಚು) ಪದಗಳನ್ನು ಒಟ್ಟು ಸೇರಿಸುವುದು ಎಂಬ ಎರಡು ವಿಧಾನಗಳನ್ನು ಬಳಸಲಾಗುತ್ತದೆ. ಇವುಗಳಲ್ಲಿ ಮೊದಲನೆಯ ವಿಧಾನವನ್ನು ಈ (೫.೨)ನೇ ವಿಭಾಗದಲ್ಲಿ, ಮತ್ತು ಎರಡನೆಯ ವಿಧಾನವನ್ನು ಮುಂದಿನ (೫.೩)ನೇ ವಿಭಾಗದಲ್ಲಿ ಪರಿಶೀಲಿಸಲಾಗುತ್ತದೆ.

ಪ್ರತ್ಯಯಗಳನ್ನು ಬಳಸುವುದರ ಮೂಲಕ ಹೊಸ ಪದಗಳನ್ನು ತಯಾರಿಸುವಲ್ಲಿ ಹಳೆಗನ್ನಡ ಮತ್ತು ಸಂಸ್ಕೃತಗಳ ನಡುವೆ ಹಲವು ವ್ಯತ್ಯಾಸಗಳಿವೆ.

(೧) ಪ್ರತ್ಯಯಗಳನ್ನು ಸೇರಿಸಿ ತಯಾರಿಸಿದ ಸಂಸ್ಕೃತ ಪದಗಳಲ್ಲಿ ಹೆಚ್ಚಿನವಕ್ಕೂ ಮೂಲದಲ್ಲಿ ಕ್ರಿಯಾಧಾತುಗಳಿವೆ. ಕೆಲವು ವೈಯಾಕರಣಿಗಳ ಅಭಿಪ್ರಾಯದಂತೆ, ಸಂಸ್ಕೃತದ ಎಲ್ಲಾ ಪದಗಳಲ್ಲೂ ಈ ರೀತಿ ಮೂಲದಲ್ಲಿ ಕ್ರಿಯಾಧಾತುಗಳಿವೆಯೆಂದು ಸಾಧಿಸಿ ತೋರಿಸಲು ಸಾಧ್ಯವಿದೆ. ಈ ಕಾರಣಕ್ಕಾಗಿ, ಸಂಸ್ಕೃತ ವ್ಯಾಕರಣದಲ್ಲಿ ಧಾತು ಪದವನ್ನು 'ಕ್ರಿಯಾಧಾತು' ಎಂಬ ಅರ್ಥದಲ್ಲಿ ಬಳಸಲು ಸಾಧ್ಯವಾಗಿದೆ.

ಹಳೆಗನ್ನಡದಲ್ಲೂ ಹಲವು ನಾಮಪದ ಮತ್ತು ಗುಣಪದಗಳನ್ನು ಕ್ರಿಯಾಪದಗಳಿಂದ ಸಾಧಿಸಲಾಗಿದೆಯೇನೋ ನಿಜ. ಆದರೆ, ಆ ರೀತಿ ಸಾಧಿಸಿರದಂತಹ ಸಾಕಷ್ಟು ನಾಮಪದ ಮತ್ತು ಗುಣಪದಗಳು ಹಳೆಗನ್ನಡದಲ್ಲಿವೆ. ಹಾಗಾಗಿ, ಹಳೆಗನ್ನಡ ವ್ಯಾಕರಣದಲ್ಲಿ ಧಾತು ಪದವನ್ನು ನಾಮಧಾತು, ಕ್ರಿಯಾಧಾತು, ಮತ್ತು ಗುಣಧಾತು ಎಂಬುದಾಗಿ ಮೂರು ಸಂದರ್ಭಗಳಲ್ಲಿ ಬಳಸುವ

ಅವಶ್ಯಕತೆಯಿದೆ. ಸಂಸ್ಕೃತದ ಹಾಗೆ, ಕ್ರಿಯಾಧಾತು ಎಂಬ ಒಂದೇ ಅರ್ಥದಲ್ಲಿ ಆ ಪದವನ್ನು ಬಳಸಲು ಸಾಧ್ಯವಿಲ್ಲ.

ಉದಾಹರಣೆಗಾಗಿ, ಹಳೆಗನ್ನಡದ ಪೊನ್, ಕೂಸು, ಉಪ್ಪು, ತಲೆ, ಪಲ್, ಪುಲ್, ಪಾಲ್, ಮೊದಲಾದ ಹಲವಾರು ನಾಮಪದಗಳ ಮೂಲದಲ್ಲಿ 'ನಾಮಧಾತು'ಗಳಿವೆಯೆಂದು ಹೇಳಬೇಕಾಗುತ್ತದೆ, ಮತ್ತು ಪೊಸ, ಪಟಿ, ಕೆಮ್, ಮೆಲ್, ಎಳ ಮೊದಲಾದ ಹಲವಾರು ಗುಣಪದಗಳ ಮೂಲದಲ್ಲಿ ಗುಣಧಾತುಗಳಿವೆಯೆಂದು ಹೇಳಬೇಕಾಗುತ್ತದೆ. ಈ ಎರಡು ರೀತಿಯ ಪದಗಳನ್ನೂ ಕ್ರಿಯಾಧಾತುಗಳಿಂದ ಸಾಧಿಸಲು ಸಾಧ್ಯವಾಗದು.

(೨) ಸಂಸ್ಕೃತದಲ್ಲಿ ಎಲ್ಲಾ ನಾಮಪದಗಳನ್ನೂ ಕ್ರಿಯಾಧಾತುಗಳಿಂದ ರಚಿಸಲಾಗಿದೆಯಾದ ಕಾರಣ, ಅದರಲ್ಲಿ ಪ್ರತ್ಯಯಗಳ ಬಳಕೆಯಿಂದ ತಯಾರಾಗಿರುವ ನಾಮಪದಗಳನ್ನು ಕ್ರಿಯಾಪದಗಳಿಗೆ ಒಂದು ಪ್ರತ್ಯಯವನ್ನು ಸೇರಿಸಿ ತಯಾರಿಸಿದ 'ಕೃದಂತ'ಗಳೆಂದು, ಮತ್ತು ಅಂತಹ ಕೃದಂತಗಳಿಗೆ ಒಂದು ಅಥವಾ ಜಾಸ್ತಿ ಪ್ರತ್ಯಯಗಳನ್ನು ಸೇರಿಸಿ ತಯಾರಿಸಿದ 'ತದ್ಧಿತಾಂತ'ಗಳೆಂದು ವಿಂಗಡಿಸಿ ಹೇಳಲು ಸಾಧ್ಯವಾಗಿದೆ.

ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಕ್ರಿಯಾಪದಗಳ ಕೃದಂತ ಮತ್ತು ತದ್ಧಿತಾಂತ ರೂಪಗಳನ್ನು ಗಮನಿಸಬಹುದು.

| ಧಾತು | ಕೃದಂತ | ತದ್ಧಿತಾಂತ |
|---|---|---|
| ಕೃ | ಕರ್ತೃ | ಕರ್ತೃತ್ವ |
| ಮನ್ | ಮತಿ | ಮತಿಮತ್ |
| ಜಿ | ಜಯ | ಜಯ್ಯ |
| ಶುಚ್ | ಶುಚಿ | ಶೌಚ |
| ಪೃಥ್ | ಪೃಥು | ಪಾರ್ಥಿವ |
| ದಿವ್ | ದೇವ | ದೈವ |
| ಬುಧ್ | ಬುದ್ಧಿ | ಬುದ್ಧಿಮತ್ |
| ಜ್ಞಾ | ಜ್ಞಾನ | ಜ್ಞಾನಿನ್ |
| ವಚ್ | ವಾಚ್ | ವಾಗ್ಮಿನ್ |

ಆದರೆ, ಹಳೆಗನ್ನಡದಲ್ಲಿ ನಾಮಪದಗಳನ್ನು ಕ್ರಿಯಾಧಾತುಗಳಿಂದ (ಮಾಡು–ಮಾಟ್ಕೆ, ಒಲ್–ಒಲವು, ಆಡು–ಆಟ) ಮಾತ್ರವಲ್ಲದೆ, ನಾಮಧಾತುಗಳಿಂದ (ಮಾತು–ಮಾತಾಳಿ, ಪಡೆ–ಪಡೆವಳ, ಕೂಸು–ಕೂಸುತನ), ಮತ್ತು ಗುಣಧಾತುಗಳಿಂದಲೂ (ನಲ್–ನಲ್ಮೆ, ಬಿಳಿ–ಬಿಳಿಕ, ತಣ್–ತಣ್ಪು) ತಯಾರಿಸಿರಲು ಸಾಧ್ಯವಿದೆ.

ಇದಲ್ಲದೆ, ಆಂತರಿಕ ರಚನೆಯಿರುವ ಹಳೆಗನ್ನಡದ ಪದಗಳಲ್ಲಿ ಒಂದಕ್ಕಿಂತ ಹೆಚ್ಚು ಪ್ರತ್ಯಯಗಳು ಬಂದಿರುವುದು ಬಹಳ ಅಪರೂಪ. ಹಾಗಾಗಿ, ಹಳೆಗನ್ನಡದ ಪದರಚನೆಯನ್ನು ವರ್ಣಿಸುವಲ್ಲಿ ಸಂಸ್ಕೃತದ ಕೃದಂತ–ತದ್ಧಿತಾಂತ ವಿಭಜನೆ ಅನುಕೂಲವಲ್ಲ (೬.೧.೨ ನೋಡಿ).

(೩) ಸಂಸ್ಕೃತದಲ್ಲಿ ಪದಗಳನ್ನು ರಚಿಸುವುದಕ್ಕಾಗಿ ಬಳಕೆಯಾಗುವ ಪ್ರತ್ಯಯಗಳನ್ನು ಪದಗಳ ಮೊದಲೂ ಸೇರಿಸಬಹುದು (ಅ–ನ್ಯಾಯ, ನಿರ್–ದಯೆ, ವಿ–ಜ್ಞಾನ), ಅನಂತರವೂ

ಸೇರಿಸಬಹುದು (ಕಾವ್-ಯ, ಚೋರ್-ಅ, ಬಾಲ-ಕಿ); ಆದರೆ, ಹಳೆಗನ್ನಡದಲ್ಲಿ ಇಂತಹ ಪ್ರತ್ಯಯಗಳನ್ನು ಪದಗಳ ಅನಂತರ ಮಾತ್ರ ಸೇರಿಸಲು ಸಾಧ್ಯ.

## ೫.೨.೧ ಪದಗಳು ಮತ್ತು ಪದರೂಪಗಳು

ಮೇಲೆ ಸೂಚಿಸಿದ ಹಾಗೆ, ಸಂಸ್ಕೃತ ವ್ಯಾಕರಣಗಳಲ್ಲಿ ಪ್ರತ್ಯಯಗಳ ಮೂಲಕ ರಚಿತವಾಗಿರುವ ನಾಮಪದಗಳನ್ನು ಕೃದಂತ ಮತ್ತು ತದ್ಧಿತಾಂತಗಳೆಂಬ ಎರಡು ವರ್ಗಗಳಲ್ಲಿ ವಿಂಗಡಿಸಲಾಗಿದೆ. ಕ್ರಿಯಾಧಾತುಗಳಿಗೆ ಒಂದು ಪ್ರತ್ಯಯವನ್ನು ಸೇರಿಸಿ ರಚಿಸಿದ ಪದಗಳು ಕೃದಂತಗಳು, ಮತ್ತು ಒಂದಕ್ಕಿಂತ ಜಾಸ್ತಿ ಪ್ರತ್ಯಯಗಳನ್ನು ಸೇರಿಸಿ ರಚಿಸಿದ ಪದಗಳು ತದ್ಧಿತಾಂತಗಳು ಎಂಬುದೇ ಈ ವಿಭಜನೆಯ ಹಿಂದೆ ಅಡಗಿರುವ ಮೂಲ ತತ್ವ. (ಪೂರ್ವಪ್ರತ್ಯಯಗಳ ಬಳಕೆಯನ್ನು ಈ ವಿಭಜನೆಯಲ್ಲಿ ಕಡೆಗಣಿಸಲಾಗಿದೆ).

ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳು ಸಂಸ್ಕೃತದ ಈ ವಿಭಜನೆಯನ್ನು ಹಳೆಗನ್ನಡಕ್ಕೂ ಅಳವಡಿಸಲು ಪ್ರಯತ್ನಿಸಿದ್ದಾರೆ; ಆದರೆ, ಹಳೆಗನ್ನಡದ ನಾಮಪದಗಳಲ್ಲಿ ಒಂದಕ್ಕಿಂತ ಜಾಸ್ತಿ ಪ್ರತ್ಯಯಗಳಿರುವುದು ಅಪರೂಪವಾದ ಕಾರಣ, ಈ ವಿಭಜನೆಯನ್ನು ಹಾಗೆಯೇ ಬಳಸುವುದು ಅಸಾಧ್ಯ.

ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಕ್ರಿಯಾಪದಗಳಿಗೆ ದ ಮತ್ತು ಪ (ವ) ಪ್ರತ್ಯಯಗಳನ್ನು ಸೇರಿಸಿ ರಚಿಸಿದ ನಲಿದ, ಕೊಟ್ಟ, ಬೇಡುವ, ಮಾಟ್ಪ ಮೊದಲಾದ ಪದಗಳನ್ನು ಕೃತ್(ಲಿಂಗ)ಗಳೆಂದು (ಸೂ. ೮೩), ಮತ್ತು ಗೆ, ಕೆ, ಮೆ, ಪಿ ಮೊದಲಾದುವನ್ನು ಸೇರಿಸಿ ರಚಿಸಿದ ಉಡುಗೆ, ತೆರಳ್ಕೆ, ಒಲ್ಮೆ, ನೋಂಪಿ, ಉನ್ನತಿಕೆ ಮೊದಲಾದ ಪದಗಳನ್ನು ತದ್ಧಿತ(ಲಿಂಗ)ಗಳೆಂದು (ಸೂ. ೨೨೨) ವರ್ಣಿಸಲಾಗಿದೆ.

ಇದಲ್ಲದೆ, ಇಕ, ಇಚ, ಕ, ಗ, ಇತಿ ಮೊದಲಾದ ಬೇರೆ ಹಲವು ಪ್ರತ್ಯಯಗಳನ್ನು ನಾಮಪದ, ಕ್ರಿಯಾಪದ, ಇಲ್ಲವೇ ಗುಣಪದಗಳಿಗೆ ಸೇರಿಸಿ ರಚಿಸಿದ ತೋಂಟಿಗ, ಅಲರಿಚ, ಒಣಕ, ಕನ್ನಡಿಗಿತಿ, ಮಱವೆ, ಪೊಗಟ್ತೆ ಮೊದಲಾದ ಪದಗಳನ್ನೂ ತದ್ಧಿತ(ಲಿಂಗ)ಗಳೆಂಬ ಈ ಎರಡನೆಯ ವರ್ಗದಲ್ಲಿ (ಸೂ. ೨೦೮–೨೭) ಸೇರಿಸಿ ಹೇಳಲಾಗಿದೆ.

ಇಲ್ಲಿ ಒಂದು ವಿಷಯವನ್ನು ಗಮನಿಸುವುದು ಅವಶ್ಯ. ಹಳೆಗನ್ನಡದ ಎಲ್ಲಾ ಕ್ರಿಯಾಪದಗಳಿಂದಲೂ ಮಾಡಿದ, ಮಾಡುವ (ಮಾಟ್ಪ) ಮತ್ತು ಮಾಡದ ಎಂಬಂತಹ ರೂಪಗಳನ್ನು ಸಾಧಿಸಲು ಸಾಧ್ಯವಿದೆ, ಮತ್ತು ಈ ರೀತಿ ಸಾಧಿಸಿದ ಕ್ರಿಯಾರೂಪಗಳ ಅರ್ಥವನ್ನೂ ನೇರವಾಗಿ ಆ ಕ್ರಿಯಾಪದಗಳ ಅರ್ಥದಿಂದಲೇನೇ ಪಡೆಯಲು ಸಾಧ್ಯವಿದೆ. ಹಾಗಾಗಿ, ಇವು ಕ್ರಿಯಾಪದಗಳ 'ಪದರೂಪ'ಗಳಲ್ಲದೆ ಅವಕ್ಕಿಂತ ಭಿನ್ನವಾದ 'ಪದ'ಗಳಲ್ಲ.

ಕೆ, ಪಿ, ಮೆ ಮೊದಲಾದ ತದ್ಧಿತ ಪ್ರತ್ಯಯಗಳನ್ನು ಕ್ರಿಯಾಪದಗಳಿಗೆ ಸೇರಿಸಿ ತೆರಳ್ಕೆ, ನೋಂಪಿ ಮೊದಲಾದವುಗಳ ಹಾಗಿರುವ ಕೆಲವೇ ಕೆಲವು ನಾಮಪದಗಳನ್ನು ಮಾತ್ರ ಸಾಧಿಸಲು ಸಾಧ್ಯವಿದೆ. ಇವು ಭಾಷೆಯಲ್ಲಿ ರೂಢಿಗೆ ಬಂದಿರುವ ಪದಗಳು. ಬೇರೆ ಕ್ರಿಯಾಪದಗಳಿಗೆ ಈ ಪ್ರತ್ಯಯಗಳನ್ನು ಸೇರಿಸಿ ಹೊಸ ಪದಗಳನ್ನು ತಯಾರಿಸಲು ಸಾಧ್ಯವಿದೆಯಾದರೂ, ಅವು ಭಾಷೆಯಲ್ಲಿ ರೂಢಿಗೆ ಬಂದ ಮೇಲೇನೇ ಆ ಭಾಷೆಯ ಪದಗಳಾಗಬಲ್ಲುವು. ಮಾಡಿದ, ಮಾಡುವ, ಕೊಟ್ಟ ಮೊದಲಾದವುಗಳ ಹಾಗಿರುವ ಪದರೂಪಗಳನ್ನು ಸಾಧಿಸುವಲ್ಲಿ ಕಾಣಿಸುವ ಸ್ವಾತ್ರಂತ್ರ್ಯ ತೆರಳ್ಕೆ, ನೋಂಪಿ ಮೊದಲಾದವುಗಳ ಹಾಗಿರುವ ಪದಗಳನ್ನು ಸಾಧಿಸುವಲ್ಲಿ ಕಾಣಿಸುವುದಿಲ್ಲ.

ಇದಲ್ಲದೆ, ಕೆ, ಪಿ, ಮೆ ಮೊದಲಾದ ತದ್ಧಿತ ಪ್ರತ್ಯಯಗಳಿಂದ ಸಿದ್ಧವಾದ ಪದಗಳ

ಅರ್ಥದಲ್ಲೂ ಸಾಕಷ್ಟು ವೈವಿಧ್ಯವಿದ್ದು, ಅದನ್ನು ನೇರವಾಗಿ ಮೂಲ ಪದದ ಅರ್ಥದಿಂದ ಪಡೆಯಲು ಸಾಧ್ಯವಾಗದು. ಉದಾಹರಣೆಗಾಗಿ, ಅಱು, ಇರ್, ಕಾಣ್, ಪೂಣ್, ಬೇಯ್ ಮೊದಲಾದ ಕ್ರಿಯಾಪದಗಳಿಗೆ ಕೆ ಪ್ರತ್ಯಯವನ್ನು ಸೇರಿಸಿ ತಯಾರಿಸಿದ ಅಱುಕೆ 'ಪ್ರಸಿದ್ಧಿ', ಇರ್ಕೆ 'ಮನೆ', ಕಾಣ್ಕೆ 'ಉಡುಗರೆ', ಪೂಣ್ಕೆ 'ವಾಗ್ದಾನ' ಬೆಂಕೆ 'ಬೆಂಕಿ' ಮೊದಲಾದ ಪದಗಳಲ್ಲಿ ಆ ಕ್ರಿಯಾಪದಗಳಿಗಿಂತ ಬೇರೆ ಬೇರೆ ರೀತಿಯಲ್ಲಿ ಭಿನ್ನವಾಗಿರುವ ಅರ್ಥಗಳು ವ್ಯಕ್ತವಾಗಿರುವುದನ್ನು ಕಾಣಬಹುದು.

ಈ ಕಾರಣಕ್ಕಾಗಿ, ಇಂತಹ ಪದಗಳನ್ನು ಮತ್ತು ಅವುಗಳ ಅರ್ಥವನ್ನು ಅರ್ಥಕೋಶಗಳಲ್ಲಿ ಸೂಚಿಸುವ ಅವಶ್ಯಕತೆಯಿದೆ; ಆದರೆ, ಮಾಡಿದ, ಮಾಡುವ ಮೊದಲಾದ ಪದರೂಪಗಳನ್ನಾಗಲಿ, ಇಲ್ಲವೇ ಅವುಗಳ ಅರ್ಥವನ್ನಾಗಲಿ ಅರ್ಥಕೋಶಗಳಲ್ಲಿ ಸೂಚಿಸುವ ಅವಶ್ಯಕತೆಯಿಲ್ಲ.

ಮೇಲೆ ಸೂಚಿಸಿದ ಹಾಗೆ, ಕಾವ್ಯಗಳ ಕಾಲದ ಸಂಸ್ಕೃತದಲ್ಲಿ ಪದ ಮತ್ತು ಪದರೂಪಗಳ ನಡುವಿನ ಈ ವ್ಯತ್ಯಾಸ ಬಹಳ ಮಟ್ಟಿಗೆ ಇಲ್ಲವಾಗಿದೆ. ಹಾಗಾಗಿ, ಸಂಸ್ಕೃತದಲ್ಲಿ ಕೃತ, ಸ್ತುತ, ಯಾತ, ತುದಮಾನ ಮೊದಲಾದವುಗಳಿಗೂ ಕೃತ್ಯ, ಕರಣ, ಕೃತಿ, ಕರ್ಮನ್, ಕಾರಕ ಮೊದಲಾದ ಬೇರೆ ಹಲವಾರು ರೀತಿಯ ಪದಗಳಿಗೂ ನಡುವೆ ಹಳೆಗನ್ನಡದಲ್ಲಿ ಕಾಣಿಸುವಂತಹ ವ್ಯತ್ಯಾಸವಿಲ್ಲ. ಈ ಎರಡು ರೀತಿಯವನ್ನೂ ಎಲ್ಲಾ ರೀತಿಯ ಕ್ರಿಯಾಪದಗಳಿಂದಲೂ ರಚಿಸಲು ಸಾಧ್ಯವಿದೆ.

ಕೇಶಿರಾಜನು ಮಾಡಿರುವ ಕೃಲ್ಲಿಂಗ-ತದ್ಧಿತಲಿಂಗ ವಿಭಜನೆಗೆ ಹಳೆಗನ್ನಡದಲ್ಲಿದ್ದ ಪದರೂಪ ಮತ್ತು ಪದಗಳ ನಡುವಿನ ವ್ಯತ್ಯಾಸ ಮೂಲವಾಗಿರಲು ಸಾಧ್ಯವಿದೆ. ತೆರಳ್ಕೆ, ನೋಪಿ ಮೊದಲಾದ ಭಾವನಾಮಗಳನ್ನು ಆತನು ತದ್ಧಿತ ಪ್ರಕರಣದಲ್ಲಿ ಸೇರಿಸಿ ಹೇಳಲು ಅವು ಪದರೂಪಗಳಲ್ಲದಿರುವುದೇ ಕಾರಣವಿರಬಹುದು. ಅವನ ಕಾಲದಲ್ಲಿ ಹಳೆಗನ್ನಡ ಇಲ್ಲವೇ ಅದನ್ನೇ ಬಹಳ ಮಟ್ಟಿಗೆ ಹೋಲುವ ಕನ್ನಡದ ಪ್ರಭೇದವೊಂದು ಮಾತಿನ ಬಳಕೆಯಲ್ಲಿದ್ದಿರಬಹುದಾಗಿದ್ದು, ಅದರಲ್ಲಿ ಪದ ಮತ್ತು ಪದರೂಪಗಳ ನಡುವಿನ ಈ ವ್ಯತ್ಯಾಸ ಸ್ಪಷ್ಟವಾಗಿಯೇ ಉಳಿದಿದ್ದು, ಅದು ಆತನನ್ನು ಈ ರೀತಿ ವಿಭಜಿಸಲು ಪ್ರೇರೇಪಿಸಿರಬಹುದು.

ಆದರೆ, ಅನಂತರದ ವೈಯಾಕರಣಿಗಳು ಇದನ್ನು ಗಮನಿಸಿದ ಹಾಗಿಲ್ಲ. ಉದಾಹರಣೆಗಾಗಿ, ಕನ್ನಡ ಕೈಪಿಡಿಯಲ್ಲಿ (೧೯೭೧:೧೬-೧೯) ಕ್ರಿಯಾಪದಗಳಿಗೆ ಪ್ರತ್ಯಯಗಳನ್ನು ಸೇರಿಸಿ ರಚಿಸಿದ ಒಲವು, ಕಾಣ್ಕೆ, ಉಡುಗೆ, ನೆಗಳ್ತೆ ಮೊದಲಾದುವನ್ನು (ಮತ್ತು ನುಡಿದ, ನುಡಿವ ಮೊದಲಾದವುಗಳನ್ನು) ಕೃದಂತಗಳೆಂದು, ಮತ್ತು ನಾಮಪದಗಳಿಗೆ (ಮತ್ತು ಗುಣಪದಗಳಿಗೆ) ಪ್ರತ್ಯಯಗಳನ್ನು ಸೇರಿಸಿ ರಚಿಸಿದ ಪೂವಡಿಗ, ಬಿಳಿಕ, ಮಾತುಗ, ಪಡೆವಳ, ಮಡಿವಳ ಮೊದಲಾದವುಗಳನ್ನು ತದ್ಧಿತಾಂತಗಳೆಂದು ಪರಿಗಣಿಸಲಾಗಿದೆ.

ಕೇಶಿರಾಜನು ಉಡುಕಂ, ಮಡಿಕೆ, ಆಟಂ, ಒಲ್ಮೆ ಮೊದಲಾದ ಭಾವನಾಮಗಳನ್ನು ತದ್ಧಿತ ಪ್ರಕರಣದಲ್ಲಿ ಪ್ರಸ್ತಾಪಿಸುವ ಬದಲು ಆಖ್ಯಾತ ಪ್ರಕರಣದಲ್ಲಿ ಪ್ರಸ್ತಾಪಿಸಿದ್ದರೆ ಹೆಚ್ಚು ತೃಪ್ತಿಕರವೆನಿಸುತ್ತಿದ್ದಿತು ಎಂಬುದಾಗಿ ವೆಂಕಟಾಚಲ ಶಾಸ್ತ್ರಿಗಳು ಹೇಳಿರುವುದು (೧೯೯೪:೧೦೩) ಬಹುಶಃ ಕೃದಂತ ಪದಕ್ಕೆ ಕೊಟ್ಟಿದ್ದ ಈ ಎರಡನೆಯ ಅರ್ಥದ ಪ್ರಭಾವದಿಂದಿರಬಹುದು.

ಸಂಸ್ಕೃತದಲ್ಲಿ ಹೆಚ್ಚು ಕಡಿಮೆ ಎಲ್ಲಾ ನಾಮಪದಗಳಿಗೂ ಮೂಲದಲ್ಲಿ ಕ್ರಿಯಾಪದವೊಂದಿದೆಯಾದ ಕಾರಣ, ಒಂದಕ್ಕಿಂತ ಜಾಸ್ತಿ ಪ್ರತ್ಯಯಗಳನ್ನು ಸೇರಿಸಿ ತಯಾರಿಸಿದ ತದ್ಧಿತ ಪದಗಳನ್ನೆಲ್ಲ ನಾಮಪದಕ್ಕೆ ಪ್ರತ್ಯಯ ಸೇರಿಸಿ ತಯಾರಿಸಿದವುಗಳೆಂದು ಹೇಳಲು ಸಾಧ್ಯವಿದೆ. ಹಾಗಾಗಿ, ಮೇಲೆ ವಿವರಿಸಿದ ಕನ್ನಡ ಕೈಪಿಡಿಯ ವಿಭಜನೆ ಸಂಸ್ಕೃತ ವ್ಯಾಕರಣವನ್ನು ಸರಿಯಾಗಿ ಅನುಸರಿಸಿದೆಯೆಂದು ಹೇಳಬಹುದು.

ಆದರೆ, ಹಳೆಗನ್ನಡಕ್ಕೆ ಅವಶ್ಯವಾಗಿರುವ ಪದ ಮತ್ತು ಪದರೂಪಗಳ ನಡುವಿನ ವ್ಯತ್ಯಾಸವನ್ನು ಈ ವಿಭಜನೆ ಕಡೆಗಣಿಸುತ್ತದೆ. ಹಾಗಾಗಿ, ಹಳೆಗನ್ನಡದ ಮಟ್ಟಿಗೆ ಇದು ತೃಪ್ತಿಕರವಾದ ವಿಭಜನೆಯಲ್ಲ.

## ೫.೨.೨ ಪದವರ್ಗಗಳಲ್ಲಿ ವೈವಿಧ್ಯ

ಪ್ರತ್ಯಯಗಳನ್ನು ಬಳಸಿ ರಚಿಸಿದ ಸಂಸ್ಕೃತದ ನಾಮಪದಗಳಲ್ಲಿ ಹೆಚ್ಚು ಕಡಿಮೆ ಎಲ್ಲವನ್ನೂ ಕ್ರಿಯಾಧಾತುಗಳಿಂದಲೇನೇ ಸಾಧಿಸಲು ಸಾಧ್ಯವಿದೆ. ಹಾಗಾಗಿ, ಮೇಲೆ ಸೂಚಿಸಿದಂತಹ ಕೃದಂತ–ತದ್ಧಿತಾಂತ ವಿಭಜನೆ ಸಂಸ್ಕೃತ ಭಾಷೆಗೆ ಉಚಿತವಾಗಿದೆ. ಕ್ರಿಯಾಧಾತುವಿಗೆ ಒಂದು ಪ್ರತ್ಯಯವನ್ನು ಸೇರಿಸಿ ರಚಿಸಿದ ಪದಗಳೆಲ್ಲವೂ ನಾಮಪದಗಳು (ಕೃದಂತಗಳು), ಮತ್ತು ಒಂದಕ್ಕಿಂತ ಜಾಸ್ತಿ ಪ್ರತ್ಯಯಗಳನ್ನು ಸೇರಿಸಿ ರಚಿಸಿದ ಪದಗಳೆಲ್ಲವೂ ಅಂತಹ ನಾಮಪದಗಳಿಂದ ರಚಿತವಾದವುಗಳು (ತದ್ಧಿತಾಂತಗಳು) ಎಂಬುದಾಗಿ ಅದರ ಪದಗಳನ್ನು ವಿಭಜಿಸಲು ಸಾಧ್ಯವಿದೆ.

ಆದರೆ, ಹಳೆಗನ್ನಡದ ನಾಮಪದಗಳನ್ನು ಈ ರೀತಿ ಕ್ರಿಯಾಧಾತುಗಳಿಂದ ಮಾತ್ರವಲ್ಲದೆ, ನಾಮಧಾತು ಮತ್ತು ಗುಣಧಾತುಗಳಿಂದಲೂ ಸಾಧಿಸಲು ಸಾಧ್ಯವಿದೆ. ಹಾಗಾಗಿ, ಅವುಗಳ ಒಳರಚನೆಯನ್ನು ವರ್ಣಿಸುವಲ್ಲಿ ಮೇಲಿನ ಕೃದಂತ–ತದ್ಧಿತಾಂತ ವಿಭಜನೆ ಪ್ರಯೋಜನಕ್ಕೆ ಬರುವುದಿಲ್ಲ. ಅದಕ್ಕಿಂತಲೂ ಈ ಪದಗಳಲ್ಲಿ ಬಳಕೆಯಾಗಿರುವ ಧಾತುಗಳ (ಇಲ್ಲವೇ ಪದಗಳ) ವರ್ಗವನ್ನು ಆಧಾರವಾಗಿರಿಸಿಕೊಂಡಲ್ಲಿ ಹಳೆಗನ್ನಡಕ್ಕೊಂದು ಉತ್ತಮವಾದ ಪದಗಳ ವಿಭಜನೆ ಸಿದ್ಧವಾಗುತ್ತದೆ.

(೧) ಕ್ರಿಯಾಪದಗಳಿಂದ ತಯಾರಾದ ನಾಮಪದಗಳು: ಹಳೆಗನ್ನಡದ ಕ್ರಿಯಾಪದಗಳಿಗೆ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ಹಲವು ರೀತಿಯ ನಾಮಪದಗಳನ್ನು ಸಿದ್ಧಪಡಿಸಲಾಗಿದೆ. ಉದಾಹರಣೆಗಾಗಿ, ಅಟ್ಕೆ ಉಣ್ಕೆ, ಪೊಗಟ್ಕೆ, ಪೋಲ್ಕೆ ಮೊದಲಾದ ನಾಮಪದಗಳನ್ನು ಅಟ್ 'ಅಳು', ಉಣ್, ಪೊಗಳ್, ಪೋಲ್ ಮೊದಲಾದ ಕ್ರಿಯಾಪದಗಳಿಗೆ ಕೆ ಪ್ರತ್ಯಯವನ್ನು ಸೇರಿಸುವುದರ ಮೂಲಕ ತಯಾರಿಸಲಾಗಿದೆ, ಮತ್ತು ಕೂರ್ಪು, ಕಾಪು, ಮೇಪು, ಪಡೆಪು ಮೊದಲಾದ ನಾಮಪದಗಳನ್ನು ಕೂರ್, ಕಾ (ಕಾಯ್), ಮೇ (ಮೇಯ್), ಪಡೆ ಮೊದಲಾದ ಕ್ರಿಯಾಪದಗಳಿಗೆ ಪು ಪ್ರತ್ಯಯವನ್ನು ಸೇರಿಸುವುದರ ಮೂಲಕ ತಯಾರಿಸಲಾಗಿದೆ.

ಇದಲ್ಲದೆ, ಓದು, ತಡೆ, ಸೊರ್ಕು ಮೊದಲಾದ ಬೇರೆ ಕೆಲವು ಕ್ರಿಯಾಪದಗಳು ಯಾವ ಪ್ರತ್ಯಯವನ್ನೂ ಸೇರಿಸದೆ ಹಾಗೆಯೇ ಹಳೆಗನ್ನಡದಲ್ಲಿ ನಾಮಪದಗಳಾಗಿ ಬಳಕೆಯಾಗಬಲ್ಲುವು.

(೨) ನಾಮಪದಗಳಿಂದ ತಯಾರಾದ ನಾಮಪದಗಳು: ನಾಮಪದಗಳಿಗೆ ಪ್ರತ್ಯಯಗಳನ್ನು ಸೇರಿಸುವುದರ ಮೂಲಕವೂ ಅವಕ್ಕಿಂತ ಭಿನ್ನವಾದ ಹಲವು ರೀತಿಯ ನಾಮಪದಗಳನ್ನು ಸಿದ್ಧಪಡಿಸಲಾಗಿದೆ. ಉದಾಹರಣೆಗಾಗಿ, ತೋಂಟಿಗ, ಒಕ್ಕಲಿಗ, ಚಿಪ್ಪಿಗ, ಗಾಣಿಗ ಮೊದಲಾದ ನಾಮಪದಗಳನ್ನು ತೋಂಟ, ಒಕ್ಕಲ್, ಚಿಪ್ಪಿ, ಗಾಣ ಮೊದಲಾದ ನಾಮಪದಗಳಿಗೆ ಇಗ ಪ್ರತ್ಯಯವನ್ನು ಸೇರಿಸಿ ತಯಾರಿಸಲಾಗಿದೆ, ಮತ್ತು ಇಂತಹ ಸಾಧಿತ ನಾಮಪದಗಳಿಗೇನೇ ಇತಿ ಪ್ರತ್ಯಯವನ್ನು ಸೇರಿಸಿ ತೋಂಟಿಗಿತಿ, ಒಕ್ಕಲಿಗಿತಿ, ಚಿಪ್ಪಿಗಿತಿ, ಗಾಣಿಗಿತಿ ಮೊದಲಾದ ನಾಮಪದಗಳನ್ನು ತಯಾರಿಸಲಾಗಿದೆ.

(೩) ಗುಣಪದಗಳಿಂದ ತಯಾರಾದ ನಾಮಪದಗಳು: ಗುಣಪದಗಳಿಗೆ ಪ್ರತ್ಯಯಗಳನ್ನು ಸೇರಿಸುವುದರ ಮೂಲಕವೂ ಹಳೆಗನ್ನಡದಲ್ಲಿ ಹಲವು ರೀತಿಯ ನಾಮಪದಗಳನ್ನು ಸಿದ್ಧಪಡಿಸಲಾಗಿದೆ. ಉದಾಹರಣೆಗಾಗಿ, ಇಂಪು, ಕರ್ಪು, ಕೆಂಪು, ತೆಳ್ಪು ಮೊದಲಾದ ನಾಮಪದಗಳನ್ನು ಇನ್, ಕರ್,

ಕೆಂ, ತೆಳ್ ಗುಣಪದಗಳಿಗೆ ಪು ಪ್ರತ್ಯಯವನ್ನು ಸೇರಿಸುವುದರ ಮೂಲಕ ತಯಾರಿಸಲಾಗಿದೆ, ಮತ್ತು ನಲ್ಮೆ, ಪೊಲ್ಲಮೆ, ಬಲ್ಮೆ ಮೊದಲಾದ ನಾಮಪದಗಳನ್ನು ನಲ್, ಪೊಲ್ಲ, ಬಲ್ ಗುಣಪದಗಳಿಗೆ ಮೆ ಪ್ರತ್ಯಯವನ್ನು ಸೇರಿಸಿ ತಯಾರಿಸಲಾಗಿದೆ.

### ೫.೨.೩ ನಾಮಪದಗಳು ಮತ್ತು ನಾಮರೂಪಗಳು

ಈ ರೀತಿ ನಾಮಪದ, ಕ್ರಿಯಾಪದ, ಇಲ್ಲವೇ ಗುಣಪದಗಳಿಗೆ ಪ್ರತ್ಯಯಗಳನ್ನು ಸೇರಿಸಿ ಅವಕ್ಕಿಂತ ತೀರ ಭಿನ್ನವಾದ (ನಾಮ)ಪದಗಳನ್ನು ತಯಾರಿಸುವುದಕ್ಕೂ, ನಾಮಪದ, ಕ್ರಿಯಾಪದ, ಇಲ್ಲವೇ ಗುಣಪದಗಳನ್ನು ಬೇರೆ ಬೇರೆ ಸನ್ನಿವೇಶಗಳಲ್ಲಿ ಬಳಸುವುದಕ್ಕಾಗಿ ಪ್ರತ್ಯಯಗಳನ್ನು ಸೇರಿಸಿ ಪದರೂಪಗಳನ್ನು ತಯಾರಿಸುವುದಕ್ಕೂ ನಡುವೆ ವ್ಯತ್ಯಾಸವಿದೆ.

ಉದಾಹರಣೆಗಾಗಿ, ನಲ್, ಅಸಿ, ಇನಿ, ಪಿರಿ ಮೊದಲಾದ ಗುಣಪದಗಳಿಗೆ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸಿ ಪದರೂಪಗಳನ್ನು ತಯಾರಿಸಲು ಸಾಧ್ಯವಿದೆ ಮತ್ತು ಇವನ್ನು ನಾಮಪದಗಳ ಜಾಗದಲ್ಲಿ ಬಳಸಲು ಸಾಧ್ಯವಿದೆ.

| | |
|---|---|
| ಪಿರಿಯನ್ | ಪಿರಿಯರ್ |
| ಪಿರಿಯಳ್ | |
| ಪಿರಿದು | ಪಿರಿಯವು |

ಇದೇ ರೀತಿಯಲ್ಲಿ, ಕ್ರಿಯಾಪದಗಳ ಸಂಬಂಧಿಸುವ ರೂಪಗಳಿಗೂ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸಿ, ಅವನ್ನು ನಾಮಪದಗಳ ಜಾಗದಲ್ಲಿ ಬಳಸಲು ಸಾಧ್ಯವಿದೆ.

| | |
|---|---|
| ಕಂಡನ್ | ಕಂಡರ್ |
| ಕಂಡಳ್ | |
| ಕಂಡುದು | ಕಂಡುವು |

ಇವೂ ಕೂಡ ಕ್ರಿಯಾಪದಗಳ ಪದರೂಪಗಳಲ್ಲದೆ, ಅವುಗಳಿಂದ ತಯಾರಾಗಿರುವ ನಾಮಪದಗಳಲ್ಲ. ಯಾಕೆಂದರೆ, ಎಲ್ಲಾ ರೀತಿಯ ಸಂಬಂಧಿಸುವ ರೂಪಗಳಿಗೂ ಈ ರೀತಿ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸಿ ಬಳಸಲು ಸಾಧ್ಯವಿದೆ, ಮತ್ತು ಅವುಗಳ ಅರ್ಥವನ್ನು ನೇರವಾಗಿ ಈ ರಚನೆಯ ಅಧಾರದ ಮೇಲೆ ಸಾಧಿಸಲು ಸಾಧ್ಯವಿದೆ.

ನಾಮಪದಗಳ ಸಂಬಂಧಿಸುವ ರೂಪಗಳಿಗೂ ಇದೇ ರೀತಿಯಲ್ಲಿ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ, ಅವನ್ನು ನಾಮಪದಗಳ ಜಾಗದಲ್ಲಿ (ಎಂದರೆ ವಿಭಕ್ತಿಪ್ರತ್ಯಯಗಳೊಂದಿಗೆ) ಬಳಸಲು ಸಾಧ್ಯವಿದೆ. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ಬಳಕೆಗಳನ್ನು ಗಮನಿಸಬಹುದು.

(೧ಕ) ಈತಂ ಬರ್ದಿನನ್ (೪.೪೪)
‘ಇವನು ಅತಿಥಿ (ಆತಿಥ್ಯದವನು)’

(೧ಖ) ಮಿಱುಗುವ ಚೆಂಬೊನ್ನ ರಥದನ್ ಅಶ್ವತ್ಥಾಮಂ (೧೦.೫೭)
‘ಹೊಳೆಯುವ ಚಿನ್ನದ ರಥದವನು ಅಶ್ವತ್ಥಾಮ’

(೧ಕ)ದಲ್ಲಿ ಬಿರ್ದು 'ಅತಿಥಿ' ನಾಮಪದದ ಬಿರ್ದಿನ ಎಂಬ ಸಂಬಂಧಿಸುವ ರೂಪಕ್ಕೆ ಅನ್ ಪ್ರತ್ಯಯವನ್ನು ಸೇರಿಸಿ ಬಿರ್ದಿನನ್ ನಾಮರೂಪವನ್ನು ತಯಾರಿಸಲಾಗಿದೆ, ಮತ್ತು (೧ಖ)ದಲ್ಲಿ ರಥದ ಎಂಬ ಇನ್ನೊಂದು ನಾಮಪದದ ಸಂಬಂಧಿಸುವ ರೂಪಕ್ಕೆ ಅನ್ ಪ್ರತ್ಯಯವನ್ನು ಸೇರಿಸಿ ರಥದನ್ ನಾಮರೂಪವನ್ನು ತಯಾರಿಸಲಾಗಿದೆ.

ಹಳೆಗನ್ನಡದ ವೈಯಾಕರಣಿಗಳು ಇಂತಹ ಪದರೂಪಗಳನ್ನು ಮೂಲ ಪದಗಳೊಂದಿಗೆ ಸಂಬಂಧಿಸುವಲ್ಲಿ ಭಾಷೆಯ ವೈಶಿಷ್ಟ್ಯವನ್ನು ಗಮನಿಸಲು ಶಕ್ತರಾಗಿಲ್ಲ. ಉದಾಹರಣೆಗಾಗಿ, ಕೇಶಿರಾಜನು ಕರಿದು, ಬಿಳಿದು, ಪಟಿದು, ಬಿಸಿದು ಮೊದಲಾದವುಗಳನ್ನು ಗುಣವಚನಗಳೆಂದು ಕರೆದಿದ್ದಾನೆ (ಸೂ. ೮೭), ಮತ್ತು ಇವುಗಳ ಕೊನೆಯ ದುವಿಗೆ ಪುಲ್ಲಿಂಗದಲ್ಲಿ ಅಕಾರವೂ (ಸೂ. ೧೬೩), ಸ್ತ್ರೀಲಿಂಗದಲ್ಲಿ ಅಳ್ ಎಂಬುದೂ (ಸೂ. ೧೬೪) ಆದೇಶವಾಗಿ ಬರುವುದೆಂದು ಹೇಳಿದ್ದಾನೆ.

ಆದರೆ ನಿಜಕ್ಕೂ ಇಲ್ಲಿ ಕರಿ, ಬಿಳಿ, ಪಟಿ, ಬಿಸಿ ಮೊದಲಾದವು ಗುಣವಚನಗಳು (ಗುಣಪದಗಳು), ಮತ್ತು ಕರಿದು, ಕರಿಯನ್, ಕರಿಯಳ್ ಮೊದಲಾದವು ಕರಿ ಪದಕ್ಕೆ ಲಿಂಗ–ವಚನ ಪ್ರತ್ಯಯಗಳನ್ನು ಸೇರಿಸಿ ತಯಾರಿಸಿದ ನಾಮರೂಪಗಳು. ಇವು ಕರಿ ಪದದ ಪದರೂಪಗಳಲ್ಲದೆ ಅದಕ್ಕಿಂತ ಭಿನ್ನವಾದ ಬೇರೆ ಪದಗಳಲ್ಲ.

ಅವರು ಈ ರೀತಿ ಕರಿದು, ಬಿಳಿದು ಮೊದಲಾದುವನ್ನು ಗುಣವಚನಗಳೆಂದು ಪರಿಗಣಿಸಲು ಸಂಸ್ಕೃತ ವ್ಯಾಕರಣದಲ್ಲಿ ಹಾಗೆ ಮಾಡಿರುವುದೇ ಕಾರಣ. ಆದರೆ, ಸಂಸ್ಕೃತದಲ್ಲಿ ಗುಣಪದಗಳು (ಗುಣವಚನಗಳು) ಹಳೆಗನ್ನಡದ ಹಾಗೆ ನಾಮಪದಗಳಿಗಿಂತ ಭಿನ್ನವಾಗಿಲ್ಲ (೪.೨ ನೋಡಿ). ಹೆಚ್ಚಿನ ಗುಣಪದಗಳೂ ಮೂರು ಲಿಂಗಗಳಲ್ಲಿ ಬರಬಲ್ಲುವು ಎಂಬುದೊಂದೇ ಇವುಗಳ ಬಳಕೆಯಲ್ಲಿ ಕಾಣಿಸುವ ವೈಶಿಷ್ಟ್ಯ. ಆದರೆ, ಗುಣವಚನಗಳಲ್ಲದ ಹಲವು ನಾಮಪದಗಳೂ ಈ ರೀತಿ ಮೂರು ಲಿಂಗಗಳಲ್ಲಿ ಬರಬಲ್ಲುವಾದ ಕಾರಣ, ಈ ವಿಷಯವನ್ನಾಧರಿಸಿ ಸಂಸ್ಕೃತದ ಗುಣವಚನಗಳನ್ನು ಬೇರೆಯೇ ಒಂದು ಪದವರ್ಗದಲ್ಲಿ ಇರಿಸಲು ಸಾಧ್ಯವಾಗುವುದಿಲ್ಲ (೭.೨.೩ ನೋಡಿ).

## ೫.೩ ಸಮಾಸಗಳು

ಎರಡು (ಅಥವಾ ಹೆಚ್ಚು) ಪದಗಳನ್ನು ಒಟ್ಟು ಸೇರಿಸಿ ಹೊಸ ಪದವೊಂದನ್ನು ತಯಾರಿಸುವುದಕ್ಕಾಗಿ ಬಳಕೆಯಾಗುವ ವಿಧಾನಗಳನ್ನು ಸಮಾಸಗಳೆಂದು ಕರೆಯಲಾಗುತ್ತದೆ. ಇದಲ್ಲದೆ, ಇಂತಹ ವಿಧಾನಗಳನ್ನು ಬಳಸಿ ತಯಾರಿಸಿದ ಪದಗಳನ್ನೂ ಸಮಾಸಗಳೆಂದೇ ಕರೆಯಲಾಗುತ್ತದೆ.

ಈ ರೀತಿ ಸಮಾಸ ಎಂಬುದನ್ನು ಎರಡು ಅರ್ಥಗಳಲ್ಲಿ ಬಳಸುವುದರಿಂದ ಸ್ವಲ್ಪ ಮಟ್ಟಿಗೆ ಗೊಂದಲವುಂಟಾಗಲು ಸಾಧ್ಯವಿದೆ. ಅದನ್ನು ನಿವಾರಿಸುವುದಕ್ಕಾಗಿ, ಇಲ್ಲಿ ಬಳಕೆಯಾಗುವ ವಿಧಾನಗಳನ್ನು ಮಾತ್ರ 'ಸಮಾಸ'ವೆಂಬ ಹೆಸರಿನಿಂದ ಕರೆದು, ಅವುಗಳ ಮೂಲಕ ಸಾಧಿತವಾಗುವ ಪದಗಳನ್ನು 'ಸಮಸ್ತಪದ' ಇಲ್ಲವೇ 'ಜೋಡುಪದ' ಎಂಬ ಬೇರೆಯೇ ಹೆಸರಿನಿಂದ ಕರೆಯುವುದು ಒಳ್ಳೆಯದು.

ಸಮಸ್ತಪದಗಳನ್ನು ತಯಾರಿಸುವುದಕ್ಕಾಗಿ ಹಳೆಗನ್ನಡದಲ್ಲಿ ಬಳಕೆಯಲ್ಲಿರುವ ವಿಧಾನಗಳು ಸಂಸ್ಕೃತದಲ್ಲಿ ಬಳಕೆಯಲ್ಲಿರುವ ವಿಧಾನಗಳಿಗಿಂತ ತೀರ ಭಿನ್ನವಾಗಿವೆ. ಹಾಗಾಗಿ, ಸಂಸ್ಕೃತದ ಸಮಸ್ತಪದಗಳನ್ನು ವಿಭಜಿಸುವುದಕ್ಕಾಗಿ ಅದರ ವೈಯಾಕರಣಿಗಳು ಬಳಸಿರುವಂತಹ ಮೂಲತತ್ವವನ್ನು ಹಾಗೆಯೇ ಹಳೆಗನ್ನಡದ ಸಮಸ್ತಪದಗಳನ್ನು ವಿಭಜಿಸುವುದಕ್ಕಾಗಿ ಬಳಸಲು ಸಾಧ್ಯವಾಗದು.

### ೫.೩.೧ ಸಂಸ್ಕೃತದ ಸಮಾಸಗಳು

ಸಂಸ್ಕೃತದ ಸಮಸ್ತಪದಗಳನ್ನು ಅವುಗಳ ಅಂಗಗಳಾಗಿ ಬರುವ ಪದಗಳಲ್ಲಿ ಯಾವುದು 'ಪ್ರಧಾನ'ವಾದುದು ಎಂಬ ವಿಷಯದ ಆಧಾರದ ಮೇಲೆ ವಿಭಜಿಸಲಾಗುತ್ತದೆ. ಎರಡು ಅಂಗಗಳಿರುವ ಸಮಸ್ತಪದಗಳಲ್ಲಿ (೧) ಎರಡನೆಯದು ಪ್ರಧಾನವಾದರೆ ತತ್ಪುರುಷ, (೨) ಮೊದಲನೆಯದು ಪ್ರಧಾನವಾದರೆ ಅವ್ಯಯೀಭಾವ, (೩) ಎರಡೂ ಪ್ರಧಾನವಾದರೆ ದ್ವಂದ್ವ ಮತ್ತು (೪) ಎರಡೂ ಪ್ರಧಾನವಾಗಿಲ್ಲದೆ, ಹೊರಗಿನ ಪದವೊಂದು ಪ್ರಧಾನವಾದರೆ ಬಹುವ್ರೀಹಿ ಎಂಬುದಾಗಿ ಸಂಸ್ಕೃತದ ವೈಯಾಕರಣಿಗಳು ಈ ಸಮಸ್ತಪದಗಳನ್ನು ನಾಲ್ಕು ಮುಖ್ಯ ಗುಂಪುಗಳಲ್ಲಿ ವಿಂಗಡಿಸಿದ್ದಾರೆ.

**(೧) ತತ್ಪುರುಷ:** ರಾಜಪುರುಷ ಎಂಬ ಪದದಲ್ಲಿ ರಾಜ ಮತ್ತು ಪುರುಷ ಎಂಬ ಎರಡು ನಾಮಪದಗಳು ಒಟ್ಟು ಸೇರಿವೆ. ಇವುಗಳಲ್ಲಿ ಪುರುಷ ಎಂಬುದೇ ಪ್ರಧಾನವಾದುದು. ಯಾಕೆಂದರೆ, ಈ ಪದ ಒಂದು ರೀತಿಯ ಪುರುಷನನ್ನು (ರಾಜನಿಗೆ ಸಂಬಂಧಿಸಿದವನನ್ನು) ಸೂಚಿಸುತ್ತದೆ. ಹಾಗಾಗಿ, ರಾಜಪುರುಷ ಎಂಬುದು ತತ್ಪುರುಷ ಸಮಾಸಕ್ಕೆ ಉದಾಹರಣೆಯಾಗುತ್ತದೆ.

ತತ್ಪುರುಷ ಸಮಾಸದಲ್ಲಿ ಬಳಕೆಯಾಗುವ ಪದಗಳು ಒಂದೇ ವಿಭಕ್ತಿ ಪ್ರತ್ಯಯದ ಮೂಲಕ ಸಂಬಂಧಿಸಿಕೊಂಡಿವೆಯಾದರೆ, ಅದನ್ನು 'ಕರ್ಮಧಾರಯ'ವೆಂಬ ಬೇರೆ ಒಂದು ಹೆಸರಿನಿಂದ ಕರೆಯಲಾಗುತ್ತದೆ. ಉದಾಹರಣೆಗಾಗಿ, ನೀಲೋತ್ಪಲ ಎಂಬುದರಲ್ಲಿ ನೀಲ ಮತ್ತು ಉತ್ಪಲ 'ಕಮಲ' ಎಂಬ ಎರಡು ಪದಗಳೂ ಪ್ರಥಮಾ ವಿಭಕ್ತಿಯ ಮೂಲಕ ಸಂಬಂಧಿತವಾಗಿವೆಯಾದ ಕಾರಣ, ಅದು ಕರ್ಮಧಾರಯಕ್ಕೆ ಉದಾಹರಣೆ. (ರಾಜಪುರುಷ ಎಂಬುದರಲ್ಲಿ ರಾಜ ಪದ ಷಷ್ಠೀ ವಿಭಕ್ತಿಯ ಮೂಲಕ ಪುರುಷ ಪದದೊಂದಿಗೆ ಸಂಬಂಧಿತವಾಗಿದೆ.)

ಇದಲ್ಲದೆ, ತತ್ಪುರುಷದ ಅಂಗಗಳಲ್ಲಿ ಮೊದಲನೆಯದು ಎಣಿಕೆಯ ಪದವಾದರೆ ಅದಕ್ಕೆ 'ದ್ವಿಗು' ಎಂಬ ಹೆಸರಿದೆ. ತ್ರಿಭುವನ ಎಂಬುದು ಇದಕ್ಕೆ ಉದಾಹರಣೆ. ಇದರಲ್ಲಿ ತ್ರಿ 'ಮೂರು' ಎಂಬುದು ಎಣಿಕೆಯ ಪದ.

**(೨) ಅವ್ಯಯೀಭಾವ:** ಯಥಾಶಕ್ತಿ ಎಂಬುದರಲ್ಲಿ ಯಥಾ ಮತ್ತು ಶಕ್ತಿ ಎಂಬ ಎರಡು ಪದಗಳು ಒಟ್ಟು ಸೇರಿವೆ. ಇದಕ್ಕೆ ಶಕ್ತಿಂ ಅನತಿಕ್ರಮ್ಯ 'ಶಕ್ತಿಯನ್ನು ಅತಿಕ್ರಮಿಸದೆ' ಎಂಬ ವಿಗ್ರಹವಾಕ್ಯವನ್ನು ಕೊಡಲಾಗುತ್ತದೆ. ಈ ಸಮಸ್ತಪದದಲ್ಲಿ ಪ್ರಧಾನ ಪದವಾದ ಯಥಾ ಎಂಬುದು ಮೊದಲು ಬಂದಿದೆ. ಇದಲ್ಲದೆ, ಈ ಸಮಾಸದಿಂದ ಸಿದ್ಧವಾಗುವ ಪದ ಒಂದು ಅವ್ಯಯವಾಗಿದೆ. ಈ ಕಾರಣಗಳಿಗಾಗಿ ಇಲ್ಲಿ ಬಳಕೆಯಾಗಿರುವ ಸಮಾಸವನ್ನು ಅವ್ಯಯೀಭಾವ ಎಂದು ಕರೆಯಲಾಗುತ್ತದೆ.

**(೩) ದ್ವಂದ್ವ:** ಸುಖದುಃಖ ಎಂಬುದರಲ್ಲಿ ಸುಖ ಮತ್ತು ದುಃಖ ಎಂಬ ಎರಡು ನಾಮಪದಗಳು ಒಟ್ಟು ಸೇರಿವೆ. ಇವುಗಳಲ್ಲಿ ಎರಡೂ ಪ್ರಧಾನವೇ ಆಗಿರುವ ಕಾರಣ, ಇಲ್ಲಿ ಬಳಕೆಯಾಗಿರುವ ಸಮಾಸವನ್ನು ದ್ವಂದ್ವ ಎಂದು ಕರೆಯಲಾಗುತ್ತದೆ.

**(೪) ಬಹುವ್ರೀಹಿ:** ಪೀತಾಂಬರ ಎಂಬುದರಲ್ಲಿ ಪೀತ 'ಹಳದಿ' ಮತ್ತು ಅಂಬರ 'ಬಟ್ಟೆ' ಎಂಬ ಎರಡು ಪದಗಳು ಒಟ್ಟು ಸೇರಿವೆ. ಆದರೆ, ಈ ಪದ ಒಂದು ರೀತಿಯ (ಹಳದಿ) ಬಣ್ಣವನ್ನಾಗಲಿ ಇಲ್ಲವೇ ಒಂದು ರೀತಿಯ ಬಟ್ಟೆಯನ್ನಾಗಲಿ ಸೂಚಿಸುವ ಬದಲು, ಅಂತಹ ಬಟ್ಟೆಯನ್ನುಟ್ಟಿರುವ ಒಬ್ಬ ವ್ಯಕ್ತಿಯನ್ನು ಸೂಚಿಸುತ್ತದೆ; ಎಂದರೆ, ಇದರಲ್ಲಿ ಬಂದಿರುವ ಪದಗಳಲ್ಲಿ ಎರಡೂ ಪ್ರಧಾನವಲ್ಲ; ಅವಕ್ಕಿಂತ ಭಿನ್ನವಾಗಿರುವ (ಎಂದರೆ ಆ ಸಮಸ್ತಪದದ ಹೊರಗಿರುವ)

'ವ್ಯಕ್ತಿ' ಎಂಬ ಅರ್ಥವನ್ನು ಸೂಚಿಸುವ ಪದ ಪ್ರಧಾನವಾದುದು. ಹಾಗಾಗಿ, ಇಲ್ಲಿ ಬಳಕೆಯಾಗಿರುವ ಸಮಾಸವನ್ನು ಬಹುವ್ರೀಹಿ ಎಂಬುದಾಗಿ ಕರೆಯಲಾಗುತ್ತದೆ.

### ೫.೩.೨ ಹಳೆಗನ್ನಡದ ಸಮಾಸಗಳು

ಹಳೆಗನ್ನಡದ ಸಮಸ್ತಪದಗಳನ್ನು ವಿಭಜಿಸಲು ಸಂಸ್ಕೃತದಲ್ಲಿ ಬಳಸಿದುದಕ್ಕಿಂತ ತೀರ ಭಿನ್ನವಾದ ಮೂಲತತ್ವವನ್ನು ಅನುಸರಿಸಬೇಕಾಗುತ್ತದೆ. ಇದಕ್ಕೆ ಕಾರಣವೇನೆಂದರೆ, ಹಳೆಗನ್ನಡದಲ್ಲಿ ಸಂಸ್ಕೃತದ ಹಾಗೆ ಒಂದೇ ಒಂದು ಪದವರ್ಗಕ್ಕೆ ಸೇರಿದ ಪದಗಳನ್ನು ಮಾತ್ರ (ಎಂದರೆ ನಾಮಪದಗಳನ್ನು ಮಾತ್ರ) ಇಂತಹ ಸಮಸ್ತಪದಗಳ ರಚನೆಯಲ್ಲಿ ಬಳಸುವ ಬದಲು, ಮೂರು ಪದವರ್ಗಗಳಿಗೆ ಸೇರಿದ ಪದಗಳನ್ನು ಬಳಸಲಾಗುತ್ತದೆ.

ಈ ಸಮಸ್ತಪದಗಳ ಮೊದಲನೆಯ ಅಂಗವಾಗಿ ಒಂದು ನಾಮಪದ ಬರಬಹುದು, ಗುಣಪದ ಬರಬಹುದು ಇಲ್ಲವೇ ಕ್ರಿಯಾಪದ ಬರಬಹುದು; ಆದರೆ, ಎರಡನೆಯ ಅಂಗವಾಗಿ ಒಂದು ನಾಮಪದ ಮಾತ್ರ ಬರಬಲ್ಲುದು. ಈ ವಿಷಯದ ಆಧಾರದ ಮೇಲೆ ಹಳೆಗನ್ನಡದ ಸಮಸ್ತಪದಗಳನ್ನು 'ನಾಮಸಮಾಸ', 'ಗುಣಸಮಾಸ' ಮತ್ತು 'ಕ್ರಿಯಾಸಮಾಸ' ಎಂಬುದಾಗಿ ಮೂರು ಮುಖ್ಯ ಗುಂಪುಗಳಲ್ಲಿ ವಿಂಗಡಿಸಲು ಸಾಧ್ಯವಿದೆ.

ಉದಾಹರಣೆಗಾಗಿ, ಕಣ್ಣೀರ್ ಎಂಬುದರಲ್ಲಿ ಕಣ್ ಮತ್ತು ನೀರ್ ಎಂಬ ಎರಡು ನಾಮಪದಗಳು ಒಟ್ಟು ಸೇರಿವೆ. ಈ ಪದ ಕಣ್ಣಿನಿಂದ ಹೊರ ಸೂಸುವ ಒಂದು ವಿಶಿಷ್ಟವಾದ ದ್ರವವನ್ನು ಸೂಚಿಸುತ್ತಿದೆಯಾದ ಕಾರಣ, ಅದು ಹೆಸರಲ್ಲದೆ ವರ್ಣನೆಯಲ್ಲ. ಹಾಗಾಗಿ, ಇದನ್ನು ಸಮಸ್ತಪದವೆಂದು ಪರಿಗಣಿಸಬಹುದು. ಇದೇ ರೀತಿಯಲ್ಲಿ ಕೆಯ್ಪಿಡಿ 'ಕನ್ನಡಿ', ಕಾಲ್ಚುರ್ಚು, ನಾಣ್ಣುಡಿ, ಬಿಸಿಲ್ಗುದುರೆ ಮೊದಲಾದ ಸಮಸ್ತಪದಗಳನ್ನೂ ಎರಡು ನಾಮಪದಗಳನ್ನು ಒಟ್ಟು ಸೇರಿಸಿ ತಯಾರಿಸಲಾಗಿದೆ.

ಬೆಳ್ಳುಳ್ಳಿ ಎಂಬುದರಲ್ಲಿ ಬೆಳ್ ಗುಣಪದದೊಂದಿಗೆ ಉಳ್ಳಿ ನಾಮಪದ ಸೇರಿ ಒಂದು ವಿಶಿಷ್ಟವಾದ ಗಡ್ಡೆಯನ್ನು ಸೂಚಿಸುವ ಸಮಸ್ತಪದ ಸಿದ್ಧವಾಗಿದೆ. ಇದೇ ರೀತಿಯಲ್ಲಿ, ಕರ್ಬೊನ್ 'ಕಬ್ಬಿಣ', ಎಳನೀರ್, ಕಿರುಕುಣಿಕೆ 'ಕಿರುಬೆರಳು' ಮೊದಲಾದ ಸಮಸ್ತಪದಗಳೂ ಗುಣಪದಕ್ಕೆ ನಾಮಪದವನ್ನು ಸೇರಿಸುವುದರ ಮೂಲಕ ತಯಾರಾಗಿವೆ.

ಸುಡುಗಾಡು ಎಂಬುದರಲ್ಲಿ ಸುಡು ಕ್ರಿಯಾಪದದೊಂದಿಗೆ ಕಾಡು ನಾಮಪದ ಸೇರಿ ಹೆಣಗಳನ್ನು ಸುಡುವ ಒಂದು ವಿಶಿಷ್ಟವಾದ ಜಾಗವನ್ನು ಹೆಸರಿಸುವ ನಾಮಪದ ಸಿದ್ಧವಾಗಿದೆ. ಇದೇ ರೀತಿಯಲ್ಲಿ, ಬಿಡುವೆಣ್, ಅಡುಗಬ್ಬು 'ಕಟ್ಟಿಗೆ', ಇಡುವಲೆ ಮೊದಲಾದ ಸಮಸ್ತಪದಗಳೂ ಕ್ರಿಯಾಪದಗಳಿಗೆ ನಾಮಪದಗಳನ್ನು ಸೇರಿಸುವುದರ ಮೂಲಕ ತಯಾರಾಗಿವೆ.

### ೫.೩.೩ ಸಮಸ್ತಪದಗಳು ಮತ್ತು ಪದಕಂತೆಗಳು

ಹಳೆಗನ್ನಡದಲ್ಲಿ ಬಳಕೆಯಲ್ಲಿರುವ ಸಮಾಸಗಳು ಸಂಸ್ಕೃತದ ಸಮಾಸಗಳಿಂದ ಬೇರೆಯೂ ಕೆಲವು ವಿಷಯಗಳಲ್ಲಿ ಭಿನ್ನವಾಗಿವೆ. ಸಂಸ್ಕೃತದ ಒಂದು ವೈಶಿಷ್ಟ್ಯವೇನೆಂದರೆ, ಅದರಲ್ಲಿ ಪದ ಮತ್ತು ಪದಕಂತೆಗಳ ನಡುವಿನ ವ್ಯತ್ಯಾಸ ಬಹಳ ಮಟ್ಟಿಗೆ ನಷ್ಟವಾಗಿದ್ದು, ಸಮಾಸ ಎಂಬುದಕ್ಕೆ ಎರಡು (ಅಥವಾ ಹೆಚ್ಚು) ಪದಗಳು ಅಡಕವಾಗಿ ಸೇರಿಕೊಂಡಿರುವುದು ಎಂದಿಷ್ಟೇ ಅರ್ಥವಿರುವ

ಹಾಗೆ ಕಾಣಿಸುತ್ತದೆ. ಎರಡು ಪದಗಳು ಸೇರಿ ಹೊಸದೊಂದು ಪದವಾಗಿರುವುದು ಎಂಬ ಅರ್ಥದಲ್ಲಿ ಅದರ ಬಳಕೆಯಿರುವ ಹಾಗೆ ಕಾಣಿಸುವುದಿಲ್ಲ.

ಹೀಗಾಗಿರುವುದಕ್ಕೆ ಸಂಸ್ಕೃತ ಭಾಷೆಗೆ ಮಾತಿನ ಬಳಕೆ ತಪ್ಪಿ ಹೋಗಿರುವುದೇ ಕಾರಣವೆಂದು ಹೇಳಬಹುದು. ಸಾಮಾನ್ಯವಾಗಿ ಮಾತಿನ ಬಳಕೆಯಲ್ಲಿರುವ ಭಾಷೆಯಲ್ಲಿ ಎರಡು ಪದಗಳನ್ನು ಸೇರಿಸಿ ಹೊಸ ಪದವೊಂದನ್ನು ರಚಿಸಿದೊಡನೆಯೇ ಅದು ಆ ಭಾಷೆಯ ಪದವೆನಿಸುವುದಿಲ್ಲ. ಒಂದು ವಿಶಿಷ್ಟವಾದ ಅರ್ಥದಲ್ಲಿ ರೂಢಿಗೆ ಬಂದ ನಂತರವಷ್ಟೇ ಅದು ಆ ಭಾಷೆಯ ಪದವೆನಿಸಬಲ್ಲುದು.

ಆದರೆ, ಸಂಸ್ಕೃತದಲ್ಲಿ ಪರಸ್ಪರ ಹೊಂದಿಕೊಳ್ಳುವ ಅರ್ಥವಿರುವ ಯಾವ ಎರಡು ಪದಗಳನ್ನು ಬೇಕಿದ್ದರೂ ಸಮಾಸವೆಂಬ ವಿಧಾನದ ಮೂಲಕ ಸೇರಿಸಿ ಹೇಳಲು ಸಾಧ್ಯವಿದೆ. ಸಂಸ್ಕೃತದ ಕವಿಗಳು ಮತ್ತು ವಿದ್ವಾಂಸರು ಈ ಸ್ವಾತಂತ್ರ್ಯವನ್ನು ಎಲ್ಲೆಡೆಗಳಲ್ಲಿಯೂ ಬಳಸಿಕೊಂಡಿರುವರಾದ ಕಾರಣ, ಆ ಭಾಷೆಯಲ್ಲಿ ಪದ ಮತ್ತು ಪದಕಂತೆಗಳ ನಡುವಿನ ವ್ಯತ್ಯಾಸ ಅಳಿದುಹೋಗಿದೆ.

ಪದ ಮತ್ತು ಪದಕಂತೆಗಳ ನಡುವಿನ ಈ ವ್ಯತ್ಯಾಸ ಎಂತಹದು ಎಂಬುದನ್ನು ತಿಳಿಯಬೇಕಿದ್ದಲ್ಲಿ, ಮೊದಲಿಗೆ ಈ ವ್ಯತ್ಯಾಸ ಭಾಷೆಗಳಿಗೆ ಯಾಕೆ ಬೇಕು ಎಂಬುದನ್ನು ಪರಿಶೀಲಿಸಬೇಕಾಗುತ್ತದೆ.

ಒಂದು ಘಟನೆ ಇಲ್ಲವೇ ಸಂಗತಿಯನ್ನು ತಿಳಿಸಬೇಕಿದ್ದಲ್ಲಿ, ಮೊದಲಿಗೆ ಆ ಘಟನೆ ಇಲ್ಲವೇ ಸಂಗತಿಯಲ್ಲಿ ತೊಡಗಿಕೊಂಡಿರುವ ವ್ಯಕ್ತಿ, ವಸ್ತು ಮೊದಲಾದುವನ್ನು ಗುರುತಿಸುವ ಅವಶ್ಯಕತೆಯಿದೆ. ಉದಾಹರಣೆಗಾಗಿ, ಬಿದ್ದ ಇಲ್ಲವೇ ಬಿತ್ತು ಎಂದಿಷ್ಟೇ ಹೇಳಿದರೆ, ಸಾಮಾನ್ಯವಾಗಿ ನಾವು ತಿಳಿಸಬೇಕೆಂದಿರುವ ವಿಷಯ ಸ್ಪಷ್ಟವಾಗುವುದಿಲ್ಲ, ಬಿದ್ದವರು ಯಾರು (ರಾಜು ಬಿದ್ದ) ಇಲ್ಲವೇ ಬಿದ್ದುದು ಏನು (ಹಣ್ಣು ಬಿತ್ತು) ಎಂಬುದನ್ನೂ ತಿಳಿಸಬೇಕಾಗುತ್ತದೆ, ಮತ್ತು ಇದಕ್ಕಾಗಿ ಬಿದ್ದ ವ್ಯಕ್ತಿ ಇಲ್ಲವೇ ವಸ್ತುವನ್ನು ಗುರುತಿಸಬೇಕಾಗುತ್ತದೆ.

ಈ ರೀತಿ ವ್ಯಕ್ತಿ, ವಸ್ತು ಮೊದಲಾದುವನ್ನು ಗುರುತಿಸುವುದಕ್ಕಾಗಿ ಹೆಚ್ಚಿನ ಭಾಷೆಗಳಲ್ಲೂ ಎರಡು ವಿಧಾನಗಳು ಬಳಕೆಯಲ್ಲಿರುತ್ತವೆ. ಆ ವ್ಯಕ್ತಿ ಇಲ್ಲವೇ ವಸ್ತುಗಳಿಗಿರುವ ಹೆಸರನ್ನು ಬಳಸಿ ಗುರುತಿಸುವುದು (ಹೆಸರಿಸುವುದು) ಒಂದು ವಿಧಾನ, ಮತ್ತು ಅವುಗಳ ವರ್ಣನೆಯೊಂದನ್ನು ಕೊಡುವುದು (ವರ್ಣಿಸುವುದು) ಇನ್ನೊಂದು ವಿಧಾನ. ಉದಾಹರಣೆಗಾಗಿ, ರಾಜು ಎಂಬುದು ಒಬ್ಬ ವ್ಯಕ್ತಿಯನ್ನು ಹೆಸರಿಸಿ ಗುರುತಿಸುತ್ತದೆ, ಮತ್ತು ಚಿಕ್ಕ ಹುಡುಗ ಎಂಬುದು ಒಬ್ಬ ವ್ಯಕ್ತಿಯನ್ನು ವರ್ಣಿಸಿ ಗುರುತಿಸುತ್ತದೆ.

ಹೆಸರಿಸುವುದರಲ್ಲೂ ಎರಡು ವಿಧಾನಗಳಿವೆ: ಒಬ್ಬ ವ್ಯಕ್ತಿಯನ್ನು ಆತನದೇ ಆದ ಹೆಸರಿನಿಂದ (ಅಂಕಿತನಾಮದಿಂದ) ಗುರುತಿಸುವುದು ಒಂದು ವಿಧಾನ, ಮತ್ತು ಅಂತಹ ಹಲವು ವ್ಯಕ್ತಿಗಳಿಗೆ ಸಮಾನವಾಗಿರುವ ಹೆಸರಿನಿಂದ (ರೂಢನಾಮದಿಂದ) ಗುರುತಿಸುವುದು ಇನ್ನೊಂದು ವಿಧಾನ. ಉದಾಹರಣೆಗಾಗಿ, ರಾಜು ಎಂಬ ಪದವನ್ನು ಬಳಸುವಲ್ಲಿ ಮೊದಲನೆಯ ವಿಧಾನ ಬಳಕೆಯಾಗುತ್ತದೆ, ಮತ್ತು ಹಣ್ಣು ಎಂಬ ಪದವನ್ನು ಬಳಸುವಲ್ಲಿ ಎರಡನೆಯ ವಿಧಾನ ಬಳಕೆಯಾಗುತ್ತದೆ (ಹೆಚ್ಚಿನ ವಿವರಗಳಿಗೆ ಭಟ್ ೨೦೦೨:೮೦ ನೋಡಿ).

ಮಾತಿನ ಮೂಲಕ ಗುರುತಿಸಬೇಕಾಗಿ ಬರುವ ವ್ಯಕ್ತಿ ಇಲ್ಲವೇ ವಸ್ತುಗಳ ಸಂಖ್ಯೆ ಅನಂತವಾಗಿದ್ದು, ಅವುಗಳಲ್ಲಿ ಕೆಲವೇ ಕೆಲವನ್ನು ಮಾತ್ರ ನಾವು ಹೆಸರುಗಳ ಮೂಲಕ ಗುರುತಿಸಬಲ್ಲೆವು. ಉದಾಹರಣೆಗಾಗಿ, ನಮ್ಮ ಸುತ್ತಮುತ್ತ ಮಿಲಿಯಗಟ್ಟಲೆ ಕ್ರಿಮಿಕೀಟಗಳಿದ್ದು ಅವುಗಳಲ್ಲಿ ಕೆಲವಕ್ಕೆ ಮಾತ್ರ ನಮ್ಮ ಭಾಷೆಯಲ್ಲಿ ಹೆಸರು (ರೂಢನಾಮ)ಗಳಿವೆ. ಹೆಸರಿಲ್ಲದ

ಕ್ರಿಮಿಯೊಂದನ್ನು ಗುರುತಿಸಬೇಕಾದಾಗ, ಅದಕ್ಕೊಂದು ಹೆಸರನ್ನು ಕೊಡುವುದು ಒಂದು ದಾರಿ, ಮತ್ತು ಅದನ್ನು ವರ್ಣಿಸಿ ಹೇಳುವುದು ಇನ್ನೊಂದು ದಾರಿ.

ಸಾಮಾನ್ಯವಾಗಿ, ಒಂದು ವಸ್ತು ಇಲ್ಲವೇ ಪ್ರಾಣಿಯನ್ನು ಆಗಾಗ ಗುರುತಿಸಬೇಕಾಗುವುದಿದ್ದಲ್ಲಿ, ಅದಕ್ಕೊಂದು ಹೆಸರು ಕೊಡುತ್ತೇವೆ; ಇದಕ್ಕೆ ಬದಲು, ಅವನ್ನು ಕೆಲವೊಂದು ಸಂದರ್ಭಗಳಲ್ಲಿ ಮಾತ್ರ ಗುರುತಿಸಬೇಕಾಗುವುದಾದಲ್ಲಿ, ಅದಕ್ಕಾಗಿ ಹೆಸರೊಂದನ್ನು ಸೃಷ್ಟಿಸುವ ತೊಂದರೆಗೆ ಹೋಗುವ ಬದಲು, ವರ್ಣಿಸಿ ಗುರುತಿಸುತ್ತೇವೆ. ಇಂತಹ ವರ್ಣನೆಯೇ ಕಾಲಕ್ರಮೇಣ ಆ ವಸ್ತು ಇಲ್ಲವೇ ಪ್ರಾಣಿಯ ಹೆಸರಾಗಲೂ ಸಾಧ್ಯವಿದೆ. ಆದರೆ, ಇವೆರಡರ ನಡುವೆ ವ್ಯತ್ಯಾಸವಿದೆ.

ಉದಾಹರಣೆಗಾಗಿ, ಕರಿಹಲಗೆ ಎಂಬುದನ್ನು ಮೊದಲಿಗೆ ಒಂದು ವರ್ಣನೆಯಾಗಿ ಬಳಸಿರಲು ಸಾಧ್ಯವಿದೆ. ಆದರೆ, ಸದ್ಯಕ್ಕೆ ಅದು ಒಂದು ಹೆಸರು(ರೂಢನಾಮ)ವಾಗಿಯೇ ಬಳಕೆಯಲ್ಲಿದೆ. ಈ ವ್ಯತ್ಯಾಸಕ್ಕೆ ಆಧಾರವೇನೆಂದರೆ, ಅದು ಒಂದು ವರ್ಣನೆಯಾಗಿದ್ದಲ್ಲಿ, ಕಪ್ಪು ಬಣ್ಣದ ಎಲ್ಲಾ ಹಲಗೆಗಳನ್ನೂ ಗುರುತಿಸಬೇಕು, ಮತ್ತು ಬೇರೆ ಬಣ್ಣದ ಹಲಗೆಗಳನ್ನಾಗಲಿ, ಇಲ್ಲವೇ ಹಲಗೆಯಲ್ಲದವುಗಳನ್ನಾಗಲಿ ಗುರುತಿಸದಿರಬೇಕು.

ಆದರೆ, ಹೊಸಗನ್ನಡದಲ್ಲಿ ಕರಿಹಲಗೆ ಎಂಬ ಪದ ಗುರುತಿಸುವಂತಹದು ಕಪ್ಪಾಗಿಯೂ ಇರಬೇಕಾಗಿಲ್ಲ (ಅದು ನೀಲಿ ಇಲ್ಲವೇ ಹಸಿರು ಬಣ್ಣದ್ದಿರಬಹುದು), ಮತ್ತು ಹಲಗೆಯಾಗಿಯೂ ಇರಬೇಕಾಗಿಲ್ಲ (ಗೋಡೆಯ ಒಂದು ಭಾಗವಾಗಿರಬಹುದು). ಇದಲ್ಲದೆ, ಎಲ್ಲಾ ರೀತಿಯ ಕಪ್ಪು ಬಣ್ಣದ ಹಲಗೆಗಳನ್ನೂ ಕರಿಹಲಗೆಯೆಂದು ಕರೆಯಲು ಸಾಧ್ಯವಾಗದು. ಒಂದು ವಿಶಿಷ್ಟವಾದ ಕೆಲಸದಲ್ಲಿ ಬಳಕೆಯಾಗುವ ವಸ್ತುವನ್ನು ಮಾತ್ರ ಆ ಹೆಸರಿನಿಂದ ಗುರುತಿಸಲು ಸಾಧ್ಯ. ಹಾಗಾಗಿ, ಅದು ಹೊಸಗನ್ನಡದಲ್ಲಿ ಹೆಸರಲ್ಲದೆ ವರ್ಣನೆಯಲ್ಲ.

ಮೇಲೆ ವಿವರಿಸಿದ ಹಾಗೆ, ವ್ಯಕ್ತಿ ಇಲ್ಲವೇ ವಸ್ತುಗಳಿಗೆ ಹೆಸರನ್ನು ಕೊಡುವುದಕ್ಕಾಗಿ ಕನ್ನಡದಲ್ಲಿ ಎರಡು ವಿಧಾನಗಳು ಬಳಕೆಯಲ್ಲಿವೆ. ನಾಮಪದ, ಗುಣಪದ, ಇಲ್ಲವೇ ಕ್ರಿಯಾಪದಕ್ಕೆ (೧) ಒಂದು ಪ್ರತ್ಯಯವನ್ನು ಸೇರಿಸಿ ಹೊಸ ಪದವನ್ನು ಸೃಷ್ಟಿಸುವುದು (೫.೨.೧ ನೋಡಿ), ಮತ್ತು (೨) ಬೇರೊಂದು ನಾಮಪದವನ್ನು ಸೇರಿಸಿ ಹೊಸ ಪದವನ್ನು ಸೃಷ್ಟಿಸುವುದು (ಕರಿಹಲಗೆ). ಈ ಎರಡನೆಯ ವಿಧಾನಕ್ಕೆ ಸಮಾಸವೆಂದು ಹೆಸರು.

ಸಮಸ್ತಪದ ಮತ್ತು ಪದಕಂತೆಗಳ ನಡುವಿರುವ ವ್ಯತ್ಯಾಸ ಈ ವಿವರಣೆಯಿಂದ ಸ್ಪಷ್ಟವಾಗಿರಬಹುದು. ಎರಡು ಪದಗಳನ್ನು ಒಟ್ಟು ಸೇರಿಸಿ ಒಂದು ಹೆಸರನ್ನು ತಯಾರಿಸಲಾಗಿದೆಯಾದರೆ ಅದು ಸಮಸ್ತಪದ, ಮತ್ತು ಒಂದು ವರ್ಣನೆಯನ್ನು ತಯಾರಿಸಲಾಗಿದೆಯಾದರೆ ಅದು ಪದಕಂತೆ. ಸಮಸ್ತಪದದ ತಯಾರಿಕೆಯಲ್ಲಿ ಸಮಾಸವೆಂಬ ವಿಧಾನದ ಬಳಕೆಯಾಗಿದೆ, ಮತ್ತು ಪದಕಂತೆಯ ತಯಾರಿಕೆಯಲ್ಲಿ ಅದಕ್ಕಿಂತ ಭಿನ್ನವಾದ ಬೇರೆಯೇ ಒಂದು ವಿಧಾನದ ಬಳಕೆಯಾಗಿದೆ. ಸಮಸ್ತಪದಗಳ ತಯಾರಿಕೆಯಲ್ಲಿ ಬಳಕೆಯಾಗುವ ಸಮಾಸ ಎಂಬುದು ಪದರಚನೆಯ ವಿಧಾನ, ಮತ್ತು ಪದಕಂತೆಯ ತಯಾರಿಕೆಯಲ್ಲಿ ಬಳಕೆಯಾಗುವುದು ವಾಕ್ಯರಚನೆಯ ವಿಧಾನ.

ಉದಾಹರಣೆಗಾಗಿ, ಬೆಳ್ದಿಂಗಳ್ ಎಂಬುದು ಚಂದ್ರನ ಬೆಳಕನ್ನು ಹೆಸರಿಸುವ ಪದವಾದ ಕಾರಣ, ಹಳೆಗನ್ನಡದಲ್ಲಿ ಸಮಾಸಕ್ಕೆ ಉದಾಹರಣೆಯಾಗಬಲ್ಲುದು. ಆದರೆ, ಬೆಳ್ಮುಗಿಲ್ ಎಂಬುದು ಮುಗಿಲು ಎಂತಹದು (ಅದು ಬಿಳಿ ಬಣ್ಣದ್ದು) ಎಂಬುದಾಗಿ ವರ್ಣನೆಯೊಂದನ್ನು ಕೊಡುತ್ತಿದೆಯಾದ ಕಾರಣ, ಪದಕಂತೆಗೆ ಉದಾಹರಣೆಯಾಗಬಲ್ಲುದಲ್ಲದೆ ಸಮಾಸಕ್ಕೆ ಉದಾಹರಣೆಯಾಗಲಾರದು.

ಹೆಸರು ಮತ್ತು ವರ್ಣನೆಗಳ ನಡುವಿರುವ ಈ ವ್ಯತ್ಯಾಸ ಮಾತಿನ ಬಳಕೆಯಲ್ಲಿರುವ ಭಾಷೆಗಳಲ್ಲೆಲ್ಲ ಸ್ಪಷ್ಟವಾಗಿ ಮೂಡಿರುತ್ತದೆ. ಆದರೆ, ಮಾತಿನ ಬಳಕೆ ತಪ್ಪಿಹೋಗಿರುವ ಭಾಷೆಗಳು ಕೆಲವೇ ಕೆಲವು ಪಂಡಿತರ ಮತ್ತು ಕವಿಗಳ ಹಿಡಿತದಲ್ಲಿ ಉಳಿಯುವುವಾದ ಕಾರಣ, ಅವುಗಳಲ್ಲಿ ಈ ವ್ಯತ್ಯಾಸ ಬಹಳ ಬೇಗ ಅಳಿದುಹೋಗುತ್ತದೆ.

ಉದಾಹರಣೆಗಾಗಿ, ಸಂಸ್ಕೃತದಲ್ಲಿ ನೀಲೋತ್ಪಲ ಎಂಬ ಪದಕ್ಕೆ ಒಂದು ಜಾತಿಯ ಕಮಲವನ್ನು ಸೂಚಿಸುವ ಅರ್ಥವಿದೆ. ಹಾಗಾಗಿ, ಅದನ್ನೊಂದು ಹೆಸರೆಂದು ಪರಿಗಣಿಸಲು ಸಾಧ್ಯವಿದೆ. ಆದರೆ, ಸಂಸ್ಕೃತದ ಕವಿಗಳು ಈ ಪದವನ್ನು ಆ ಜಾತಿಗೆ ಸೇರದಿರುವಂತಹ ಕಮಲಗಳನ್ನು (ಅವಕ್ಕೆ ನೀಲಿ ಬಣ್ಣವಿದ್ದಲ್ಲಿ) ಗುರುತಿಸುವುದಕ್ಕಾಗಿಯೂ ಬಳಸಬಲ್ಲರು. ಇಂತಹ ಬಳಕೆಗಳನ್ನು ವಿರೋಧಿಸುವ ಮತ್ತು ನಿಯಂತ್ರಿಸುವ ಸಮಾಜದ ಕಟ್ಟು ಸಂಸ್ಕೃತಕ್ಕಿರಲಿಲ್ಲವಾದ ಕಾರಣ, ಇಂತಹ ಬಳಕೆಗಳು ಜಾಸ್ತಿಯಾಗುತ್ತಾ ಹೋಗಿ, ಕಾವ್ಯಗಳ ಕಾಲದಲ್ಲಿ ಸಮಾಸವೆಂಬುದು ಅದರ ಮೂಲಾರ್ಥವನ್ನು ಕಳೆದುಕೊಂಡಿದೆ.

ವೇದಕಾಲದ ಸಂಸ್ಕೃತಕ್ಕೆ ಮಾತಿನ ಬಳಕೆ ಆಧಾರವಾಗಿತ್ತು. ಹಾಗಾಗಿ, ಅದರಲ್ಲಿ ಹೆಸರು ಮತ್ತು ವರ್ಣನೆಗಳ ನಡುವಿನ ವ್ಯತ್ಯಾಸ ಉಳಿದುಕೊಂಡಿತ್ತು. ಇದಲ್ಲದೆ, ಅದರಲ್ಲಿ ಬಳಕೆಯಾಗುತ್ತಿದ್ದ ಸಮಸ್ತಪದಗಳಲ್ಲಿ ಎರಡಕ್ಕಿಂತ ಜಾಸ್ತಿ ಪದಗಳು ಅಂಗಗಳಾಗಿರುವುದು ಬಹಳ ಅಪರೂಪ. ಆದರೆ ಕಾವ್ಯಗಳ ಕಾಲದ ಸಂಸ್ಕೃತದಲ್ಲಿ ಉದ್ದುದ್ದವಾದ ಸಮಸ್ತಪದಗಳ ಬಳಕೆಯನ್ನು ಕಾಣಬಹುದು. ಮಾತಿನ ಬಳಕೆ ತಪ್ಪಿದುದರಿಂದಾಗಿ ಪದ ಮತ್ತು ಪದಕಂತೆಗಳ ನಡುವಿನ ವ್ಯತ್ಯಾಸ ಅಳಿದುಹೋಗಿರುವುದೇ ಇದಕ್ಕೆ ಕಾರಣ.

## ೫.೪ ಹಳೆಗನ್ನಡ ವ್ಯಾಕರಣಗಳಲ್ಲಿ ಸಮಾಸ

ಹಳೆಗನ್ನಡದ ವೈಯಾಕರಣಿಗಳು ಸಂಸ್ಕೃತ ವ್ಯಾಕರಣಗಳಲ್ಲಿ ಸಿದ್ಧವಾಗಿರುವ ಸಮಸ್ತಪದಗಳ ವಿಭಜನೆಯನ್ನು ಹಾಗೆಯೇ ಹಳೆಗನ್ನಡಕ್ಕೆ ಅಳವಡಿಸಲು ಪ್ರಯತ್ನಿಸಿದ್ದಾರೆ; ಹೀಗೆ ಮಾಡಿದುದರಿಂದಾಗಿ, ಅವರಿಗೆ ಈ ಪದಗಳ ರಚನೆಯಲ್ಲಿ ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವೆ ಇರುವ ಹಲವು ಮೂಲಭೂತವಾದ ವ್ಯತ್ಯಾಸಗಳನ್ನು ಗಮನಿಸಲು ಸಾಧ್ಯವಾಗಲಿಲ್ಲ.

ಉದಾಹರಣೆಗಾಗಿ, ಸಮಾಸ ಮತ್ತು ಪದಕಂತೆಗಳ ನಡುವಿನ ವ್ಯತ್ಯಾಸವನ್ನು ಇವರು ಪರಿಗಣಿಸಲಿಲ್ಲ. ಆದರೆ, ಇದು ಹಳೆಗನ್ನಡಕ್ಕೆ ಅವಶ್ಯ ಎಂದು ನನ್ನ ಭಾವನೆ. ನಾಮಪದಗಳೊಂದಿಗೆ ಗುಣಪದಗಳನ್ನು ಬಳಸಿ ತಯಾರಿಸಿದ ರಚನೆಗಳಲ್ಲಿ ಈ ವ್ಯತ್ಯಾಸ ಬಹಳ ಸ್ಪಷ್ಟವಾಗಿ ಕಾಣಿಸುತ್ತದೆ.

ಸಂಸ್ಕೃತದವೇ ಆದ ಸಮಾಸದ ನಿಯಮಗಳನ್ನು ಬಳಸಿದರೂ (ಎಂದರೆ ಸಮಸ್ತಪದ–ಪದಕಂತೆಗಳ ನಡುವಿನ ವ್ಯತ್ಯಾಸವನ್ನು ಕಡೆಗಣಿಸಿದರೂ) ಹಳೆಗನ್ನಡ ವೈಯಾಕರಣಿಗಳು ವರ್ಣಿಸುವ ಸಮಾಸಗಳು ನಿಜಕ್ಕೂ ಆ ಭಾಷೆಯಲ್ಲಿ ಸಮಾಸಗಳಲ್ಲ ಎಂಬುದು ಕೆಳಗಿನ ಪರಿಶೀಲನೆಯಿಂದ ಸ್ಪಷ್ಟವಾಗುತ್ತದೆ.

### ೫.೪.೧ ಗುಣಪದಗಳ ಬಳಕೆ

ಹಳೆಗನ್ನಡದಲ್ಲಿ ಗುಣಪದಗಳು ನಾಮಪದಗಳಿಂದ ಭಿನ್ನವಾಗಿದ್ದು, ಅವನ್ನು ನಾಮಪದಗಳೊಂದಿಗೆ ಬಳಸಬೇಕಿದ್ದಲ್ಲಿ ಅವಕ್ಕೆ ಯಾವ ಪ್ರತ್ಯಯವನ್ನೂ ಸೇರಿಸಬೇಕಾಗುವುದಿಲ್ಲ. ಆದರೆ, ಸಂಸ್ಕೃತದಲ್ಲಿ ಗುಣಪದಗಳು ನಾಮಪದಗಳೇ ಆಗಿದ್ದು, ಅವನ್ನು ಬೇರೆ ನಾಮಪದಗಳೊಂದಿಗೆ ಬಳಸಬೇಕಿದ್ದಲ್ಲಿ ಅವಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸುವ ಅವಶ್ಯಕತೆಯಿದೆ.

ಇದು ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವಿರುವ ಒಂದು ಮುಖ್ಯ ವ್ಯತ್ಯಾಸ. ಸಂಸ್ಕೃತದಲ್ಲಿ ಗುಣಪದಗಳನ್ನು ವಿಭಕ್ತಿ ಪ್ರತ್ಯಯ ಸೇರಿಸದೆ ನೇರವಾಗಿ ನಾಮಪದದೊಂದಿಗೆ ಬಳಸಿದಲ್ಲಿ ಅದು ಸಮಸ್ತಪದವಾಗಿ ಬಿಡುತ್ತದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಎರಡು ವಾಕ್ಯಗಳನ್ನು ಗಮನಿಸಬಹುದು:

(೨ಕ) ಕೃಷ್ಣಂ ಸರ್ಪಂ ಅಪಶ್ಯತ್
'ಕಪ್ಪು ಹಾವನ್ನು ನೋಡಿದ'
(೨ಖ) ಕೃಷ್ಣಸರ್ಪಂ ಅಪಶ್ಯತ್
'ಕಪ್ಪುಹಾವನ್ನು ನೋಡಿದ'

(೨ಕ)ದಲ್ಲಿ ಕೃಷ್ಣ ಮತ್ತು ಸರ್ಪ ಎಂಬ ಎರಡು ಪದಗಳೂ ದ್ವಿತೀಯಾ-ಏಕವಚನದಲ್ಲಿ ಬಂದಿವೆ; ಆದರೆ, (೨ಖ)ದಲ್ಲಿ ಸರ್ಪ ಎಂಬುದು ಮಾತ್ರ ದ್ವಿತೀಯಾ-ಏಕವಚನದಲ್ಲಿ ಬಂದಿದ್ದು, ಕೃಷ್ಣ ಎಂಬುದು ಯಾವ ವಿಭಕ್ತಿ ಪ್ರತ್ಯಯವೂ ಇಲ್ಲದೆ ಬಂದಿದೆ. ಈ ವ್ಯತ್ಯಾಸವನ್ನು ವಿವರಿಸುವುದಕ್ಕಾಗಿ, ಸಂಸ್ಕೃತ ವ್ಯಾಕರಣಗಳಲ್ಲಿ (೨ಖ) ವಾಕ್ಯದಲ್ಲಿ ಕಾಣಿಸುವ ಕೃಷ್ಣಸರ್ಪ ಎಂಬುದರಂತಹ ಬಳಕೆಗಳಲ್ಲಿ ಕರ್ಮಧಾರಯವೆಂಬ ಸಮಾಸವಾಗಿದೆಯೆಂದು ಹೇಳಲಾಗುತ್ತದೆ.

ಆದರೆ, ಹಳೆಗನ್ನಡದಲ್ಲಿ ಗುಣಪದಗಳು ಸಹಜವಾಗಿಯೇ, ಯಾವ ವಿಭಕ್ತಿ ಪ್ರತ್ಯಯದ ಸಹಾಯವೂ ಇಲ್ಲದೆ, ನಾಮಪದಗಳೊಂದಿಗೆ ಬರುತ್ತವೆ. ಅವನ್ನು ಸಂಸ್ಕೃತದ ಹಾಗೆ, ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿ ಬಳಸಲು ಸಾಧ್ಯವಾಗದು. ಹಾಗಾಗಿ, ಅವುಗಳ ಸಹಜ ಬಳಕೆಗಳಾಗಿರುವ ಎಳಗೊಂಬು, ಪೇರಾನೆ, ಪೆರ್ದೆರೆ, ನಿಡುಗಣ್, ಪಟಿನವಿರ್, ಪೊಸನೆತ್ತರ್ ಮೊದಲಾದವುಗಳಲ್ಲಿ ಕರ್ಮಧಾರಯ ಸಮಾಸವಾಗಿದೆಯೆಂದು ಹೇಳುವುದಕ್ಕೆ ಹಳೆಗನ್ನಡದಲ್ಲಿ ಯಾವ ಆಧಾರವೂ ಇಲ್ಲ.

ಪಂಪಭಾರತದಲ್ಲಿ ಇಂತಹ ಪದಗಳ ಬಳಕೆ ಹೇಗಿದೆಯೆಂಬುದನ್ನು ಪರಿಶೀಲಿಸಿದಲ್ಲಿ ಈ ವಿಷಯ ಸ್ಪಷ್ಟವಾಗುತ್ತದೆ. ಪೊಸ-ಪೊಸತು, ಕಿಱು-ಕಿಱುದು (ಕಿಱಿಯರ್), ಚೆನ್ನ-ಚೆನ್ನರ್, ತೆಳ್-ತೆಳ್ಳಿದುವು ಮೊದಲಾದ ಪದಯುಗ್ಮಗಳಲ್ಲಿ ಮೊದಲನೆಯದು ನಾಮಪದಗಳೊಂದಿಗೆ ಬರುತ್ತದೆ, ಮತ್ತು ಎರಡನೆಯದು ನಾಮಪದದ ಜಾಗದಲ್ಲಿ ಬರುತ್ತದೆ:

**(೧) ನಾಮಪದಗಳೊಂದಿಗೆ ಬಳಕೆ:**

(೩ಕ) ಪೂವಿನ ಪೊಸ ಗೊಂಚಲಿಂ ಮರನಿದೇನೆಸೆದಿರ್ದುವೊ (೧.೧೧೬)
'ಹೂವಿನ ಹೊಸ ಗೊಂಚಲಿನಿಂದ ಮರಗಳು ಎಷ್ಟು ಸೊಗಸಾಗಿವೆ!'
(೩ಖ) ಕಿಱುನಗೆ ನಕ್ಕು (೯.೨೮ವ)
'ಹುಸಿನಗೆ ನಕ್ಕು'
(೩ಗ) ಚೆನ್ನ ಪೂಗಳನ್ ಒಯ್ಯನೆ ಓಸರಿಸುತುಂ (೨.೧೭)
'ಸೊಗಸಾದ ಹೂವುಗಳನ್ನು ನಿಧಾನವಾಗಿ ಪಕ್ಕಕ್ಕೆ ಸರಿಸುತ್ತ'

**(೨) ನಾಮಪದಗಳ ಜಾಗದಲ್ಲಿ ಬಳಕೆ:**

(೪ಕ) ಪೊಸತಂ ಪಟಿದುಮನಱಿದು (೫.೪೬ವ)
'ಹೊಸತನ್ನೂ ಹಳೆಯದನ್ನೂ ತಿಳಿದು'

(೪ಖ) ಆತನಿಂ ಕಿಱಿಯರಂ ಪನ್ನೊರ್ವರಂ ಕೊಂದು (೧೧.೫೯)
'ಆತನಿಂದ ಕಿರಿಯರಾದ ಹನ್ನೊಂದು ಜನರನ್ನೂ ಕೊಂದು'

(೪ಗ) ಚೆನ್ನರನ್ ಅಡಿಗೊತ್ತಿ(೨.೭೭)
'ಪರಾಕ್ರಮಿಗಳನ್ನು ಕಾಲಿನ ಕೆಳಕ್ಕೆ ಅದುಮಿ'

ಪೊಸ, ಕಿಱು, ಚೆನ್ನ ಮೊದಲಾದ ಗುಣಪದಗಳನ್ನು ನಾಮಪದಗಳ ವಿಶೇಷಣಗಳನ್ನಾಗಿ ಮಾಡಿ ಬಳಸಬೇಕೆಂದಿದ್ದಲ್ಲಿ ಅವಕ್ಕೆ ಯಾವ ಪ್ರತ್ಯಯವನ್ನೂ ಸೇರಿಸುವ ಅವಶ್ಯಕತೆಯಿಲ್ಲ. ಆದರೆ, ಅವನ್ನು ನಾಮಪದಗಳ ಜಾಗದಲ್ಲಿ, ಎಂದರೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿ ಬಳಸಬೇಕೆಂದಿದ್ದಲ್ಲಿ, ಅವಕ್ಕೆ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸುವ ಅವಶ್ಯಕತೆಯಿದೆ ಎಂಬ ವಾಕ್ಯರಚನೆಯ ನಿಯಮ ಹಳೆಗನ್ನಡದಲ್ಲಿದೆ.

ಹಾಗಾಗಿ, ನಾಮಪದಗಳ ಜಾಗದಲ್ಲಿ ಬರುವ ಪೊಸತು, ಕಿಱಿಯರ್, ಚೆನ್ನರ್ ಮೊದಲಾದವುಗಳನ್ನು ಹಳೆಗನ್ನಡದಲ್ಲಿ ಪೊಸ, ಕಿಱು, ಚೆನ್ನ ಮೊದಲಾದ ಗುಣಪದಗಳ ನಾಮರೂಪಗಳೆಂದು ಕರೆಯುವ ಅವಶ್ಯಕತೆಯಿದೆ.

ಹಳೆಗನ್ನಡದ ವೈಯಾಕರಣಿಗಳು ಹೇಳುವ ಹಾಗೆ, ಇಲ್ಲಿ ಪೊಸತು, ಕಿಱಿದು ಮೊದಲಾದವುಗಳು ಮೂಲರೂಪಗಳಲ್ಲ; ಪೊಸ, ಕಿಱು ಮೊದಲಾದವುಗಳೇ ಮೂಲರೂಪಗಳು. ಪೊಸತು, ಕಿರಿದು ಮೊದಲಾದವುಗಳು ಬೇರೆ ಪದವರ್ಗಕ್ಕೆ ಸೇರಿದ ಪದಗಳ ಜಾಗದಲ್ಲಿ (ನಾಮಪದಗಳ ಜಾಗದಲ್ಲಿ) ಬಳಸುವುದಕ್ಕಾಗಿ ಅವಕ್ಕೆ ಲಿಂಗ-ವಚನ ಪ್ರತ್ಯಯವನ್ನು ಸೇರಿಸಿ ರಚಿಸಿದ ರೂಪಗಳು.

### ೫.೪.೨ ಕೃದಂತಗಳ ಬಳಕೆ

ಇದೇ ರೀತಿಯಲ್ಲಿ ಹಳೆಗನ್ನಡದ ಕೃದಂತಗಳೂ ಸಂಸ್ಕೃತದ ಕೃದಂತಗಳಿಂದ ಭಿನ್ನವಾಗಿವೆ. ಸಂಸ್ಕೃತದಲ್ಲಿ ಅವನ್ನು ನಾಮಪದಗಳೊಂದಿಗೆ ಬಳಸಬೇಕಿದ್ದಲ್ಲಿ, ಅವಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಬೇಕಾಗುತ್ತದೆ; ಆದರೆ, ಹಳೆಗನ್ನಡದ ಕೃದಂತಗಳಿಗೆ ಈ ರೀತಿ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಲು ಸಾಧ್ಯವಾಗದು. ನಾಮಪದಗಳೊಂದಿಗೆ ಅವನ್ನು ಹಾಗೆಯೇ ಬಳಸಬೇಕೆಂಬುದೇ ಹಳೆಗನ್ನಡದ ನಿಯಮ.

(೫ಕ) ಮೃತಂ ಸರ್ಪಂ ಅಪಶ್ಯತ್
'ಸತ್ತ ಹಾವನ್ನು ನೋಡಿದ'

(೫ಖ) ಬಂದ ಬಟ್ಟೆಯಿನೆ ಬಿಜಯಂಗೆಯ್ಯಿಂ
'ಬಂದ ದಾರಿಯಲ್ಲೇ ಹೋಗಿ'

(೫ಕ) ಸಂಸ್ಕೃತ ವಾಕ್ಯದಲ್ಲಿ ಮೃತ 'ಸತ್ತ' ಕೃದಂತವನ್ನು ದ್ವಿತೀಯಾ ವಿಭಕ್ತಿ ಪ್ರತ್ಯಯದೊಂದಿಗೆ ಬಳಸಲಾಗಿದೆ, ಆದರೆ (೫ಖ) ಹಳೆಗನ್ನಡ ವಾಕ್ಯದಲ್ಲಿ ಬಂದ ಕೃದಂತವನ್ನು ಹಾಗೆಯೇ ಯಾವ ಪ್ರತ್ಯಯವನ್ನೂ ಸೇರಿಸದೆ ಬಳಸಲಾಗಿದೆ. ಹಳೆಗನ್ನಡದ ಈ ಬಂದ ಕೃದಂತಕ್ಕೆ ಸಂಸ್ಕೃತದ ಹಾಗೆ ದ್ವಿತೀಯಾ ವಿಭಕ್ತಿಯನ್ನು ಸೇರಿಸಿ ಹೇಳಲು ಸಾಧ್ಯವಾಗದು.

ಹಳೆಗನ್ನಡದಲ್ಲಿ ಕೃದಂತವೊಂದಕ್ಕೆ ವಿಭಕ್ತಿ ಪ್ರತ್ಯಯವನ್ನು ಸೇರಿಸಬೇಕಿದ್ದಲ್ಲಿ, ಅವಕ್ಕೆ ಲಿಂಗ-ವಚನ ಪ್ರತ್ಯಯವನ್ನು ಸೇರಿಸುವ ಅವಶ್ಯಕತೆಯಿದೆ. ಆದರೆ, ಹೀಗೆ ಸೇರಿಸಿದ ಪದರೂಪ

ನಾಮಪದದ ಜಾಗದಲ್ಲಿ ಬರಬಲ್ಲುದಲ್ಲದೆ, ಬೇರೊಂದು ನಾಮಪದದೊಂದಿಗೆ ಅದರ ವಿಶೇಷಣವಾಗಿ ಬರಲಾರದು.

(೫ಗ) ಇರ್ದರಂ ನೆಱೆಯೆ ಮೋಹಿಸಿ
'(ಸಭೆಯಲ್ಲಿ) ಇದ್ದವರನ್ನು ಪೂರ್ಣವಾಗಿ ಮೂರ್ಛೆಗೊಳಿಸಿ'
(೫ಘ) ಉೞಿದುದಂ ಮಾಣಿಸಲ್ ನಾನೆ ಸಾಲ್ವೆನ್
'ಉಳಿದುದನ್ನು ನಿಲ್ಲಿಸಲು ನಾನು ಸಾಕು'

(೫ಗ)ದಲ್ಲಿ ಇರ್ದ ಕೃದಂತಕ್ಕೆ ಲಿಂಗ-ವಚನಗಳನ್ನು ಸೂಚಿಸುವ ಅರ್ ಪ್ರತ್ಯಯವನ್ನು ಸೇರಿಸಿ, ಅನಂತರ ಅಂ ವಿಭಕ್ತಿ ಪ್ರತ್ಯಯವನ್ನು ಸೇರಿಸಲಾಗಿದೆ. ಆದರೆ, ಈ ಪದವನ್ನು ಇಲ್ಲಿ ಸ್ವತಂತ್ರವಾದ ನಾಮಪದದ ಜಾಗದಲ್ಲಿ ಬಳಸಲಾಗಿದೆಯಲ್ಲದೆ, ಬೇರೊಂಡು ಪದದ ವಿಶೇಷಣವಾಗಿ ಬಳಸಿಲ್ಲ. (೫ಘ)ದಲ್ಲೂ ಹೀಗೆಯೇ.

ಹಾಗಾಗಿ, ಬಂದ ಬಟ್ಟೆ, ತೊಳಪ ದಾಡೆ, ಇಲ್ಲದ ನಲ್ಮೆ ಎಂಬಂತಹ ಬಳಕೆಗಳಲ್ಲಿ ಕೃದಂತಗಳಿಗೆ ಸಹಜವಾಗಿರುವಂತಹ ಬಳಕೆಯೇ ಕಾಣಿಸುತ್ತಿದೆಯಲ್ಲದೆ ಸಮಾಸವಾಗಿಲ್ಲ. ಇದಕ್ಕೆ ಬದಲು, ಸಂಸ್ಕೃತದ ಮೃತಸರ್ಪ 'ಸತ್ತ ಹಾವು', ಹತಶತ್ರು 'ಕೊಂದ ಶತ್ರು' ಮೊದಲಾದವುಗಳಲ್ಲಿ ಮೃತ, ಹತ ಮೊದಲಾದ ಕೃದಂತಗಳಿಗೆ 'ಅಸಹಜ'ವಾದ ಬಳಕೆಯಿದೆಯೆಂದು ಹೇಳಲು ಸಾಧ್ಯವಿದೆ.

ಯಾಕೆಂದರೆ, ಸಂಸ್ಕೃತದ ಕೃದಂತಗಳು ನಾಮಪದಗಳಾಗಿದ್ದು, ಬೇರೆ ನಾಮಪದಗಳೊಂದಿಗೆ ಸಹಜರೂಪದಲ್ಲಿ ಬರುವಾಗಲೆಲ್ಲ ಅವು ವಿಭಕ್ತಿ ಪ್ರತ್ಯಯದೊಂದಿಗೆ ಬರುತ್ತವೆ; ಮೃತಸರ್ಪ, ಹತಶತ್ರು ಮೊದಲಾದ ಬಳಕೆಗಳಲ್ಲಿ ಈ ವಿಭಕ್ತಿ ಪ್ರತ್ಯಯ ಬಿದ್ದುಹೋಗಿದೆಯೆಂದು ಹೇಳಲು ಸಾಧ್ಯವಿದೆಯಾದ ಕಾರಣ, ಇಲ್ಲಿ ಸಮಾಸವಾಗಿದೆಯೆಂದೂ ಹೇಳಲು ಸಾಧ್ಯವಿದೆ.

ಆದರೆ, ಹಳೆಗನ್ನಡದ ಬಂದ ಬಟ್ಟೆ, ತೊಳಪ ದಾಡೆ ಮೊದಲಾದವುಗಳಲ್ಲಿ ಈ ರೀತಿ ವಿಭಕ್ತಿ ಪ್ರತ್ಯಯ ಬಿದ್ದುಹೋಗಿದೆಯೆಂದು ಹೇಳಲು ಸಾಧ್ಯವಿಲ್ಲವಾದ ಕಾರಣ, ಇವುಗಳಲ್ಲಿ ಸಮಾಸವಾಗಿದೆಯೆಂದು ಹೇಳಲು ಸಾಧ್ಯವಾಗದು.

### ೫.೪.೩ ಬೇರೆ ಪದಗಳ ಬಳಕೆ

ಸಂಸ್ಕೃತದಲ್ಲಿ ನಾಮಪದಗಳೊಂದಿಗೆ ಎಣಿಕೆಯ ಪದಗಳನ್ನಾಗಲಿ, ಇಲ್ಲವೇ ನಿರ್ದೇಶಕ ಪದಗಳನ್ನಾಗಲಿ ಬಳಸುವುದಿದ್ದರೂ, ಆ ನಾಮಪದಗಳೊಂದಿಗೆ ಬರುವ ವಿಭಕ್ತಿ ಪ್ರತ್ಯಯಗಳನ್ನು ಅಂತಹ ಎಣಿಕೆಯ ಪದ ಇಲ್ಲವೇ ನಿರ್ದೇಶಕ ಪದಗಳಿಗೂ ಸೇರಿಸಬೇಕೆಂಬ ನಿಯಮವಿದೆ.

(೬ಕ) ಅಹಂ ಏಕಂ ಘಟಂ ದೃಷ್ಟವಾನ್
'ನಾನು ಒಂದು ಕೊಡವನ್ನು ನೋಡಿದೆ'
(೬ಖ) ತೇನ ಸೂತೇನ ಅಶ್ವಾಃ ಯೋಜಿತಾಃ
'ಆ ಸೂತನು ಕುದುರೆಗಳನ್ನು ರಥಕ್ಕೆ ಕಟ್ಟಿದ'

(೬ಕ)ದಲ್ಲಿ ಏಕ 'ಒಂದು' ಎಂಬ ಎಣಿಕೆಯ ಪದ ದ್ವಿತೀಯಾ ವಿಭಕ್ತಿಯಲ್ಲಿ ಬಂದಿದೆ, ಮತ್ತು (೬ಖ)ದಲ್ಲಿ ಸ 'ಆ' ಎಂಬ ನಿರ್ದೇಶಕ ಪದ ತೇನ ಎಂಬ ತೃತೀಯಾರೂಪದಲ್ಲಿ ಬಂದಿದೆ. ಅವುಗಳೊಂದಿಗೆ ಬಂದಿರುವ ನಾಮಪದಗಳು ಇವೇ ವಿಭಕ್ತಿಗಳಲ್ಲಿ (ಘಟ ಎಂಬುದು ದ್ವಿತೀಯೆಯಲ್ಲಿ ಮತ್ತು ಸೂತ ಎಂಬುದು ತೃತೀಯೆಯಲ್ಲಿ) ಬಂದಿವೆ ಎಂಬುದನ್ನು ಗಮನಿಸಬಹುದು.

ಆದರೆ, ಹಳೆಗನ್ನಡದಲ್ಲಿ ಎಣಿಕೆಯ ಪದಗಳನ್ನಾಗಲಿ, ಇಲ್ಲವೇ ನಿರ್ದೇಶಕ ಪದಗಳನ್ನಾಗಲಿ ನಾಮಪದಗಳೊಂದಿಗೆ ಬಳಸಬೇಕಿದ್ದಲ್ಲಿ, ಅವಕ್ಕೆ ಈ ರೀತಿ ವಿಭಕ್ತಿ ಪ್ರತ್ಯಯಗಳನ್ನು ಸೇರಿಸುವ ಅವಶ್ಯಕತೆಯಿಲ್ಲ, ಮತ್ತು ಹಾಗೆ ಸೇರಿಸಲು ಸಾಧ್ಯವೂ ಇಲ್ಲ.

(೭ಕ) ಒರಡಿಯನಣಂ ನಡೆಯಲುಂ ಆಱದೆ
'ಒಂದು ಹೆಜ್ಜೆಯನ್ನೂ ಇಡಲು ಸಾಧ್ಯವಾಗದೆ'
(೭ಖ) ತೇಜೋಗುಣಂ ಆ ಕ್ಷತ್ರಿಯರೊಳ್ ನೆಲಸಿ ನಿಂದುದು
'ತೇಜೋಗುಣ ಆ ಕ್ಷತ್ರಿಯರಲ್ಲಿ ಸ್ಥಿರವಾಗಿ ನಿಂದಿತು'

(೭ಕ)ದಲ್ಲಿ ಓರ್ ಎಣಿಕೆಯ ಪದ, ಮತ್ತು (೭ಖ)ದಲ್ಲಿ ಆ ಎಂಬ ನಿರ್ದೇಶಕ ಪದ ಇವೆರಡೂ ವಿಭಕ್ತಿ ಪ್ರತ್ಯಯಗಳ ಸಹಾಯವಿಲ್ಲದೆ ನಾಮಪದಗಳೊಂದಿಗೆ ಬಂದಿವೆ. ಹಳೆಗನ್ನಡದಲ್ಲಿ ಇವು ವಿಭಕ್ತಿ ಪ್ರತ್ಯಯಗಳೊಂದಿಗೆ ಬರಬೇಕಿದ್ದಲ್ಲಿ, ವಿಶೇಷಣಗಳಾಗಿ ಬರುವ ಬದಲು, ಕೆಳಗೆ ಕೊಟ್ಟಿರುವ ವಾಕ್ಯಗಳಲ್ಲಿ ಕಾಣಿಸಿದ ಹಾಗೆ, ನಾಮಪದಗಳ ಜಾಗದಲ್ಲಿ ಬರಬೇಕು.

(೮ಕ) ನರೇಂದ್ರಂ ತನಗೆ ಒಂದಂ ತಂದನ್
'ರಾಜನು ತನಗೆ ಒಂದನ್ನು ತಂದನು'
(೮ಖ) ತೇಜೋಗುಣಂ ಅವರೊಳ್ ನೆಲಸಿ ನಿಂದುದು
'ತೇಜೋಗುಣ ಅವರಲ್ಲಿ ಸ್ಥಿರವಾಗಿ ನಿಂದಿತು'

ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವೆ ಇಂತಹ ವ್ಯತ್ಯಾಸವಿದೆಯಾದ ಕಾರಣ, ಸಂಸ್ಕೃತದ ಏಕಘಟ ಮತ್ತು ತತ್ಸೂತ ಎಂಬವುಗಳ ಹಾಗೆ ಹಳೆಗನ್ನಡದ ಓರಡಿ ಮತ್ತು ಆ ಕ್ಷತ್ರಿಯ ಎಂಬವುಗಳನ್ನು ಸಮಸ್ತಪದಗಳೆಂದು ಪರಿಗಣಿಸಲು ಆಧಾರವಿಲ್ಲ.

ಹಳೆಗನ್ನಡದಲ್ಲಿ ಕೆಲವು ಎಣಿಕೆಯ ಪದಗಳ ಮತ್ತು ಗುಣಪದಗಳ ನಾಮರೂಪಗಳು ಮಾತ್ರ ನಾಮಪದಗಳೊಂದಿಗೂ (ಪದಕಂತೆಗಳಲ್ಲಿ) ಬರಬಲ್ಲುವು. ಆದರೆ ಈ ರೂಪಗಳೂ ವಿಭಕ್ತಿ ಪ್ರತ್ಯಯಗಳೊಂದಿಗೆ ಬರುವುದಿಲ್ಲ. ಉದಾಹರಣೆಗಾಗಿ, ಕೆಳಗಿನ ಬಳಕೆಗಳನ್ನು ಗಮನಿಸಬಹುದು:

(೯ಕ) ನರೇಂದ್ರಂ ತನಗೆ ಒಂದು ಮಾರಿಯಂ ತಂದನ್
'ರಾಜನು ತನಗೆ ಒಂದು ಮಾರಿಯನ್ನು ತಂದುಕೊಂಡನು'
(೯ಖ) ಆನನಕ್ಕೆ ಪಿರಿದುಂ ದೀನತ್ವಮಂ ಮಾಡಿದನಾವನ್
'ಮುಖಕ್ಕೆ ವಿಶೇಷವಾದ ಬಾಡುವಿಕೆಯನ್ನು ಉಂಟು ಮಾಡಿದವನು ಯಾರು'

(೯ಕ)ದಲ್ಲಿ ಒಂದು ಎಂಬುದು (ಎಣಿಕೆಯ ಪದದ ನಾಮರೂಪ) ಮಾರಿ ಎಂಬ ನಾಮಪದದೊಂದಿಗೆ ಬಂದಿದೆ; ಆದರೆ, ಅದರೊಂದಿಗೆ ಅಂ ಪ್ರತ್ಯಯ ಬಂದಿಲ್ಲ. ಇದೇ ರೀತಿಯಲ್ಲಿ, (೯ಖ)ದಲ್ಲಿ ಪಿರಿದು ಎಂಬುದು (ಗುಣಪದದ ನಾಮರೂಪ) ದೀನತ್ವ ಎಂಬ ನಾಮಪದದೊಂದಿಗೆ ಬಂದಿದೆ; ಆದರೆ, ಅದರೊಂದಿಗೆ ಅಂ ವಿಭಕ್ತಿ ಪ್ರತ್ಯಯ ಬಂದಿಲ್ಲ.

ಮೇಲೆ ವಿವರಿಸಿದ ಹಾಗೆ, ಸಂಸ್ಕೃತದ ಸಮಸ್ತಪದಗಳ ರಚನೆಯಲ್ಲಿ ನಾಮಪದಗಳು ಮಾತ್ರ ಬಳಕೆಯಾಗುತ್ತವೆ; ಅವ್ಯಯಗಳ ಬಳಕೆಯೂ ಇರುವುದು ನಿಜವಾದರೂ, ಸಂಸ್ಕೃತದ

ವೈಯಾಕರಣಿಗಳು ಅವನ್ನು ನಾಮಪದಗಳ ವರ್ಗದಲ್ಲೇ ಸೇರಿಸಿರುವರಾದ ಕಾರಣ, ಸಂಸ್ಕೃತದ ಸಮಸ್ತಪದಗಳನ್ನು ವರ್ಣಿಸುವಾಗ ನಾಮಪದಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡರೆ ಸಾಕು.

ಹಳೆಗನ್ನಡದ ಸಮಸ್ತಪದಗಳನ್ನು ವರ್ಣಿಸುವಾಗಲೂ ಸಂಸ್ಕೃತದ ಈ ನಿಯಮವನ್ನೇ ಅನುಸರಿಸಿ, ನಾಮಪದಗಳು ಒಟ್ಟುಸೇರಿ ಸಮಾಸವಾಗುವುದೆಂದು ಪ್ರಾಚೀನ ವೈಯಾಕರಣಿಗಳು ಹೇಳಿದ್ದಾರೆ. (ಕೇಶಿರಾಜ, ಸೂ. ೧೭೩ ನೋಡಿ). ಆದರೆ, ನಿಜಕ್ಕೂ ಹಳೆಗನ್ನಡ ಸಮಸ್ತಪದಗಳಲ್ಲಿ ಎರಡನೆಯ ಪದ ಮಾತ್ರ ನಾಮಪದವಾಗಿರುವ ಅವಶ್ಯಕತೆಯಿದೆ. ಮೊದಲನೆಯದು ನಾಮಪದವಿರಬಹುದು, ಕ್ರಿಯಾಪದವಿರಬಹುದು ಇಲ್ಲವೇ ಗುಣಪದವಿರಬಹುದು. ಅದು ಒಂದು ಅವ್ಯಯವಾಗಿರಲೂ ಸಾಧ್ಯವಿದೆ.

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವಿರುವ ಈ ಮುಖ್ಯವಾದ ಮತ್ತು ವ್ಯಾಕರಣದ ಮೂಲತತ್ವದಲ್ಲೇನೇ ಕಾಣಿಸುವಂತಹ ವ್ಯತ್ಯಾಸವನ್ನು ಹಳೆಗನ್ನಡದ ವೈಯಾಕರಣಿಗಳು ಸರಿಯಾಗಿ ಗಮನಿಸಿಲ್ಲ.

### ೫.೪.೪ ಹಳೆಗನ್ನಡದ ಬಹುವ್ರೀಹಿ

ಎರಡು ಪದಗಳನ್ನು ಒಟ್ಟು ಸೇರಿಸಿ ಹೊಸದೊಂದು ಪದವನ್ನು ರಚಿಸಿದಾಗ, ಆ ಎರಡು ಪದಗಳಲ್ಲಿ ಒಂದೂ ಅದರ ಪ್ರಧಾನ ಪದವಾಗಿರದೆ, ಹೊರಗಿನದೊಂದು ಪದ ಪ್ರಧಾನ ಪದವಾಗಿದೆಯಾದರೆ, ಅದಕ್ಕೆ ಬಹುವ್ರೀಹಿ ಎಂದು ಹೆಸರು (೫.೩.೧ ನೋಡಿ). ಬಹುವ್ರೀಹಿ ಎಂಬ ಹೆಸರೇ ಸಂಸ್ಕೃತದಲ್ಲಿ ಈ ಸಮಾಸಕ್ಕೆ ಒಂದು ಉದಾಹರಣೆ:

ಬಹು 'ಹೆಚ್ಚು' ಮತ್ತು ವ್ರೀಹಿ 'ಬತ್ತ' ಎಂಬ ಎರಡು ಪದಗಳನ್ನು ಒಟ್ಟು ಸೇರಿಸಿ ರಚಿಸಿದ ಈ ಪದ ಹೆಚ್ಚು ಬತ್ತವನ್ನು ಸಂಗ್ರಹಿಸಿಟ್ಟಿರುವ ಒಬ್ಬ ವ್ಯಕ್ತಿಯನ್ನು ಸೂಚಿಸುತ್ತಿದೆಯಾದ ಕಾರಣ, ಇಲ್ಲಿ ಈ ಪದದ ಅಂಗಗಳಾಗಿರುವ ಬಹು ಮತ್ತು ವ್ರೀಹಿ ಎಂಬ ಎರಡು ಪದಗಳ ಬದಲು, 'ವ್ಯಕ್ತಿ' ಎಂಬ ಬೇರೆಯೇ ಒಂದು ಪದ ಪ್ರಧಾನ ಪದವಾಗಿದೆ.

ಬಹುವ್ರೀಹಿ ಸಮಾಸಕ್ಕೆ ಹಳೆಗನ್ನಡದ ವೈಯಾಕರಣಿಗಳು ಕೊಡುವ ಉದಾಹರಣೆಗಳು ಕರ್ಬುವಿಲ್ಲಂ, ಕಡುಚಾಗಿ, ಚಲವಾದಿ, ನಿಡುಗಣ್ಣಂ ಮೊದಲಾದವುಗಳು. ನಿಜಕ್ಕೂ ಇಲ್ಲಿ ಬಹುವ್ರೀಹಿ ಸಮಾಸವಿದೆಯೆಂದು ಹೇಳುವುದು ಬಹಳ ಕಷ್ಟ. ಉದಾಹರಣೆಗಾಗಿ, ಕರ್ಬುವಿಲ್ಲಂ ಎಂಬುದು 'ಕಬ್ಬನ್ನು ಬಿಲ್ಲಾಗಿ ಪಡೆದವನು' ಎಂಬ ಅರ್ಥವನ್ನು ಕೊಡುತ್ತಿದ್ದು, ಅದು ಒಬ್ಬ ವ್ಯಕ್ತಿಯನ್ನು ಸೂಚಿಸುತ್ತದೆ; ಹಾಗಾಗಿ ಕರ್ಬು ಮತ್ತು ಬಿಲ್ಲು ಎಂಬೆರಡು ಪದಗಳೂ ಇಲ್ಲಿ ಪ್ರಧಾನ ಪದಗಳಲ್ಲ ಎಂಬುದಾಗಿ ವಿವರಣೆಯನ್ನೇನೋ ಕೊಡಬಹುದು.

ಆದರೆ, ಕರ್ಬುವಿಲ್ಲಂ ಪದದಲ್ಲಿ ಕರ್ಬು ಮತ್ತು ವಿಲ್ ಎಂಬೆರಡು ಪದಗಳು ಮಾತ್ರವಲ್ಲದೆ, ಅಂ ಎಂಬ ಪ್ರತ್ಯಯವೂ ಬಂದಿದೆ. ಸಮಸ್ತಪದದ ಅಂಗವಾಗಿರುವ ಈ ಪ್ರತ್ಯಯವೇ 'ವ್ಯಕ್ತಿ' ಎಂಬ ಅರ್ಥವನ್ನು ಕೊಡುವುದಾದ ಕಾರಣ, ಇಲ್ಲಿ ಪ್ರಧಾನ ಪದ ಹೊರಗಿನದು ಎಂದು ವಾದಿಸುವುದಕ್ಕೆ ಆಧಾರವಿಲ್ಲ.

ಇಂತಹ ಪದಗಳ ರಚನೆಯಲ್ಲಿ ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವಿರುವ ವ್ಯತ್ಯಾಸವೇ ಈ ರೀತಿ ಹಳೆಗನ್ನಡ ವೈಯಾಕರಣಿಗಳು ಕೊಡುವ ಸಮಸ್ತಪದಗಳನ್ನು ಬಹುವ್ರೀಹಿಗೆ ಉದಾಹರಣೆಗಳನ್ನಾಗಿ ಮಾಡಲು ಸಾಧ್ಯವಾಗದಿರುವುದಕ್ಕೆ ಮುಖ್ಯ ಕಾರಣ. ಸಂಸ್ಕೃತದ ಪೀತಾಂಬರ, ದೀರ್ಘಬಾಹು, ಪ್ರಾಪ್ತೋದಕ ಮೊದಲಾದ ಬಹುವ್ರೀಹಿ ಪದಗಳಿಗೆ ವಿಭಕ್ತಿ ಪ್ರತ್ಯಯಗಳಿಂದ

ಭಿನ್ನವಾದ ಲಿಂಗ-ವಚನ ಪ್ರತ್ಯಯಗಳ ಸೇರಿಕೆಯಾಗುವುದಿಲ್ಲ. ಹಾಗಾಗಿ, ಅವುಗಳ ಅಂಗಗಳಾಗಿ ಎರಡು ಪದಗಳು ಮಾತ್ರ ಬರುತ್ತವೆ.

ಆದರೆ, ಹಳೆಗನ್ನಡದಲ್ಲಿ ಇಂತಹ ಪದಗಳ ಕೊನೆಯಲ್ಲಿ ಲಿಂಗ-ವಚನ ಪ್ರತ್ಯಯಗಳನ್ನೂ ಸೇರಿಸಬೇಕಾಗಿದ್ದು, ಇವು ವಿಭಕ್ತಿ ಪ್ರತ್ಯಯಗಳಿಂದ ಭಿನ್ನವಾಗಿವೆ. ಅಲ್ಲದೆ, ಈ ಪ್ರತ್ಯಯಗಳನ್ನು ಪದದ ಒಂದು ಅಂಗವೆಂದೇ ಪರಿಗಣಿಸುವ ಅವಶ್ಯಕತೆಯಿದೆ; ಯಾಕೆಂದರೆ, ಮೇಲಿನವುಗಳ ಅರ್ಥವನ್ನು ಇಂತಹ ಲಿಂಗ-ವಚನ ಪ್ರತ್ಯಯವನ್ನು ಪಡೆಯದಿರುವ ಕರ್ಬುವಿಲ್, ಕಡುಚಾಗ, ಚಲವಾದ, ನಿಡುಗಣ್ ಮೊದಲಾದ ಪದಗಳು ಕೊಡಲಾರವು. ಹಾಗಾಗಿ, ಮೇಲೆ ಕೊಟ್ಟಿರುವ ಹಳೆಗನ್ನಡ ಪದಗಳು ಬಹುವ್ರೀಹಿಗೆ ಉದಾಹರಣೆಗಳಾಗಲಾರವು (೫.೪.೪ ನೋಡಿ).

ವೆಂಕಟಾಚಲ ಶಾಸ್ತ್ರೀ (೧೯೯೪:೮೮) ಸೂಚಿಸಿದ ಹಾಗೆ, ಕರ್ಮಧಾರಯದಂತಹ ಸಮಾಸದಿಂದ ಸಿದ್ಧವಾದ ಪದಕ್ಕೆ ಪ್ರತ್ಯಯವೊಂದನ್ನು ಸೇರಿಸಿ ರಚಿಸಿದ ಪದಗಳನ್ನೇ ಹೆಚ್ಚಾಗಿ ಈ ವೈಯಾಕರಣಿಗಳು ಬಹುವ್ರೀಹಿಗೆ ಉದಾಹರಣೆಗಳನ್ನಾಗಿ ಕೊಟ್ಟಿದ್ದಾರೆ. ಇವುಗಳಲ್ಲಿ ಕರ್ಮಧಾರಯಕ್ಕಿಂತ ಭಿನ್ನವಾಗಿರುವ ಬೇರೊಂದು ಸಮಾಸ ಇದೆ ಎನ್ನುವುದಕ್ಕಿಂತಲೂ ಕರ್ಮಧಾರಯದಿಂದ ಸಿದ್ಧವಾದ ನಾಮಪದಕ್ಕೆ ತದ್ಧಿತ ಪ್ರತ್ಯಯವೊಂದು ಸೇರಿದೆ (ಕಡುವಿಲ್-ಕಡುವಿಲ್ಲಂ, ಅಲರ್ಗಣ್-ಅಲರ್ಗಣ್ಣಳ್, ಅಲರ್ಗಣ್ಣರ್, ನಿಡುಮೂಗು-ನಿಡುಮೂಗಿ) ಎಂದು ಹೇಳುವುದೇ ಉತ್ತಮ.

ಕಲ್ಲೆರ್ದೆ, ಕಡುಗಲ್ಲೆರ್ದೆ, ಧೈರ್ಯಾಂಬುರಾಶಿ, ಕಿತ್ತಡಿ ಎಂಬಂತಹ ಪದಗಳಲ್ಲಿ ಮಾತ್ರ ಈ ರೀತಿ ಪ್ರತ್ಯಯ ಸೇರದಿದ್ದರೂ ಅನ್ಯಪದದ ಅರ್ಥ ಪ್ರಧಾನವಾಗಿದೆಯಾದ ಕಾರಣ, ಅಂತಹ ಪದಗಳನ್ನು ಮಾತ್ರ ನ್ಯಾಯವಾಗಿ ಬಹುವ್ರೀಹಿಗೆ ಉದಾಹರಣೆಗಳೆಂದು ಹೇಳಲು ಸಾಧ್ಯವಿದೆ (ವೆಂಕಟಾಚಲ ಶಾಸ್ತ್ರೀ ೧೯೯೪:೮೮ ನೋಡಿ).

### ೫.೪.೫ ಅವ್ಯಯೀಭಾವ

ಹಳೆಗನ್ನಡದ ಕಿಳ್ಪೊಡೆ, ಕಿಟ್ಕೆಚ್, ಮುಂಗೈ, ಅಂಗೈ, ಬೆಂಬಿಸಿಲ್, ಅಂಗಾಲ್ ಮೊದಲಾದುವನ್ನು ಅವ್ಯಯೀಭಾವ ಸಮಾಸಕ್ಕೆ ಉದಾಹರಣೆಗಳನ್ನಾಗಿ ಕೊಡಲಾಗಿದೆ. ಇವು ಹಳೆಗನ್ನಡದಲ್ಲಿ 'ಅವ್ಯಯ'ಗಳಲ್ಲವಾದ ಕಾರಣ, ಅವ್ಯಯೀಭಾವ ಎಂಬ ಹೆಸರು ಇವಕ್ಕೆ ತಕ್ಕುದಲ್ಲ. ಇದನ್ನು ಗಮನಿಸಿದ ಭಟ್ಟಾಕಳಂಕನು ಈ ಸಮಾಸಕ್ಕೆ 'ಅಂಶಿ' ಎಂಬ ಬೇರೊಂದು ಹೆಸರನ್ನು ಬಳಸಿದ್ದಾನೆ (ಸೂ. ೩೦೬). ಇವುಗಳಲ್ಲಿ ಬಳಕೆಯಾಗಿರುವ ಎರಡು ಪದಗಳ ನಡುವೆ ಅಂಶಾಂಶಿ ಸಂಬಂಧವಿದೆ; ಈ ಪದಗಳಲ್ಲಿ ಮೊದಲನೆಯದು ಒಂದು ಅಂಶವನ್ನೂ ಎರಡನೆಯದು ಆ ಅಂಶವನ್ನು ಪಡೆದಿರುವ ಒಂದು ಅಂಶಿಯನ್ನೂ ಸೂಚಿಸುತ್ತವೆ ಎಂಬುದೇ ಇದಕ್ಕೆ ಆಧಾರ.

ಈ ಸಮಾಸಕ್ಕೆ ವೈಯಾಕರಣಿಗಳು ಕೊಡುವ ಉದಾಹರಣೆಗಳಲ್ಲಿ ಎಲ್ಲವೂ ಈ ರೀತಿ ಅಂಶಾಂಶಿ ಸಂಬಂಧವನ್ನು ತೋರಿಸುವ ಹಾಗೆ ಕಾಣಿಸುವುದಿಲ್ಲ, ಮತ್ತು ಎಲ್ಲವುಗಳಲ್ಲೂ ಪ್ರಧಾನಪದ ಮೊದಲನೆಯ ಅಂಗವಾಗಿರುವ ಹಾಗೆಯೂ ಕಾಣಿಸುವುದಿಲ್ಲ.

ಉದಾಹರಣೆಗಾಗಿ, ಕಿಟ್ಪೊಡೆ ಎಂಬುದು ಹೊಟ್ಟೆಯ ಕೆಳಭಾಗವನ್ನು ಸೂಚಿಸುವುದಾದ ಕಾರಣ, ಅದರಲ್ಲಿ ಬಂದಿರುವ ಪದಗಳಲ್ಲಿ ಕಿಟ್ 'ಕೆಳಗೆ' ಎಂಬುದಾಗಲೀ, ಇಲ್ಲವೇ ಪೊಡೆ 'ಹೊಟ್ಟೆ' ಎಂಬುದಾಗಲೀ ಅದರ ಪ್ರಧಾನ ಪದವಾಗಲಾರದು. ಇದಕ್ಕೆ ಬದಲು, ಭಾಗ ಎಂಬ ಈ ಸಮಸ್ತಪದದ ಹೊರಗಿರುವ ಪದವೇ ಅದರ ಪ್ರಧಾನ ಪದವೆಂದು ಹೇಳಬೇಕಾಗುತ್ತದೆ. ಹಾಗಾಗಿ, ಇದು ಅವ್ಯಯೀಭಾವಕ್ಕಿಂತಲೂ ಬಹುವ್ರೀಹಿಗೆ ಉತ್ತಮ ಉದಾಹರಣೆಯಾಗಬಲ್ಲುದು.

ಅಂಗೈ, ಅಂಗಾಲ್, ಮುಂಗೈ ಮೊದಲಾದವುಗಳೂ ಇಂತಹವೇ ಎಂದು ತೋರುತ್ತದೆ. ಕಿಟ್ಕೆಱೆ ಎಂಬುದಕ್ಕೆ ಕಿಟ್ಟೆಲ್ ಡಿಕ್ಷನರಿಯಲ್ಲಿ 'ಕೆಳಗಿನ ಕೆರೆ' ಎಂಬ ಅರ್ಥ ಕೊಡಲಾಗಿದೆ. ಈ ಅರ್ಥದಲ್ಲಿ ಅದು ಕರ್ಮಧಾರಯವಾಗ ಬಲ್ಲುದಲ್ಲದೆ ಅವ್ಯಯೀಭಾವವಾಗಲಾರದು. 'ಕೆರೆಯ ಕೆಳಭಾಗ' ಎಂಬ ಅರ್ಥವೂ ಇದಕ್ಕಿದೆ; ಆದರೆ ಈ ಅರ್ಥದಲ್ಲಿ ಅದು ಬಹುವ್ರೀಹಿಗೆ ಉದಾಹರಣೆಯಾಗಬಲ್ಲುದಲ್ಲದೆ ಅವ್ಯಯೀಭಾವಕ್ಕೆ ಉದಾಹರಣೆಯಾಗಲಾರದು.

ನಾಗವರ್ಮನು (ಸೂ. ೧೬೯)ರಲ್ಲಿ ಈ ಪದವನ್ನು ಅವ್ಯಯೀಭಾವಕ್ಕೆ ಉದಾಹರಣೆಯಾಗಿ ಕೊಟ್ಟಿದ್ದಾನೆ; ಆದರೆ, ಯಾವ ಅರ್ಥದಲ್ಲಿ ಇದು ಅವ್ಯಯೀಭಾವವಾಗಬಲ್ಲುದು ಎಂಬುದು ಸ್ಪಷ್ಟವಾಗಿಲ್ಲ.

### ೫.೪.೬ ಕ್ರಿಯಾಸಮಾಸ

ಸಮಸ್ತಪದಗಳಲ್ಲಿ ಮೊದಲನೆಯ ಅಂಗ ಕ್ರಿಯಾಪದವಾಗಿದ್ದರೆ (ಸುಡುಗಾಡು, ಬಿಡುವೆಣ್, ಅಡುಗಬ್ಬು), ಅದನ್ನು 'ಕ್ರಿಯಾಸಮಾಸ'ವೆಂದು ಕರೆಯಲು ಸಾಧ್ಯ ಎಂಬುದಾಗಿ ಮೇಲೆ ೫.೩.೨ರಲ್ಲಿ ಸೂಚಿಸಿದ್ದೆ. ಆದರೆ ಹಳೆಗನ್ನಡದ ವ್ಯಾಕರಣಗಳಲ್ಲಿ ಕ್ರಿಯಾಸಮಾಸವೆಂಬ ಪದವನ್ನು ಬೇರೆಯೇ ಒಂದು ಅರ್ಥದಲ್ಲಿ ಬಳಸಲಾಗಿದೆ.

ಮೊದಲನೆಯ ಅಂಗ ನಾಮಪದವಾಗಿದ್ದು, ಎರಡನೆಯದು ಕ್ರಿಯಾಪದವಾಗಿರುವ ಸೆಱೆಯಿರ್ದಂ, ಗುಣಂಗೊಂಡಂ, ಬಳಿದೊಟ್ಟಂ, ಪಾಲ್ಕುಡಿದೆಂ ಮೊದಲಾದವುಗಳಲ್ಲಿ ಕ್ರಿಯಾಸಮಾಸವಿದೆಯೆಂದು ಈ ವೈಯಾಕರಣಿಗಳು ಹೇಳುತ್ತಾರೆ. ಕೇಶಿರಾಜನ ಪ್ರಕಾರ, ಇದನ್ನು ಮತ್ತು ಗಮಕ ಸಮಾಸವನ್ನು (೫.೪.೭ ನೋಡಿ) ಕನ್ನಡದ ವಿಶೇಷ ಲಕ್ಷಣಗಳೆಂದು ಪರಿಗಣಿಸುವ ಅವಶ್ಯಕತೆಯಿದೆ.

ಆದರೆ, ನಿಜಕ್ಕೂ ಈ ಪದಗಳಲ್ಲಿ ಎರಡು ಪದಗಳು ಸೇರಿ ಹೊಸದೊಂದು ಪದ ಸೃಷ್ಟಿಯಾಗಿಲ್ಲ. ಹಾಗಾಗಿ, ಇವನ್ನು ಸಮಾಸವೆಂಬ 'ಪದರಚನೆ'ಯ ವಿಧಾನದ ಮೂಲಕ ವರ್ಣಿಸುವ ಬದಲು, ಅದಕ್ಕಿಂತ ತೀರ ಭಿನ್ನವಾಗಿರುವ 'ವಾಕ್ಯರಚನೆ'ಯ ವಿಧಾನದ ಮೂಲಕ ವರ್ಣಿಸುವುದೇ ಒಳ್ಳೆಯದು.

ಈ ಪ್ರಯೋಗಗಳಲ್ಲಿ ಸಾಮಾನ್ಯವಾಗಿ ನಾಮಪದದ ದ್ವಿತೀಯಾ ವಿಭಕ್ತಿ ಲೋಪಗೊಂಡಿರುವುದನ್ನು (ಪಾಲಂ ಕುಡಿದೆಂ > ಪಾಲ್ಕುಡಿದೆಂ) ಕಾಣುತ್ತೇವೆ. ಮುಂದೆ ೮.೨ರಲ್ಲಿ ಸೂಚಿಸಿರುವ ಹಾಗೆ, ಹಳೆಗನ್ನಡದಲ್ಲಿ ವಿಭಕ್ತಿ ಪ್ರತ್ಯಯಗಳನ್ನು ಅವಶ್ಯವಿಲ್ಲದಲ್ಲಿ ಬಳಸದಿರಲೂ ಸಾಧ್ಯ ಎಂಬ ನಿಯಮವೇ ಇಂತಹ ಪ್ರಯೋಗಗಳಿಗೆ ಆಧಾರ. ಹಾಗಾಗಿ, ಈ ಪ್ರಯೋಗಗಳಲ್ಲಿ ಕಾಣಿಸುವುದು ವಾಕ್ಯರಚನೆಯ ನಿಯಮವಲ್ಲದೆ ಪದರಚನೆಯ ನಿಯಮವಲ್ಲ. ಇಂತಹ ಕೆಲವು ಬಳಕೆಗಳಲ್ಲಿ ದ್ವಿತೀಯಾ ವಿಭಕ್ತಿ ಸಂಕ್ಷಿಪ್ತಗೊಂಡು ಬಿಂದು ರೂಪದಲ್ಲಿ ಉಳಿಯುವುದೂ ಇದೆ (ಪದಂಗೊಂಡಂ, ಮೊಗಂನೋಡಿದಂ).

### ೫.೪.೭ ಗಮಕ ಸಮಾಸ

ಈ ಸಮಾಸಕ್ಕೆ ಹಳೆಗನ್ನಡ ವೈಯಾಕರಣಿಗಳು ಕೊಟ್ಟಿರುವ ಉದಾಹರಣೆಗಳನ್ನು ಪರಿಶೀಲಿಸಿದಾಗ, ಒಂದು ವಿಷಯ ಸ್ಪಷ್ಟವಾಗುತ್ತದೆ: ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಕಾಣಿಸುವ ಒಂದು ಮುಖ್ಯವಾದ ವ್ಯತ್ಯಾಸವನ್ನು ಅವರು ಪರಿಗಣಿಸದಿರುವುದೇ ಇವನ್ನು ಗಮಕ ಸಮಾಸವೆಂಬ ಒಂದು ಹೊಸ ರೀತಿಯ ಸಮಾಸವೆಂಬುದಾಗಿ, ಮತ್ತು ಕನ್ನಡದ ವಿಶೇಷ ಲಕ್ಷಣಗಳಲ್ಲಿ ಒಂದೆಂಬುದಾಗಿ, ತಿಳಿಯಲು ಕಾರಣ.

ಸಂಸ್ಕೃತದಲ್ಲಿ ಗುಣಪದ, ನಿರ್ದೇಶಕ ಪದ, ಕೃದಂತ ಮೊದಲಾದವುಗಳು ನಾಮಪದಗಳೇ. ಹಾಗಾಗಿ, ಅವನ್ನು ಇನ್ನೊಂದು ನಾಮಪದದೊಂದಿಗೆ (ಅವುಗಳ ವಿಶೇಷಣಗಳನ್ನಾಗಿ ಮಾಡಿ) ಬಳಸಬೇಕಿದ್ದಲ್ಲಿ, ಅವುಗಳೊಂದಿಗೆ ವಿಭಕ್ತಿ ಪ್ರತ್ಯಯಗಳನ್ನು ಬಳಸುವ ಅವಶ್ಯಕತೆಯಿದೆ (೫.೪.೧-೩ ನೋಡಿ).

ಆದರೆ, ಹಳೆಗನ್ನಡದಲ್ಲಿ ಇವು ನಾಮಪದಗಳಿಗಿಂತ ಭಿನ್ನವಾಗಿರುವ ಪದವರ್ಗಗಳಲ್ಲಿ ಬರುತ್ತಿದ್ದು, ಅವನ್ನು ಹಾಗೆಯೇ ನಾಮಪದಗಳ ವಿಶೇಷಣಗಳನ್ನಾಗಿ ಬಳಸಲು ಸಾಧ್ಯವಿದೆ. ಅವಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಬೇಕಿದ್ದಲ್ಲಿ, ಮೊದಲಿಗೆ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸಿ, ಅವನ್ನು ನಾಮರೂಪಕ್ಕೆ ಬದಲಾಯಿಸಿಕೊಳ್ಳಬೇಕಾಗುತ್ತದೆ. ಇದಲ್ಲದೆ, ಸಾಮಾನ್ಯವಾಗಿ ಇಂತಹ ಗುಣಪದ, ನಿರ್ದೇಶಕ ಪದ, ಕೃದಂತ ಮೊದಲಾದವುಗಳ ನಾಮರೂಪಗಳು ಬೇರೊಂದು ನಾಮಪದದ ವಿಶೇಷಣಗಳಾಗಿ ಬರಲಾರವು.

ಸಂಸ್ಕೃತದಲ್ಲಿ ನಾಮಪದಗಳೊಂದಿಗೆ ಈ ಪದಗಳನ್ನು ವಿಭಕ್ತಿ ಪ್ರತ್ಯಯವನ್ನು ಸೇರಿಸದೆಯೂ ಬಳಸಲು ಸಾಧ್ಯವಿದೆ, ಮತ್ತು ಇಂತಹ ಸಂದರ್ಭಗಳಲ್ಲಿ ಅವು ನಾಮಪದದೊಂದಿಗೆ ಸೇರಿ ಸಮಸ್ತಪದಗಳಾಗಿವೆಯೆಂದು ಹೇಳಲು ಸಾಧ್ಯವಿದೆ (೫.೪.೧-೩ ನೋಡಿ). ಯಾಕೆಂದರೆ, ಇಂತಹ ಪ್ರಯೋಗಗಳಲ್ಲಿ ಈ ಪದಗಳ ವಿಭಕ್ತಿ ಪ್ರತ್ಯಯ ಲೋಪಗೊಂಡಿದೆಯೆಂದು ಹೇಳಲು ಸಾಧ್ಯವಿದೆ.

ಆದರೆ, ಹಳೆಗನ್ನಡದಲ್ಲಿ ವಿಭಕ್ತಿ ಪ್ರತ್ಯಯವಿಲ್ಲದೆ ಬರುವುದೇ ಇವುಗಳ ಸಹಜ ಪ್ರಯೋಗ. ಹಾಗಾಗಿ, ಇವುಗಳ ಬಳಕೆಯಲ್ಲಿ ವಿಭಕ್ತಿ ಪ್ರತ್ಯಯ ಲೋಪಗೊಂಡಿದೆಯೆಂದು ಹೇಳಲು ಸಾಧ್ಯವಾಗದು. ಹಾಗಾಗಿ, ಇವುಗಳ ಬಳಕೆಯಲ್ಲಿ ಸಮಾಸವೆಂಬ ಪ್ರಕ್ರಿಯೆ ನಡೆದಿದೆಯೆಂದು ಹೇಳಲೂ ಕೂಡ ಸಾಧ್ಯವಾಗದು.

ಹಳೆಗನ್ನಡದ ವೈಯಾಕರಣಿಗಳು ಹೇಳುವಂತಹ ಕ್ರಿಯಾಸಮಾಸ ಮತ್ತು ಗಮಕ ಸಮಾಸಗಳು ನಿಜಕ್ಕೂ ಸಮಾಸಗಳಲ್ಲ, ವಾಕ್ಯಾಂಗಗಳು ಮಾತ್ರ ಎಂದು ವಾದಿಸುವುದಕ್ಕೆ ಅವುಗಳಿಗೂ ಇತರ ಸಮಾಸಗಳಿಗೂ ನಡುವಿರುವ ಕೆಲವು ವ್ಯತ್ಯಾಸಗಳನ್ನೂ ಆಧಾರವಾಗಿ ಕೊಡಬಹುದು (ವೆಂಕಟಾಚಲ ಶಾಸ್ತ್ರೀ ೧೯೯೪:೮೨-೩ ನೋಡಿ):

(೧) ಸಮಾಸದಲ್ಲಿ ಎರಡು ಪದಗಳು ಒಟ್ಟು ಸೇರಿ ಒಂದೇ ಪದವಾಗುತ್ತದೆ ಎಂಬ ನಿಯಮವಿದೆ. ಈ ನಿಯಮಕ್ಕೆ ಗಮಕ ಸಮಾಸ ಅಪವಾದ. ಎರಡು ಪದಗಳು ಇಲ್ಲಿ ಬಿಡಿ ಬಿಡಿಯಾಗಿ ಬರುತ್ತವೆ (ಬಿಳಿಯ ಕೊಡೆ, ಆಡುವ ಪೊಲಂ).

(೨) ಗಮಕ ಸಮಾಸದ ಎರಡು ಪದಗಳ ನಡುವೆ ಬೇರೆ ಪದಗಳನ್ನು ಇರಿಸಿದರೂ ಆ 'ಸಮಸ್ತಪದ'ದ ಅರ್ಥದಲ್ಲಿ ವ್ಯತ್ಯಾಸವಾಗುವುದಿಲ್ಲ.

(೩) ಕರ್ಮಧಾರಯವೇ ಮೊದಲಾದ ಸಮಸ್ತಪದಗಳಿಗೆ ಗಮಕ ಸಮಾಸದಲ್ಲಿರುವ ಸಮಸ್ತಪದವೊಂದನ್ನು 'ವಿಗ್ರಹವಾಕ್ಯ'ವಾಗಿ ಕೊಡಲು ಸಾಧ್ಯವಿದೆ. ಉದಾಹರಣೆಗಾಗಿ, ಬೆಳ್ಗೊಡೆ ಎಂಬುದು ಕರ್ಮಧಾರಯ ಸಮಾಸದಲ್ಲಿರುವ ಸಮಸ್ತಪದ; ಇದಕ್ಕೆ ವಿಗ್ರಹವಾಕ್ಯವಾಗಿ ಕೊಡುವ ಬಿಳಿಯ ಕೊಡೆ ಎಂಬುದು ಗಮಕ ಸಮಾಸದಲ್ಲಿರುವ ಸಮಸ್ತಪದ.

(೪) ಗಮಕ ಸಮಾಸದಲ್ಲಿ ಒಟ್ಟಿಗೆ ಸೇರಿಕೊಳ್ಳುವ ಎರಡು ಪದಗಳೂ ತಮ್ಮ ಅರ್ಥವನ್ನು ಬದಲಾಯಿಸದೆ ಹಾಗೆಯೇ ಉಳಿಸಿಕೊಳ್ಳುತ್ತವೆ. ಇದು ಸಮಾಸದ ಒಂದು ಮುಖ್ಯ ಗುಣಧರ್ಮಕ್ಕೆ ವಿರುದ್ಧವಾಗಿದೆ.

(೫) ಹಳೆಗನ್ನಡದ ಸಮಾಸಗಳಲ್ಲೆಲ್ಲ ಎರಡನೆಯ ಪದ ನಾಮಪದ ಎಂಬ ನಿಯಮಕ್ಕೆ (೫.೩.೨ ನೋಡಿ) ಗಮಕ ಸಮಾಸ ಮತ್ತು ಕ್ರಿಯಾಸಮಾಸಗಳು ಮಾತ್ರ ಅಪವಾದಗಳಾಗುತ್ತವೆ.

(೬) ಹಳೆಗನ್ನಡ ಸಮಸ್ತಪದಗಳಲ್ಲಿ ಕನ್ನಡ ಪದಗಳೊಂದಿಗೆ ಸಂಸ್ಕೃತದಿಂದ ಎರವಲಾಗಿ ಬಂದ ಪದಗಳು ಸೇರುವುದಿಲ್ಲ ಎಂಬ ನಿಯಮಕ್ಕೆ ಗಮಕ ಮತ್ತು ಕ್ರಿಯಾಸಮಾಸಗಳು ಅಪವಾದಗಳಾಗುತ್ತವೆ (ಪೂಸಿದ ಭಸ್ಮಪರಾಗಂ, ಪ್ರಿಯಂನುಡಿದಂ).

(೭) ಕೇಶಿರಾಜನು ಮೊದಲಿಗೆ (ಸೂ. ೧೭೨ರಲ್ಲಿ) ಕೊಟ್ಟಿರುವ ಸಮಾಸದ ವರ್ಣನೆಗೆ (ನಾಮಪದಂಗಳ್ ಅರ್ಥದೊಳ್ ಅನುಗತಂಗಳಾಗೆ ಸಮಾಸಂ ಘಟಿಸುಗುಂ ಎಂಬುದಕ್ಕೆ) ಗಮಕ ಮತ್ತು ಕ್ರಿಯಾ ಸಮಾಸಗಳು ಅಪವಾದಗಳಾಗುತ್ತವೆ. ಯಾಕೆಂದರೆ, ಅವುಗಳಲ್ಲಿ ನಾಮಪದವಲ್ಲದವೂ ಬರುತ್ತವೆ.

ಈ ವ್ಯತ್ಯಾಸಗಳಲ್ಲಿ ಹೆಚ್ಚಿನವೂ ಪದ ಮತ್ತು ಪದಕಂತೆಗಳ ನಡುವಿರುವ ವ್ಯತ್ಯಾಸಗಳೇ ಎಂಬುದನ್ನು ಇಲ್ಲಿ ಗಮನಿಸಬಹುದು.

### ೫.೫ ಸಾರಾಂಶ

ಪದಗಳ ಒಳರಚನೆಯನ್ನು ವಿವರಿಸುವಲ್ಲಿ ಹಳೆಗನ್ನಡ ವೈಯಾಕರಣಿಗಳು ಹಲವು ತಪ್ಪುಗಳನ್ನು ಮಾಡಿದ್ದಾರೆ. ಇವುಗಳಲ್ಲಿ ಹೆಚ್ಚಿನವೂ ಸಂಸ್ಕೃತದ ಪದರಚನೆಯ ನಿಯಮಗಳನ್ನು ಹಾಗೆಯೇ ಹಳೆಗನ್ನಡಕ್ಕೆ ಅಳವಡಿಸಲು ಪ್ರಯತ್ನಿಸಿದುದರಿಂದಾಗಿ ಮೂಡಿಬಂದಿವೆ.

ಉದಾಹರಣೆಗಾಗಿ, ಹಳೆಗನ್ನಡದ ಸಮಸ್ತಪದಗಳಲ್ಲಿ ಮೊದಲನೆಯ ಪದ ಯಾವ ಪದವರ್ಗಕ್ಕೆ ಸೇರುತ್ತದೆ ಎಂಬುದೇ ಆದರ ಸಮಾಸಗಳನ್ನು ವಿಭಜಿಸಲು ಉತ್ತಮ ಆಧಾರ. ಆದರೆ, ಸಂಸ್ಕೃತದಲ್ಲಿ ಪ್ರಧಾನ ಪದ ಯಾವುದು ಎಂಬ ವಿಷಯವನ್ನು ಇಂತಹ ವಿಭಜನೆಗೆ ಆಧಾರವಾಗಿ ಮಾಡಲಾಗಿದೆ. ಹಳೆಗನ್ನಡದ ಸಮಸ್ತಪದಗಳಿಗೆ ಸಂಸ್ಕೃತದ ಈ ವಿಭಜನೆ ಯೋಗ್ಯವಾದುದಲ್ಲ.

ಈ ಎರಡು ಭಾಷೆಗಳ ನಡುವೆ ವ್ಯಾಕರಣದ ಮೂಲತತ್ವಗಳಲ್ಲೇನೇ ಕಾಣಿಸುವಂತಹ ವ್ಯತ್ಯಾಸಗಳನ್ನು ಗಮನದಲ್ಲಿರಿಸಿಕೊಂಡು, ಹಳೆಗನ್ನಡದ ಪದರಚನೆಯ ನಿಯಮಗಳನ್ನು ಕಂಡುಹಿಡಿಯಲು ಪ್ರಯತ್ನಿಸಿದಲ್ಲಿ ಮಾತ್ರ, ಅವುಗಳ ಹಿಂದಿರುವ ನಿಯಮಗಳು ಎಂತಹವೆಂಬ ವಿಷಯ ಸ್ಪಷ್ಟವಾದೀತು.

ಅಧ್ಯಾಯ ಆರು

# ನಾಮಪದಗಳ ಸ್ವರೂಪ

## ೬.೧ ನಾಮಪದಗಳ ವಿಭಜನೆ

ಹಳೆಗನ್ನಡದಲ್ಲಿ ಬಳಕೆಯಾಗುವ ನಾಮಪದಗಳ ವಿಭಜನೆಗೆ ಎರಡು ವಿಷಯಗಳು ಆಧಾರವಾಗಬಲ್ಲುವು: ಅವುಗಳಿಗೆ ಎಂತಹ ಒಳರಚನೆಯಿದೆ ಎಂಬುದು ಒಂದು, ಮತ್ತು ವಾಕ್ಯದಲ್ಲಿ ಬಳಕೆಯಾಗುವಾಗ ಅವು ಎಂತಹ ಗುಣಧರ್ಮಗಳನ್ನೆಲ್ಲ ತೋರಿಸುತ್ತವೆ ಎಂಬುದು ಇನ್ನೊಂದು.

ಇವುಗಳಲ್ಲಿ ಮೊದಲನೆಯ ವಿಷಯವನ್ನಾಧರಿಸಿ ಹಳೆಗನ್ನಡದ ನಾಮಪದಗಳನ್ನು ಹೇಗೆ ವಿಂಗಡಿಸಬಹುದು ಎಂಬುದನ್ನು ಈ ಅಧ್ಯಾಯದಲ್ಲೂ, ಎರಡನೆಯ ವಿಷಯವನ್ನಾಧರಿಸಿ ಹೇಗೆ ವಿಂಗಡಿಸಬಹುದು ಎಂಬುದನ್ನು ಮುಂದಿನ (ಏಳನೇ) ಅಧ್ಯಾಯದಲ್ಲೂ ಪರಿಶೀಲಿಸಲಾಗುವುದು.

### ೬.೧.೧ 'ಲಿಂಗ' ಪದದ ಅವಶ್ಯಕತೆ

ಸಂಸ್ಕೃತದಲ್ಲಿ ವಿಭಕ್ತಿ ಮತ್ತು ವಚನಗಳನ್ನು ಒಂದೇ ಪ್ರತ್ಯಯ ಸೂಚಿಸುವುದಾದ ಕಾರಣ, ದ್ವಿವಚನ ಮತ್ತು ಬಹುವಚನಗಳನ್ನು ಮಾತ್ರವಲ್ಲದೆ ಏಕವಚನವನ್ನು ಸೂಚಿಸುವುದಕ್ಕಾಗಿಯೂ ಆ ಭಾಷೆಯಲ್ಲಿ ಪ್ರತ್ಯಯದ ಬಳಕೆಯಾಗುತ್ತದೆ. ಹಾಗಾಗಿ, ವಿಭಕ್ತಿ-ವಚನ ಪ್ರತ್ಯಯವನ್ನು ಸೇರಿಸದೆ ಯಾವ ನಾಮಪದವನ್ನೂ ಸಂಸ್ಕೃತದ ವಾಕ್ಯಗಳಲ್ಲಿ ಬಳಸಲು ಸಾಧ್ಯವಾಗುವುದಿಲ್ಲ.

ಉದಾಹರಣೆಗಾಗಿ, ಸಂಸ್ಕೃತದ ಕಾಂತೇನ ಪದದಲ್ಲಿರುವ ಏನ ಎಂಬ ತೃತೀಯಾ-ಏಕವಚನ ಪ್ರತ್ಯಯವನ್ನು ತೆಗೆದಾಗ ಉಳಿಯುವ ಕಾಂತ್ (ಇಲ್ಲವೇ ಕಾಂತ) ರೂಪಕ್ಕೆ ವ್ಯಾಕರಣದಲ್ಲಿ ಮಾತ್ರ ಸ್ಥಾನವಿದೆಯಲ್ಲದೆ ನಿಜಕ್ಕೂ ವಾಕ್ಯದಲ್ಲಿ ಸ್ಥಾನವಿಲ್ಲ. ಅದು ವೈಯಾಕರಣಿಗಳು ಕಲ್ಪಿಸಿಕೊಂಡಿರುವ ಪದರೂಪ ಮಾತ್ರ.

ಈ ಕಾರಣಕ್ಕಾಗಿ, ಸಂಸ್ಕೃತ ವ್ಯಾಕರಣಗಳಲ್ಲಿ ನಾಮಪದದಿಂದ ವಿಭಕ್ತಿ-ವಚನ ಪ್ರತ್ಯಯವನ್ನು ತೆಗೆದಾಗ ಉಳಿಯುವ ಅಂಶಕ್ಕೆ ಬೇರೆಯೇ ಒಂದು ಹೆಸರನ್ನು ಕೊಡುವ ಅವಶ್ಯಕತೆಯಿದೆ. ಇದನ್ನು ಕೆಲವರು (ಪಾಣಿನಿಯೇ ಮೊದಲಾದವರು) 'ಪ್ರಾತಿಪದಿಕ' ಎಂದು ಕರೆದಿದ್ದಾರೆ, ಮತ್ತು ಬೇರೆ ಕೆಲವರು (ಜೈನ ವೈಯಾಕರಣಿಗಳು) 'ಲಿಂಗ' ಎಂದು ಕರೆದಿದ್ದಾರೆ.

ಹಳೆಗನ್ನಡದ ನಾಮಪದಗಳಲ್ಲಿ ವಚನವನ್ನು ಸೂಚಿಸುವ ಪ್ರತ್ಯಯ ವಿಭಕ್ತಿಯನ್ನು ಸೂಚಿಸುವ ಪ್ರತ್ಯಯದಿಂದ ಭಿನ್ನವಾಗಿದೆ; ಹಾಗಾಗಿ, ಬಹುವಚನವನ್ನು ಸೂಚಿಸುವುದಕ್ಕಾಗಿ ಮಾತ್ರ ಹಳೆಗನ್ನಡದ ನಾಮಪದಗಳಿಗೆ ವಚನ ಪ್ರತ್ಯಯವನ್ನು ಸೇರಿಸಬೇಕಾಗುತ್ತದೆ. ನಾಮಪದದೊಂದಿಗೆ ಯಾವ ಪ್ರತ್ಯಯವನ್ನೂ ಬಳಸದಿದ್ದಾಗ ಅದಕ್ಕೆ ಏಕವಚನದ ಅರ್ಥ ಬರುತ್ತದೆ.

ಈ ಕಾರಣಕ್ಕಾಗಿ, ಹಳೆಗನ್ನಡದಲ್ಲಿ ನಾಮಪದದ ಪದರೂಪವೊಂದರಿಂದ ವಿಭಕ್ತಿ ಇಲ್ಲವೇ ವಚನ ಪ್ರತ್ಯಯವನ್ನು ತೆಗೆದಾಗ ಉಳಿಯುವ ಅಂಶ ನಾಮಪದವೇ ಆಗಿರುತ್ತದೆ. ಹಾಗಾಗಿ,

ಹಳೆಗನ್ನಡ ವ್ಯಾಕರಣದಲ್ಲಿ 'ನಾಮಪದ' ಎಂಬುದಕ್ಕಿಂತ ಭಿನ್ನವಾಗಿರುವ 'ಪ್ರಾತಿಪದಿಕ' ಇಲ್ಲವೇ 'ಲಿಂಗ' ಎಂಬ ಪದವನ್ನು ಬಳಸುವ ಅವಶ್ಯಕತೆಯೇ ಇಲ್ಲ.

ಉದಾಹರಣೆಗಾಗಿ, ಒಡಲಂ ಎಂಬುದರಿಂದ ಅಂ ವಿಭಕ್ತಿ ಪ್ರತ್ಯಯವನ್ನು ತೆಗೆದಾಗ ಉಳಿಯುವ ಒಡಲ್ ಎಂಬುದು, ಇಲ್ಲವೇ ಕನಸುಗಳ್ ಎಂಬುದರಿಂದ ಗಳ್ ಬಹುವಚನ ಪ್ರತ್ಯಯವನ್ನು ತೆಗೆದಾಗ ಉಳಿಯುವ ಕನಸು ಎಂಬುದು, ಇವೆರಡೂ ವಾಕ್ಯಗಳಲ್ಲಿ ಬರಬಲ್ಲ ನಾಮಪದ ರೂಪಗಳಲ್ಲದೆ ಕಲ್ಪಿತ ರೂಪಗಳಲ್ಲ.

ಹೀಗಿದ್ದರೂ, ಸಂಸ್ಕೃತ ವ್ಯಾಕರಣಗಳಲ್ಲಿ 'ಲಿಂಗ' ಎಂಬ ಪಾರಿಭಾಷಿಕ ಪದದ ಬಳಕೆಯಾಗಿದೆಯೆಂಬ ಕಾರಣಕ್ಕಾಗಿ, ಕನ್ನಡದ ಪ್ರಾಚೀನ ವೈಯಾಕರಣಿಗಳು ಅದನ್ನು ಹಳೆಗನ್ನಡ ವ್ಯಾಕರಣಗಳಲ್ಲೂ ಬಳಸಿದ್ದಾರೆ.

### ೬.೧.೨ ಕೃದಂತ ಮತ್ತು ತದ್ಧಿತಾಂತ

ಸಂಸ್ಕೃತದಲ್ಲಿ ಕೃದಂತ, ತದ್ಧಿತಾಂತ ಮತ್ತು ಸಮಾಸ ಎಂಬುದಾಗಿ ಮೂರು ವಿಧದ ಪ್ರಾತಿಪದಿಕಗಳು (ಲಿಂಗಗಳು) ಮಾತ್ರ ಇವೆ ಎಂದು ಹೇಳಲು ಸಾಧ್ಯವಿದೆ. ಯಾಕೆಂದರೆ, ಸಂಸ್ಕೃತದಲ್ಲಿ ಬಳಕೆಯಾಗುವ ಹೆಚ್ಚುಕಡಿಮೆ ಎಲ್ಲಾ ನಾಮಪದಗಳಿಗೂ ಮೂಲದಲ್ಲಿ (ಕ್ರಿಯಾ)ಧಾತುವೊಂದನ್ನು ಕಾಣಲು ಸಾಧ್ಯವಿದೆ. ಇಂತಹ ಧಾತುವಿಗೆ ಒಂದು ಇಲ್ಲವೇ ಹೆಚ್ಚು ಪ್ರತ್ಯಯಗಳನ್ನು ಸೇರಿಸುವುದರ ಮೂಲಕ, ಇಲ್ಲವೇ ಎರಡು ಅಥವಾ ಹೆಚ್ಚು ನಾಮಪದಗಳನ್ನು ಒಟ್ಟಿಗೆ ಸೇರಿಸುವುದರ ಮೂಲಕ ಅದರ ನಾಮಪದಗಳನ್ನು ಸಾಧಿಸಲಾಗುತ್ತದೆ.

ಹಾಗಾಗಿ, ಸಂಸ್ಕೃತದ ನಾಮಪದಗಳನ್ನು (೧) (ಕ್ರಿಯಾ)ಧಾತುಗಳಿಗೆ ಒಂದು ಪ್ರತ್ಯಯವನ್ನು ಸೇರಿಸಿರುವ ಕೃದಂತ, (೨) ಒಂದಕ್ಕಿಂತ ಹೆಚ್ಚು ಪ್ರತ್ಯಯಗಳನ್ನು ಸೇರಿಸಿರುವ ತದ್ಧಿತಾಂತ, ಮತ್ತು (೩) ಎರಡು ಅಥವಾ ಹೆಚ್ಚು ನಾಮಪದಗಳನ್ನು ಒಟ್ಟು ಸೇರಿಸಿರುವ ಸಮಾಸ ಎಂಬುದಾಗಿ ವಿಭಜಿಸಲು ಸಾಧ್ಯವಾಗುತ್ತದೆ.

ಹಳೆಗನ್ನಡದ ವೈಯಾಕರಣಿಗಳು ಇದೇ ವಿಭಜನೆಯನ್ನು ಹಳೆಗನ್ನಡಕ್ಕೂ ಅಳವಡಿಸಲು ಪ್ರಯತ್ನಿಸಿದ್ದಾರೆ. ಆದರೆ, ಹಳೆಗನ್ನಡ ನಾಮಪದಗಳ ಒಳರಚನೆ ಸಂಸ್ಕೃತದ ನಾಮಪದಗಳ ಒಳರಚನೆಗಿಂತ ತೀರ ಭಿನ್ನವಾಗಿದೆಯಾದ ಕಾರಣ, ತೊಂದರೆಯಾಗಿದೆ.

(೧) ಹಳೆಗನ್ನಡದಲ್ಲಿ ಕ್ರಿಯಾಧಾತುಗಳಿಂದ ಸಾಧಿಸಲು ಸಾಧ್ಯವಾಗದಂತಹ ನಾಮಪದಗಳು ಬೇಕಾದಷ್ಟಿವೆ. ಹಾಗಾಗಿ ಕೃದಂತ, ತದ್ಧಿತಾಂತ ಮತ್ತು ಸಮಾಸ ಎಂಬ ಮೂರು ಪದವರ್ಗಗಳು ಮಾತ್ರವಲ್ಲದೆ, 'ನಾಮ' ಎಂಬ ನಾಲ್ಕನೆಯ ಪದವರ್ಗವನ್ನೂ ನಾಮಪದಗಳ ವಿಭಜನೆಯಲ್ಲಿ ಬಳಸಬೇಕಾಗಿದೆ (ಕೇಶಿರಾಜನ ಸೂ. ೮೨ ನೋಡಿ).

(೨) ಹಳೆಗನ್ನಡದಲ್ಲಿ ಕ್ರಿಯಾಪದಗಳಿಗೆ ಒಂದಕ್ಕಿಂತ ಹೆಚ್ಚು ಪ್ರತ್ಯಯಗಳನ್ನು ಸೇರಿಸಿ ತಯಾರಿಸಿದ ನಾಮಪದಗಳು ಬಹಳ ಕಡಿಮೆ. ಹೆಚ್ಚಿನ ನಾಮಪದಗಳ ಒಳರಚನೆಯಲ್ಲೂ ಒಂದು ಪದಪ್ರತ್ಯಯ ಮಾತ್ರ ಕಾಣಿಸಿಕೊಳ್ಳುತ್ತದೆ. ಆದರೆ, ಸಂಸ್ಕೃತದಲ್ಲಿ ಎರಡು ಅಥವಾ ಹೆಚ್ಚು ಪದಪ್ರತ್ಯಯಗಳನ್ನು ಬಳಸಿ ರಚಿಸಿರುವ ನಾಮಪದಗಳು ಬೇಕಾದಷ್ಟಿವೆ.

ಈ ಕಾರಣಕ್ಕಾಗಿ, ಕೃದಂತ ಮತ್ತು ತದ್ಧಿತಾಂತ ಎಂಬ ಸಂಸ್ಕೃತದ ಪಾರಿಭಾಷಿಕ ಪದಗಳನ್ನು ಹಳೆಗನ್ನಡ ವ್ಯಾಕರಣಗಳಲ್ಲಿ ಬಳಸಲಾಗಿದೆಯಾದರೂ, ಅವಕ್ಕೆ ಬೇರೆಯೇ ಅರ್ಥವನ್ನು ಕೊಡಬೇಕಾಗಿದೆ. ಇಲ್ಲಿ ಒಂದು ಮುಖ್ಯವಾದ ವಿಷಯವನ್ನು ಗಮನಿಸುವುದು ಅವಶ್ಯ:

ಸಾಮಾನ್ಯವಾಗಿ, ಭಾಷೆಗಳಲ್ಲಿ ಪದ ಮತ್ತು ಪದರೂಪ ಎಂಬವುಗಳೊಳಗೆ ವ್ಯತ್ಯಾಸವಿರುತ್ತದೆ. ಪ್ರತ್ಯಯಗಳ ಮೂಲಕ ಒಂದು ಪದವರ್ಗಕ್ಕೆ ಸೇರಿದ ಪದಗಳಿಂದ ಬೇರೊಂದು ಪದವರ್ಗಕ್ಕೆ ಸೇರಬಲ್ಲ 'ಪದ'ಗಳನ್ನಾಗಲಿ, ಇಲ್ಲವೇ ಬೇರೊಂದು ಪದವರ್ಗದ ಕೆಲಸದಲ್ಲಿ ಬಳಕೆಯಾಗುವುದಿದ್ದರೂ ಅದೇ ಪದ ವರ್ಗದಲ್ಲಿ ಉಳಿಯುವ 'ಪದರೂಪ'ಗಳನ್ನಾಗಲಿ ತಯಾರಿಸಲು ಸಾಧ್ಯವಿದೆ (೫. ೨.೧ ನೋಡಿ).

ಉದಾಹರಣೆಗಾಗಿ, ಹಳೆಗನ್ನಡದಲ್ಲಿ ಸಾಮಾನ್ಯವಾಗಿ ಒಂದು ಘಟನೆಯನ್ನು ಸೂಚಿಸುವ ಕೆಲಸವನ್ನು ಕ್ರಿಯಾಪದಗಳು ಮಾಡುತ್ತವೆ, ಮತ್ತು ಆ ಘಟನೆಯಲ್ಲಿ ತೊಡಗಿಕೊಂಡಿರುವ ವ್ಯಕ್ತಿ, ವಸ್ತು, ವಿಷಯ ಮೊದಲಾದುವನ್ನು ಗುರುತಿಸುವ ಕೆಲಸವನ್ನು ನಾಮಪದಗಳು ಮಾಡುತ್ತವೆ. ಕಾಂತಕಂ ಕಾರಾಗೃಹಕ್ಕೆ ಪೋದಂ ಎಂಬ ವಾಕ್ಯದಲ್ಲಿ ಘಟನೆಯನ್ನು ಸೂಚಿಸುವ ಕೆಲಸವನ್ನು ಪೋಗು ಕ್ರಿಯಾಪದ ಮಾಡುತ್ತದೆ, ಮತ್ತು ಆ ಘಟನೆಯಲ್ಲಿ ತೊಡಗಿಕೊಂಡಿರುವ ವ್ಯಕ್ತಿ ಮತ್ತು ವಸ್ತುಗಳನ್ನು ಗುರುತಿಸುವ ಕೆಲಸವನ್ನು ಕಾಂತಕಂ ಮತ್ತು ಕಾರಾಗೃಹಂ ನಾಮಪದಗಳು ನಡೆಸುತ್ತವೆ.

ಆದರೆ, ಕೆಲವು ವಿಶಿಷ್ಟವಾದ ಸಂದರ್ಭಗಳಲ್ಲಿ ವ್ಯಕ್ತಿ, ವಸ್ತು, ವಿಷಯ ಮೊದಲಾದುವನ್ನು ಗುರುತಿಸುವ ಕೆಲಸವನ್ನು ಕ್ರಿಯಾಪದಗಳ ಮೂಲಕವೂ ನಡೆಸಲು ಸಾಧ್ಯವಿದೆ. ಹಳೆಗನ್ನಡದಲ್ಲಿ ಇದಕ್ಕೆ ಎರಡು ವಿಧಾನಗಳು ಬಳಕೆಯಾಗುತ್ತವೆ: ಕ್ರಿಯಾಪದಗಳನ್ನು ಅವುಗಳ 'ನಾಮರೂಪ'ಕ್ಕೆ ಬದಲಾಯಿಸುವುದು ಒಂದು ವಿಧಾನ, ಮತ್ತು ಅವನ್ನೇ ಬೇರೊಂದು 'ನಾಮಪದ'ವಾಗಿ ಬದಲಾಯಿಸುವುದು ಇನ್ನೊಂದು ವಿಧಾನ.

ಉದಾಹರಣೆಗಾಗಿ, ಕೂರದನ್ ಇದನ್ ಒಡ್ಡಿದನ್ 'ಪ್ರೀತಿಸದವನು ಇದನ್ನು ಒಡ್ಡಿದ್ದಾನೆ' ಎಂಬ ವಾಕ್ಯದಲ್ಲಿ ಕೂರ್ ಕ್ರಿಯಾಪದದ ಕೂರದನ್ ನಾಮರೂಪದ ಮೂಲಕ ಒಬ್ಬ ವ್ಯಕ್ತಿಯನ್ನು ಗುರುತಿಸಲಾಗಿದೆ, ಮತ್ತು ಉಡೆಯನುಟ್ಟು ಬಂದಂ 'ಬಟ್ಟೆಯನ್ನು ಧರಿಸಿ ಬಂದ' ಎಂಬ ವಾಕ್ಯದಲ್ಲಿ ಉಡು ಕ್ರಿಯಾಪದದಿಂದ ಉಡೆ ನಾಮಪದವನ್ನು ತಯಾರಿಸಿ, ಅದರ ಮೂಲಕ ಒಂದು ವಸ್ತು(ಬಟ್ಟೆ)ವನ್ನು ಗುರುತಿಸಲಾಗಿದೆ.

ಸಂಸ್ಕೃತದ ವ್ಯಾಕರಣಗಳಲ್ಲಿ ಪದ ಮತ್ತು ಪದರೂಪಗಳ ನಡುವಿರುವ ಈ ವ್ಯತ್ಯಾಸವನ್ನು ಸಾಮಾನ್ಯವಾಗಿ ಕಡೆಗಣಿಸಲಾಗಿದೆ. ಹೀಗೆ ಮಾಡಲು ಸಂಸ್ಕೃತದಲ್ಲಿ ಈ ವ್ಯತ್ಯಾಸ ಹೆಚ್ಚಿನ ಮಟ್ಟಿಗೆ ಅಳಿದುಹೋಗಿರುವುದೇ ಕಾರಣವಿರಬೇಕು (೫.೨.೧ ನೋಡಿ). ವೇದಕಾಲದ ಸಂಸ್ಕೃತದಲ್ಲಿ ಈ ವ್ಯತ್ಯಾಸ ಸ್ಪಷ್ಟವಾಗಿ ಕಾಣಿಸುತ್ತಿತ್ತು; ಆದರೆ, ಕ್ರಮೇಣ ಕಾವ್ಯಗಳ ಕಾಲಕ್ಕೆ ಬರುತ್ತಿದ್ದಂತೆ, ಅದು ಅಳಿದು ಹೋಗುತ್ತಾ ಬಂದಿದೆ.

ಸಂಸ್ಕೃತ ಭಾಷೆ ಮಾತಿನ ಬಳಕೆಯಿಂದ ಬೇರ್ಪಟ್ಟು ಬರಿಯ ಬರಹದ ಬಳಕೆಯಲ್ಲಿ ಮಾತ್ರ ಉಳಿದಿರುವುದೇ ಇಂತಹ ಭಾಷೆಯ ಸಹಜತೆಗೆ ಸಂಬಂಧಿಸಿದ ಹಲವು ಸೂಕ್ಷ್ಮ ವ್ಯತ್ಯಾಸಗಳು ಅದರಿಂದ ಕಾಣೆಯಾಗಿರುವುದಕ್ಕೆ ಮುಖ್ಯ ಕಾರಣ.

ಮೇಲೆ ಸೂಚಿಸಿದ ಹಾಗೆ, ಸಂಸ್ಕೃತದ ವ್ಯಾಕರಣಗಳಲ್ಲಿ ಕೃದಂತ ಮತ್ತು ತದ್ಧಿತಾಂತಗಳೆಂಬುದಾಗಿ ಕ್ರಿಯಾಧಾತುಗಳಿಂದ ಸಿದ್ಧವಾಗುವ ನಾಮಪದಗಳನ್ನು ವಿಭಜಿಸಿರುವಲ್ಲಿ ಪದ ಮತ್ತು ಪದರೂಪಗಳ ನಡುವಿರುವ ವ್ಯತ್ಯಾಸವನ್ನು ಕಡೆಗಣಿಸಲಾಗಿದೆ. ಸಿದ್ಧವಾಗಿರುವ ನಾಮಪದಗಳಲ್ಲಿ ಪ್ರತ್ಯಯಗಳೆಷ್ಟಿವೆ ಎಂಬ ಒಂದು ಅಂಶಕ್ಕೆ ಮಾತ್ರವೇ ಪ್ರಾಧಾನ್ಯತೆಯನ್ನು ಕೊಡಲಾಗಿದೆ. ಉದಾಹರಣೆಗಾಗಿ, ಕ್ರಿಯಾಧಾತುವಿಗೆ ಒಂದೇ ಪ್ರತ್ಯಯವನ್ನು ಸೇರಿಸಿ ತಯಾರಿಸಿರುವ ಹಲವು ರೀತಿಯ ನಾಮಪದಗಳನ್ನು ಕೃದಂತ ಎಂಬ ಹೆಸರಿನಿಂದ ಕರೆಯಲಾಗಿದೆ.

ಭೂ 'ಆಗು' ಧಾತುವಿನಿಂದ ತಯಾರಾದ ಭವತ್, ಭವಿಷ್ಯತ್, ಭೂತ, ಭವಿತವ್ಯ, ಭಾವ, ಭಾವಿನ್, ಭವನ ಮೊದಲಾದವುಗಳು, ಭೀ ಧಾತುವಿನಿಂದ ತಯಾರಾದ ಭಯ, ವದ್ ಧಾತುವಿನಿಂದ ಬಂದ ವದನ 'ಮುಖ', ವಿಶ್ ಧಾತುವಿನಿಂದ ತಯಾರಾದ ವೇಶ್ಮನ್ 'ಮನೆ', ಬುಧ್ ಧಾತುವಿನಿಂದ ತಯಾರಾದ ಬುದ್ಧಿ, ಗ್ರಹ್ ಧಾತುವಿನಿಂದ ತಯಾರಾದ ಗ್ರಾಹಕ, ಇಂತಹವೆಲ್ಲವೂ ಸಂಸ್ಕೃತದಲ್ಲಿ ಕೃದಂತಗಳೆಂದೆನಿಸುತ್ತವೆ.

ಆದರೆ, ಹಳೆಗನ್ನಡದಲ್ಲಿ ಕೃದಂತ ಮತ್ತು ತದ್ಧಿತಾಂತ ಪದಗಳನ್ನು ಈ ಅರ್ಥದಲ್ಲಿ ಬಳಸುವುದು ಅಷ್ಟೊಂದು ತೃಪ್ತಿಕರವಾಗಲಾರದು. ಯಾಕೆಂದರೆ, ಮೇಲೆ ಸೂಚಿಸಿದ ಹಾಗೆ, ಹಳೆಗನ್ನಡದಲ್ಲಿ ಒಂದಕ್ಕಿಂತ ಜಾಸ್ತಿ ಪ್ರತ್ಯಯಗಳಿರುವ ಸಾಧಿತ ನಾಮಪದಗಳು ಬಹಳ ಕಡಿಮೆ. ಬಹುಶಃ ಈ ಕಾರಣಕ್ಕಾಗಿ, ಹಳೆಗನ್ನಡದ ವೈಯಾಕರಣಿಗಳು ಕ್ರಿಯಾಪದಗಳ ನಾಮರೂಪಗಳನ್ನು (ಕೂರದನ್ ಎಂಬಂತಹವನ್ನು) ಕೃಲ್ಲಿಂಗಗಳೆಂದೂ, ಕ್ರಿಯಾಪದಗಳಿಂದ (ಇಲ್ಲವೇ ನಾಮಪದ ಮತ್ತು ಗುಣಪದಗಳಿಂದ) ಸಿದ್ಧವಾದ ನಾಮಪದಗಳನ್ನು ತದ್ಧಿತ ಲಿಂಗಗಳೆಂದೂ ಕರೆದಿರಬೇಕು.

ಆದರೆ, ಕನ್ನಡ ಕೈಪಿಡಿಯಲ್ಲಿ (ಪು. ೧೫) ಕ್ರಿಯಾಧಾತುಗಳಿಗೆ ಸೇರುವ ಪ್ರತ್ಯಯಗಳನ್ನು ಕೃತ್ ಪ್ರತ್ಯಯಗಳೆಂದೂ ಇತರ (ನಾಮ ಇಲ್ಲವೇ ಗುಣ) ಧಾತುಗಳಿಗೆ ಇಲ್ಲವೇ ಕೃದಂತಗಳಿಗೆ ಸೇರುವ ಪ್ರತ್ಯಯಗಳನ್ನು ತದ್ಧಿತ ಪ್ರತ್ಯಯಗಳೆಂದೂ ವಿಭಜಿಸಲಾಗಿದೆ. ಈ ವಿಭಜನೆಯಲ್ಲಿ ಮೇಲೆ ಸೂಚಿಸಿದ ಪದ ಮತ್ತು ಪದರೂಪಗಳ ನಡುವಿನ ವ್ಯತ್ಯಾಸವನ್ನು ಕಡೆಗಣಿಸಲಾಗಿದೆ (೬.೧.೩ ನೋಡಿ).

## ೬.೧.೩ ಕೃಲ್ಲಿಂಗಗಳು

ಹಳೆಗನ್ನಡ ವ್ಯಾಕರಣಗಳಲ್ಲಿ ಕ್ರಿಯಾಪದಗಳ ಭೂತ ಮತ್ತು ಭವಿಷ್ಯತ್ಕಾಲದ ನಾಮರೂಪಗಳನ್ನು (ನಲಿದಂ, ಬೇಡುವಂ) ಮಾತ್ರ ಕೃಲ್ಲಿಂಗಗಳೆಂದು ಕರೆದಿರುವ ಹಾಗೆ ಕಾಣಿಸುತ್ತದೆ (ಕೇಶಿರಾಜನ ಸೂ. ೮೩ ನೋಡಿ). (ಭಟ್ಟಾಕಳಂಕನು ದಪ ಪ್ರತ್ಯಯದಿಂದ ತಯಾರಾದ ರೂಪವನ್ನೂ ಇವಕ್ಕೆ ಸೇರಿಸಿದ್ದಾನೆ). ಮೇಲೆ ಸೂಚಿಸಿದ ಹಾಗೆ, ಹಳೆಗನ್ನಡದಲ್ಲಿ ಇವು ಸ್ಪಷ್ಟವಾಗಿ ನಾಮಪದಗಳ ಕೆಲಸದಲ್ಲಿ ಬಳಸುವುದಕ್ಕಾಗಿ ತಯಾರಾದ ಕ್ರಿಯಾಪದಗಳ ಪದರೂಪಗಳಲ್ಲದೆ ಅವುಗಳಿಂದ ಸಿದ್ಧವಾದ ನಾಮಪದಗಳಲ್ಲ.

ಇದಕ್ಕೆ ಬದಲು, ನಡುಕ (ಕೇಶಿರಾಜನ ಸೂ. ೨೨೪), ಕೇಡು (ಕಿಡು), ಈಡು (ಇಡು), ಆಟ (ಆಡು) (ಸೂ. ೨೨೪) ಮೊದಲಾದವುಗಳಲ್ಲಿ ಕ್ರಿಯಾಧಾತುಗಳಿಗೆ ಒಂದೇ ಪ್ರತ್ಯಯ ಸೇರಿದೆಯಾದರೂ, ಅವನ್ನು ತದ್ಧಿತ ಲಿಂಗಗಳೆಂದು ಕರೆಯಲಾಗಿದೆ. ಇವು ಕ್ರಿಯಾಪದಗಳಿಂದ ತಯಾರಾದ ನಾಮಪದಗಳಲ್ಲದೆ, ಅವುಗಳ ಪದರೂಪಗಳಲ್ಲವೆಂಬುದೇ ಇದಕ್ಕೆ ಕಾರಣವಿರಬಹುದು.

ನಾಮಪದಗಳ ವಿಭಜನೆಗಾಗಿ ಸಂಸ್ಕೃತ ವ್ಯಾಕರಣ ನಿಯಮಗಳನ್ನು ಹಾಗೆಯೇ ಅಳವಡಿಸುವ ಪ್ರಯತ್ನ ನಡೆಸಿದುದರಿಂದಾಗಿ, ಹಳೆಗನ್ನಡ ವ್ಯಾಕರಣಗಳಲ್ಲಿ ಇನ್ನೊಂದು ತಪ್ಪು ಸಂಭವಿಸಿದೆ: ಹಳೆಗನ್ನಡದ ಮಾಡಿದ, ಪೇೞ್ದ, ಪೋದ ಮೊದಲಾದ ಕೃದಂತಗಳು ಸಂಸ್ಕೃತದ ಕೃತ, ಉಕ್ತ, ಗತ ಮೊದಲಾದ ಕೃದಂತಗಳಿಂದ ಎರಡು ವಿಷಯಗಳಲ್ಲಿ ಭಿನ್ನವಾಗಿವೆ.

ಮೊದಲನೆಯದಾಗಿ, ಸಂಸ್ಕೃತದಲ್ಲಿ ಇವನ್ನು ಕ್ರಿಯಾಪದಕ್ಕೆ ತ ಎಂಬ ಒಂದು ಪ್ರತ್ಯಯವನ್ನು ಮಾತ್ರವೇ ಸೇರಿಸಿ ತಯಾರಿಸಲಾಗಿದೆ; ಆದರೆ ಹಳೆಗನ್ನಡದಲ್ಲಿ ಇವನ್ನು ಕ್ರಿಯಾಪದಕ್ಕೆ ಹಿಂದಿನ ಸಮಯವನ್ನು ಸೂಚಿಸುವ ದ್ ಪ್ರತ್ಯಯವನ್ನು ಮತ್ತು ಸಂಬಂಧವನ್ನು ಸೂಚಿಸುವ ಅ ಪ್ರತ್ಯಯವನ್ನು

ಸೇರಿಸಿ ತಯಾರಿಸಲಾಗಿದೆ. ಕೇಶಿರಾಜನು ಹೇಳಿದ ಹಾಗೆ (ಸೂ. ೮೨), ಭೂತ ಕಾಲದ ಕ್ರಿಯಾರೂಪಗಳಿಂದ ಆಗಮವನ್ನುಳಿಸಿಕೊಂಡು ಆಖ್ಯಾತ ಪ್ರತ್ಯಯವನ್ನು ತೆಗೆದಾಗ ಈ ರೂಪಗಳು ಲಭಿಸುವುದಿಲ್ಲ.

ಎರಡನೆಯದಾಗಿ, ಸಂಸ್ಕೃತದಲ್ಲಿ ಕೃದಂತಗಳು ನೇರವಾಗಿ ವಿಭಕ್ತಿ ಪ್ರತ್ಯಯಗಳನ್ನು ಪಡೆಯಬಲ್ಲುವು; ಹಾಗಾಗಿ, ಅವನ್ನು ಲಿಂಗಗಳೆಂದಾಗಲಿ, ಇಲ್ಲವೇ ಪ್ರಾತಿಪದಿಕಗಳೆಂದಾಗಲಿ ಕರೆಯುವುದರಲ್ಲಿ ತೊಂದರೆಯಿಲ್ಲ. ಆದರೆ, ಹಳೆಗನ್ನಡದಲ್ಲಿ ಇವು ನೇರವಾಗಿ ವಿಭಕ್ತಿ ಪ್ರತ್ಯಯಗಳನ್ನು ಪಡೆಯಲಾರವು. ಯಾಕೆಂದರೆ, ಹಳೆಗನ್ನಡದಲ್ಲಿ ಇವು ಕ್ರಿಯಾಪದವನ್ನು ನಾಮಪದದೊಂದಿಗೆ ಸಂಬಂಧಿಸುವುದಕ್ಕಾಗಿ ಬಳಕೆಯಾಗುವ ಪದರೂಪಗಳು (ಎಂದರೆ, ಕ್ರಿಯಾಪದಗಳ ಗುಣರೂಪಗಳು). ಇವಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಬೇಕಿದ್ದಲ್ಲಿ, ಮೊದಲಿಗೆ ಲಿಂಗ-ವಚನಗಳನ್ನು ಸೂಚಿಸುವ ಅನ್, ಅಳ್, ಅರ್, ಉದು, ಉವು ಎಂಬ ಪ್ರತ್ಯಯಗಳಲ್ಲೊಂದನ್ನು ಸೇರಿಸಿ ಅವನ್ನು ನಾಮರೂಪಕ್ಕೆ ಬದಲಾಯಿಸಿಕೊಳ್ಳಬೇಕಾಗುತ್ತದೆ (೪.೨.೧ ನೋಡಿ).

### ೬.೧.೪ ಗುಣಪದಗಳು

ಸಂಸ್ಕೃತದಲ್ಲಿ ಗುಣಪದಗಳು (ಗುಣವಾಚಕಗಳು) ನೇರವಾಗಿ ವಿಭಕ್ತಿ ಪ್ರತ್ಯಯಗಳನ್ನು ಪಡೆಯಬಲ್ಲುವು (೪.೨.೨ ನೋಡಿ). ಹಾಗಾಗಿ, ಅವನ್ನು 'ಲಿಂಗ'ಗಳೆಂದು ಕರೆಯುವುದರಲ್ಲಿ ತೊಂದರೆಯಿಲ್ಲ. ಆದರೆ, ಹಳೆಗನ್ನಡದಲ್ಲಿ ಗುಣಪದಗಳು ವಿಭಕ್ತಿ ಪ್ರತ್ಯಯಗಳೊಂದಿಗೆ ಬರಬೇಕಿದ್ದಲ್ಲಿ, ಅವಕ್ಕೆ ಮೊದಲಿಗೆ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸುವ ಅವಶ್ಯಕತೆಯಿದೆ.

ಸರ್ವನಾಮ ಮತ್ತು ಸಂಖ್ಯಾವಾಚಕಗಳ ಬಳಕೆಯಲ್ಲೂ ಇಂತಹದೇ ವ್ಯತ್ಯಾಸ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಕಾಣಿಸುತ್ತದೆ: ಸಂಸ್ಕೃತದಲ್ಲಿ ಇವೆಲ್ಲವನ್ನೂ ನಾಮಪದವೆಂಬ ಒಂದೇ ವರ್ಗದಲ್ಲಿ ಸೇರಿಸಿ ಹೇಳಲು ಸಾಧ್ಯವಿದೆ; ಆದರೆ, ಹಳೆಗನ್ನಡದಲ್ಲಿ ಇವಕ್ಕೆ ನಾಮಪದ ಮತ್ತು ಗುಣಪದಗಳೆಂಬ ಎರಡು ವರ್ಗಗಳಿಗೆ ಸೇರಬಲ್ಲ ರೂಪಗಳಿವೆ. ಇತರ ಗುಣಪದಗಳ ಹಾಗೆ, ಇವುಗಳಲ್ಲೂ ಗುಣರೂಪಗಳಿಗೆ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ನಾಮರೂಪಗಳನ್ನು ಪಡೆಯಬೇಕಾಗುತ್ತದೆ (೬.೨ ನೋಡಿ).

ಈ ಎಲ್ಲಾ ಸಂದರ್ಭಗಳಲ್ಲೂ ಸಂಸ್ಕೃತದ ವ್ಯಾಕರಣ ನಿಯಮಗಳನ್ನು ನೇರವಾಗಿ ಕನ್ನಡಕ್ಕೆ ಅಳವಡಿಸುವ ಪ್ರಯತ್ನವನ್ನು ನಡೆಸಿರುವುದರಿಂದಾಗಿ ಹಳೆಗನ್ನಡ ವೈಯಾಕರಣಿಗಳು ಎಡವಿದ್ದಾರೆ ಎಂಬುದನ್ನು ಮುಂದೆ ನೋಡಲಿರುವೆವು.

### ೬.೨ ಕೃಲ್ಲಿಂಗಗಳ ಸ್ವರೂಪ

ಮೇಲೆ (೬.೧.೩)ರಲ್ಲಿ ಸೂಚಿಸಿದ ಹಾಗೆ, ಕ್ರಿಯಾಪದಗಳ ನಾಮರೂಪಗಳನ್ನು, ಎಂದರೆ ವಾಕ್ಯಗಳಲ್ಲಿ ನಾಮಪದಗಳ ಜಾಗದಲ್ಲಿ ಬರಬಲ್ಲ ಕ್ರಿಯಾಪದಗಳ ಪದರೂಪಗಳನ್ನು, 'ಕೃಲ್ಲಿಂಗ'ಗಳೆಂದು ಕರೆಯಲಾಗಿದೆ. ಹಳೆಗನ್ನಡದಲ್ಲಿ ಇವು ಕ್ರಿಯಾಪದಗಳ ನಾಮರೂಪಗಳಾಗಿದ್ದು, ಇವಕ್ಕೂ ಕ್ರಿಯಾಪದಗಳ ಗುಣರೂಪಗಳಿಗೂ ನಡುವೆ ಒಂದು ಮುಖ್ಯವಾದ ವ್ಯತ್ಯಾಸವಿದೆ ಎಂಬುದನ್ನು ನಾವು (೬.೧.೩)ರಲ್ಲಿ ನೋಡಿರುವೆವು.

ಕ್ರಿಯಾಪದಗಳ ಗುಣರೂಪವನ್ನು ಸಾಧಿಸಲು ಅವುಗಳೊಂದಿಗೆ ಸಂಬಂಧವನ್ನು ಸೂಚಿಸುವ ಅ ಪ್ರತ್ಯಯವನ್ನು ಬಳಸಬೇಕಾಗುತ್ತದೆ. ಇದಲ್ಲದೆ, ಈ ಕ್ರಿಯಾರೂಪಗಳಲ್ಲಿ ಹಿಂದಿನ ಇಲ್ಲವೇ ಮುಂದಿನ ಸಮಯವನ್ನು ಸೂಚಿಸುವ ಪ್ರತ್ಯಯ, ಅಥವಾ ಅಲ್ಲಗಳೆಯುವ ಪ್ರತ್ಯಯ ಬರಬೇಕಾಗುತ್ತದೆ.

ಕಟ್ಟಿದ ಕಟ್ಟುಗಳ್
ಕಟ್ಟುವ ಕಟ್ಟುಗಳ್
ಕಟ್ಟದ ಕಟ್ಟುಗಳ್

ಕಟ್ಟು ಕ್ರಿಯಾಪದದ ಗುಣರೂಪವನ್ನು ತಯಾರಿಸುವುದಕ್ಕಾಗಿ ಇಲ್ಲಿ ಅದಕ್ಕೆ ದ್, ವ್ ಇಲ್ಲವೇ ಅದ್ ಪ್ರತ್ಯಯವನ್ನು ಸೇರಿಸಲಾಗಿದೆ, ಮತ್ತು ಅದರ ಬಳಿಕ ಅ ಪ್ರತ್ಯಯವನ್ನು ಸೇರಿಸಲಾಗಿದೆ.

ಇಂತಹ ಕ್ರಿಯಾಪದಗಳ ಗುಣರೂಪಗಳಿಗೆ ಲಿಂಗ–ವಚನ ಪ್ರತ್ಯಯಗಳನ್ನು ಸೇರಿಸಿದಾಗ ಅವುಗಳ ನಾಮರೂಪ ಸಿದ್ಧಿಸುತ್ತದೆ. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ಬಳಕೆಗಳನ್ನು ಗಮನಿಸಬಹುದು:

(೧ಕ) ಪೋದರನ್ ಒಡಗೊಂಡು ಬರಲ್ ಪೋದರ್.... (೮.೪೫)
'ಹೋದವರನ್ನು ಕರೆದುಕೊಂಡು ಬರಲು ಹೋದವರು...'

(೧ಖ) ಪೆಱ ಪಿಂಗುವನಂ ಮುರಿದಡಸಿ ಪಿಡಿದು (೧೩.೩೦)
'ಹಿಂದಕ್ಕೆ ಹೋಗುವವನನ್ನು ಹಿಂದಿರುಗಿ ಹಿಡಿದು'

(೧ಗ) ಕೂರದನ್ ಇದನ್ ಒಡ್ಡಿದನ್ (೩.೪)
'ಇದನ್ನು ಪ್ರೀತಿಸದವನು ಒಡ್ಡಿದ್ದಾನೆ'

(೧ಕ)ದಲ್ಲಿ ಪೋಗು ಕ್ರಿಯಾಪದದ ಸಂಬಂಧಿಸುವ ರೂಪವಾದ ಪೋದ ಎಂಬುದಕ್ಕೆ ಲಿಂಗ–ವಚನಗಳನ್ನು ಸೂಚಿಸುವ ಅರ್ ಪ್ರತ್ಯಯವನ್ನು ಸೇರಿಸಿದ ಮೇಲೇನೇ ವಿಭಕ್ತಿ ಪ್ರತ್ಯಯವನ್ನು (ಅನ್ ಎಂಬುದನ್ನು) ಸೇರಿಸಲಾಗಿದೆ. ಇದೇ ರೀತಿಯಲ್ಲಿ, (೧ಖ)ದಲ್ಲಿ ಪಿಂಗು ಕ್ರಿಯಾಪದದ ಸಂಬಂಧಿಸುವ ರೂಪವಾದ ಪಿಂಗುವ ಎಂಬುದಕ್ಕೆ ಲಿಂಗ–ವಚನಗಳನ್ನು ಸೂಚಿಸುವ ಅನ್ ಪ್ರತ್ಯಯವನ್ನು ಸೇರಿಸಿದ ಮೇಲೇನೇ ಅನ್ ಪ್ರತ್ಯಯವನ್ನು ಸೇರಿಸಲಾಗಿದೆ.

ಇಂತಹ ಪ್ರಯೋಗಗಳಲ್ಲಿ ಕ್ರಿಯಾಪದದ ಸಂಬಂಧಿಸುವ ರೂಪ(ಗುಣರೂಪ)ಕ್ಕೆ ಲಿಂಗ–ವಚನ ಪ್ರತ್ಯಯಗಳನ್ನು ಸೇರಿಸಲಾಗುತ್ತದಲ್ಲದೆ, ನೇರವಾಗಿ ಕ್ರಿಯಾಪದಗಳಿಗೆ ಸಮಯ ಪ್ರತ್ಯಯ ಇಲ್ಲವೇ ಅಲ್ಲಗಳೆಯುವ ಪ್ರತ್ಯಯವನ್ನು ಸೇರಿಸಿ, ಅದಕ್ಕೆ ಈ ಪ್ರತ್ಯಯಗಳನ್ನು ಸೇರಿಸಲಾಗುವುದಿಲ್ಲ ಎಂಬುದನ್ನು (೧ಗ)ದಲ್ಲಿ ಕಾಣಿಸುವ ಬಳಕೆ ಸ್ಪಷ್ಟಪಡಿಸುತ್ತದೆ. ಇಲ್ಲಿ ಕೂರ್ ಕ್ರಿಯಾಪದಕ್ಕೆ ಅಲ್ಲಗಳೆಯುವ ಪ್ರತ್ಯಯ ಮತ್ತು ಸಂಬಂಧಿಸುವ ಪ್ರತ್ಯಯಗಳೆರಡನ್ನೂ ಸೇರಿಸಿರುವ ಕೂರದ ಎಂಬ ರೂಪಕ್ಕೆ ಲಿಂಗ–ವಚನ ಪ್ರತ್ಯಯವನ್ನು (ಅನ್ ಎಂಬುದನ್ನು) ಸೇರಿಸಲಾಗಿದೆ.

ಇದು ನೇರವಾಗಿ ಕ್ರಿಯಾಪದಕ್ಕೆ ಅಲ್ಲಗಳೆಯುವ ಪ್ರತ್ಯಯವನ್ನು, ಮತ್ತು ಘಟಕವನ್ನು ಸೂಚಿಸುವ ಅನ್ ಪ್ರತ್ಯಯವನ್ನು ಸೇರಿಸಿರುವ ಕ್ರಿಯಾರೂಪಕ್ಕಿಂತ ಭಿನ್ನವಾಗಿದೆ ಎಂಬುದನ್ನು (೧ಘ)ದಲ್ಲಿ ಕಾಣಬಹುದು.

(೧ಘ) ಆ ಘಟಸಂಭವಂ ಎನಗೆ ಕೂರ್ಪುದನ್ ನಿನಗೆ ಕೂರನ್ (೧೨.೩೬)
'ಆ ದ್ರೋಣಾಚಾರ್ಯನು ನನ್ನನ್ನು ಪ್ರೀತಿಸುವಷ್ಟು ನಿನ್ನನ್ನು ಪ್ರೀತಿಸಲಿಲ್ಲ'

(೧ಘ)ದಲ್ಲಿ ಬಂದಿರುವ ಕೂರನ್ ಎಂಬುದು ಅಲ್ಲಗಳೆಯುವ ಕ್ರಿಯಾರೂಪ. ಇದರಲ್ಲಿ ಕೂರ್ ಕ್ರಿಯಾಪದಕ್ಕೆ ಅಲ್ಲಗಳೆಯುವ ಅ ಪ್ರತ್ಯಯವನ್ನು ಮತ್ತು ಘಟಕವನ್ನು ಸೂಚಿಸುವ ಅನ್ ಪ್ರತ್ಯಯವನ್ನು ಸೇರಿಸಲಾಗಿದೆ.

(೧ಗ)ದಲ್ಲಿ ಬಂದಿರುವ ಕೂರದನ್ ಎಂಬುದು ಇದಕ್ಕಿಂತ ತೀರ ಭಿನ್ನವಾಗಿರುವ ಕೃಲ್ಲಿಂಗ (ನಾಮರೂಪ). ಅದರಲ್ಲಿ ಕೂರ್ ಕ್ರಿಯಾಪದದೊಂದಿಗೆ ಅಲ್ಲಗಳೆಯುವ ಅದ್ ಪ್ರತ್ಯಯ ಬಂದಿದ್ದು, ಅದರೊಂದಿಗೆ ಸಂಬಂಧಿಸುವ ಅ ಪ್ರತ್ಯಯವೂ ಬಂದಿದೆ, ಮತ್ತು ಅದರ ಅನಂತರ ಲಿಂಗ–ವಚನ ಪ್ರತ್ಯಯ ಅನ್ ಬಂದಿದೆ.

ಈ ಅಲ್ಲಗಳೆಯುವ ಅದ್ ಪ್ರತ್ಯಯ ಸಂಬಂಧಿಸುವ ಅ ಪ್ರತ್ಯಯದೊಂದಿಗೆ ಮಾತ್ರ ಬರುತ್ತದೆ ಎಂಬುದನ್ನು ಇಲ್ಲಿ ಗಮನಿಸುವುದು ಅವಶ್ಯ.

ಹಳೆಗನ್ನಡದ ಒಳ್ (ಉಳ್) ಕ್ರಿಯಾಪದದ ಕ್ರಿಯಾರೂಪಗಳನ್ನು ಮತ್ತು ಕೃಲ್ಲಿಂಗ ರೂಪಗಳನ್ನು ಸಾಧಿಸುವಲ್ಲೂ ಈ ವ್ಯತ್ಯಾಸವನ್ನು ಸ್ಪಷ್ಟವಾಗಿ ಕಾಣಬಹುದು. ಈ ಕ್ರಿಯಾಪದಕ್ಕೆ, ಒಳನ್, ಒಳರ್, ಒಳೆನ್, ಒಳಯ್ ಮೊದಲಾದ ಕ್ರಿಯಾರೂಪಗಳಿದ್ದು, ಇವನ್ನು ಒಳ್ ಕ್ರಿಯಾಪದಕ್ಕೆ ನೇರವಾಗಿ ಆಖ್ಯಾತ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ತಯಾರಿಸಲಾಗಿದೆ. ಈ ಕ್ರಿಯಾಪದದೊಂದಿಗೆ ಸಮಯ ಪ್ರತ್ಯಯ ಬರುವುದಿಲ್ಲ (೧೧.೫ ನೋಡಿ).

ಈ ಕ್ರಿಯಾಪದದ ಕೃಲ್ಲಿಂಗ ರೂಪಗಳು (ಉಳ್ಳನ್, ಉಳ್ಳರ್, ಉಳ್ಳಳ್ ಮೊದಲಾದವು) ಮೇಲೆ ಕೊಟ್ಟಿರುವ ಕ್ರಿಯಾರೂಪಗಳಿಂದ ಭಿನ್ನವಾಗಿವೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯಗಳನ್ನು ಗಮನಿಸಬಹುದು:

(೨ಕ) ಮಕ್ಕಳೆನಗೈವರ್ ಒಳರ್ (೩.೨೬)
‘ನನಗೆ ಐವರು ಮಕ್ಕಳಿದ್ದಾರೆ’

(೨ಖ) ರಣರಂಗದೊಳ್ ಉಳ್ಳರೆಲ್ಲರುಂ ಮಡಿದೊಡಂ (೧೩.೮೩)
‘(ಉಳಿದು) ಇರುವವರೆಲ್ಲರೂ ರಣರಂಗದಲ್ಲಿ ಸತ್ತರೂ’

(೨ಕ)ದಲ್ಲಿ ಒಳ್ (ಉಳ್) ಕ್ರಿಯಾಪದದ ಕ್ರಿಯಾರೂಪ (ಒಳರ್) ಬಂದಿದೆ, ಮತ್ತು (೨ಖ)ದಲ್ಲಿ ಅದೇ ಕ್ರಿಯಾಪದದ ಕೃಲ್ಲಿಂಗ ರೂಪ (ಉಳ್ಳರ್) ಬಂದಿದೆ.

ಈ ವ್ಯತ್ಯಾಸವನ್ನು ವಿವರಿಸುವುದಕ್ಕಾಗಿ ಒಳನ್, ಒಳರ್ ಮೊದಲಾದ ಕ್ರಿಯಾರೂಪಗಳನ್ನು ನೇರವಾಗಿ ಕ್ರಿಯಾಪದಕ್ಕೆ ಆಖ್ಯಾತ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ಸಾಧಿಸಬೇಕಾಗುತ್ತದೆ, ಮತ್ತು ಉಳ್ಳನ್, ಉಳ್ಳರ್ ಮೊದಲಾದ ಕೃಲ್ಲಿಗ ರೂಪಗಳನ್ನು ಈ ಕ್ರಿಯಾಪದದ ಉಳ್ಳ ‘ಇರುವ’ ಸಂಬಂಧಿಸುವ ರೂಪಕ್ಕೆ ಲಿಂಗ–ವಚನ ಪ್ರತ್ಯಯಗಳನ್ನು ಸೇರಿಸುವ ಮೂಲಕ ತಯಾರಿಸಬೇಕಾಗುತ್ತದೆ.

## ೬.೨.೧ ಲಿಂಗ–ವಚನ ಪ್ರತ್ಯಯ

ಕೃಲ್ಲಿಂಗಗಳಲ್ಲಿ ಕಾಣಿಸುವ ಲಿಂಗ–ವಚನ ಪ್ರತ್ಯಯಕ್ಕೂ, ಕ್ರಿಯಾರೂಪಗಳಲ್ಲಿ ಕಾಣಿಸುವ ಘಟಕವನ್ನು ಸೂಚಿಸುವ ‘ಆಖ್ಯಾತ’ ಪ್ರತ್ಯಯಕ್ಕೂ ನಡುವೆ ಹಲವು ವ್ಯತ್ಯಾಸಗಳಿವೆ. ಹಳೆಗನ್ನಡ ವೈಯಾಕರಣಿಗಳು ಇವನ್ನು ಸರಿಯಾಗಿ ಗಮನಿಸಿರುವ ಹಾಗೆ ಕಾಣಿಸುವುದಿಲ್ಲ.

(೧) ಮೇಲೆ ಸೂಚಿಸಿದ ಹಾಗೆ, ಲಿಂಗ–ವಚನ ಪ್ರತ್ಯಯ ಕ್ರಿಯಾಪದದ ಸಂಬಂಧಿಸುವ ರೂಪದ ಅನಂತರ ಬರುತ್ತದೆ; ಆದರೆ, ಘಟಕವನ್ನು ಸೂಚಿಸುವ ಪ್ರತ್ಯಯ ನೇರವಾಗಿ ಹಿಂದಿನ ಮತ್ತು ಮುಂದಿನ ಸಮಯದ ಪ್ರತ್ಯಯಗಳ ಅನಂತರ, ಇಲ್ಲವೇ ಅಲ್ಲಗಳೆಯುವ ಪ್ರತ್ಯಯದ ಅನಂತರ ಬರುತ್ತದೆ. ಮಾಡುವನ್ ‘ಮಾಡುವವನು’ ನಾಮರೂಪ (ಕೃಲ್ಲಿಂಗ) ಮತ್ತು ಮಾಡುವನ್ ‘ಮಾಡುತ್ತಾನೆ’ ಕ್ರಿಯಾರೂಪ ಇವೆರಡೂ ಒಂದೇ ರೀತಿ ಇವೆಯಾದರೂ, ಎರಡನೆಯದರಲ್ಲಿಲ್ಲ

ದಂತಹ ಸಂಬಂಧಿಸುವ ಅ ಪ್ರತ್ಯಯವೊಂದು ಮೊದಲನೆಯದರಲ್ಲಿದೆ ಎಂದು ಹೇಳುವ ಅವಶ್ಯಕತೆಯಿದೆ.

ಈ ವ್ಯತ್ಯಾಸ ಅಲ್ಲಗಳೆಯುವ ಕೃಲ್ಲಿಂಗರೂಪದಲ್ಲಿ ಬಹಳ ಸ್ಪಷ್ಟವಾಗಿ ಕಾಣಿಸುತ್ತದೆ ಎಂಬುದನ್ನು ನಾವು ಮೇಲೆ ನೋಡಿರುವೆವು. ಮಾಡು ಕ್ರಿಯಾಪದದ ಅಲ್ಲಗಳೆಯುವ ರೂಪಗಳಲ್ಲೂ ಈ ವ್ಯತ್ಯಾಸವನ್ನು ಕಾಣಬಹುದು. ಮಾಡದನ್ 'ಮಾಡದವನು' ಎಂಬ ಅಲ್ಲಗಳೆಯುವ ನಾಮರೂಪ ಮಾಡನ್ 'ಮಾಡಲಿಕ್ಕಿಲ್ಲ' ಎಂಬ ಅಲ್ಲಗಳೆಯುವ ಕ್ರಿಯಾರೂಪಕ್ಕಿಂತ ತೀರ ಭಿನ್ನವಾಗಿದೆ.

(೨) ಲಿಂಗ–ವಚನ ಪ್ರತ್ಯಯಗಳು ಪುರುಷಭೇದವನ್ನು ಸೂಚಿಸುವುದಿಲ್ಲ; ಆದರೆ, ಘಟಕವನ್ನು ಸೂಚಿಸುವ 'ಆಖ್ಯಾತ' ಪ್ರತ್ಯಯಗಳು ಪುರುಷಭೇದವನ್ನು ಸೂಚಿಸುತ್ತವೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಪಂಪಭಾರತದ ಬಳಕೆಯನ್ನು ಗಮನಿಸಬಹುದು:

(೩) ಇಂದು ಮೊದಲಾಗಿರೆ ಪೆಂಡಿರೆಂಬರೊಳ್ ಕೂಡುವನ್ ಅಲ್ಲೆನ್ (೧.೭೩)
'(ನಾನು) ಈ ದಿನ ಮೊದಲಾಗಿ ಹೆಂಗಸು ಎನ್ನುವವರಲ್ಲಿ ಕೂಡುವವನು ಅಲ್ಲ'

(೩)ನೇ ವಾಕ್ಯದಲ್ಲಿ ಕೂಡುವನ್ ಕೃಲ್ಲಿಂಗರೂಪ ಉತ್ತಮಪುರುಷ ವ್ಯಕ್ತಿಯನ್ನು (ಎಂದರೆ ಆ ವಾಕ್ಯದ ಆಡುಗನನ್ನು) ಸೂಚಿಸುತ್ತಿದೆಯಾದರೂ, ಅದರಲ್ಲಿ ಪುಲ್ಲಿಂಗ ಏಕವಚನದ ಅನ್ ಪ್ರತ್ಯಯ ಬಂದಿದೆ. ಈ ವ್ಯಕ್ತಿ ಹೆಂಗಸಾದರೆ ಇಂತಹ ಕೃಲ್ಲಿಂಗದಲ್ಲಿ ಅಳ್ ಪ್ರತ್ಯಯವೂ (ಆನ್ ಕೂಡುವಳ್ ಅಲ್ಲೆನ್), ಮತ್ತು ಆಡುಗನೊಂದಿಗೆ ಬೇರೊಂದು ವ್ಯಕ್ತಿ ಸೇರಿದೆಯಾದರೆ (ಬಹುವಚನವಾದರೆ) ಅರ್ ಪ್ರತ್ಯಯವೂ (ಆಮ್ ಕೂಡುವರ್ ಅಲ್ಲೆಮ್) ಬಳಕೆಯಾಗಬೇಕಾಗುತ್ತದೆ.

ಮಧ್ಯಮಪುರುಷ ವ್ಯಕ್ತಿಯನ್ನು (ಕೇಳುಗನನ್ನು) ಸೂಚಿಸುವ ಸಂದರ್ಭದಲ್ಲೂ ಇದೇ ರೀತಿಯಲ್ಲಿ ಕೃಲ್ಲಿಂಗದೊಂದಿಗೆ ಬರುವ ಲಿಂಗ–ವಚನ ಪ್ರತ್ಯಯ ಪುರುಷ ಭೇದವನ್ನು ಸೂಚಿಸುವುದಿಲ್ಲ; ಅದು ಲಿಂಗ–ವಚನ ಭೇದವನ್ನು ಮಾತ್ರ ಸೂಚಿಸುತ್ತದೆ. ಉದಾಹರಣೆಗಾಗಿ, ನೀನ್ ಕೂಡುವನ್ ಅಲ್ಲಯ್ ಎಂಬುದನ್ನು ಅಂತಹ ವ್ಯಕ್ತಿ ಗಂಡುಸಾಗಿರುವಾಗ ಬಳಸಲಾಗುತ್ತದೆ, ಮತ್ತು ನೀನ್ ಕೂಡುವಳ್ ಅಲ್ಲಯ್ ಎಂಬುದನ್ನು ಹೆಂಗುಸಾಗಿರುವಾಗ ಬಳಸಲಾಗುತ್ತದೆ. ಈ ರೂಪಗಳು ಮೇಲೆ ಕೊಟ್ಟಿರುವ ಉತ್ತಮ ಪುರುಷ ಪದದೊಂದಿಗೆ ಬರುವ ರೂಪಗಳಿಗಿಂತ ಭಿನ್ನವಾಗಿಲ್ಲ ಎಂಬುದನ್ನು ಗಮನಿಸಬಹುದು.

ಆದರೆ, ಕ್ರಿಯಾರೂಪಗಳಲ್ಲಿ ಬರುವ ಆಖ್ಯಾತ ಪ್ರತ್ಯಯಗಳು ಉತ್ತಮ ಪುರುಷ ಇಲ್ಲವೇ ಮಧ್ಯಮ ಪುರುಷಗಳಲ್ಲಿ ಲಿಂಗಭೇದವನ್ನು ಸೂಚಿಸುವುದಿಲ್ಲ; ಅವು ಪುರುಷ ಮತ್ತು ವಚನಭೇದಗಳನ್ನು ಮಾತ್ರ ಸೂಚಿಸುತ್ತವೆ. ಉತ್ತಮ ಪುರುಷದ ವ್ಯಕ್ತಿ ಹೆಂಗಸಾದರೂ ಸರಿಯೇ, ಗಂಡಸಾದರೂ ಸರಿಯೇ, ಆನ್ ಕೂಡುವೆನ್ ಎಂಬುದೇ ಬಳಕೆಯಾಗುತ್ತದೆ; ಅದು ಬಹುವಚನದಲ್ಲಿದೆಯಾದರೆ ಮಾತ್ರ ಆಮ್ ಕೂಡುವೆಮ್ ಎಂಬುದು ಬಳಕೆಯಾಗುತ್ತದೆ. ಮಧ್ಯಮ ಪುರುಷದ ನೀನ್ ಕೂಡುವಯ್ ಮತ್ತು ನೀಮ್ ಕೂಡುವಿರ್ ಎಂಬವುಗಳು ಇವಕ್ಕಿಂತ ಭಿನ್ನವಾಗಿವೆ.

(೩) ಘಟಕವನ್ನು ಸೂಚಿಸುವ ಪ್ರಥಮಪುರುಷ–ನಪುಂಸಕಲಿಂಗ–ಏಕವಚನ ಪ್ರತ್ಯಯಕ್ಕೆ ಹಿಂದಿನ ಸಮಯದ (ಭೂತಕಾಲದ) ಕ್ರಿಯಾರೂಪಗಳಲ್ಲಿ ಉದು ಮತ್ತು ತು ಎಂಬ ಎರಡು ರೂಪಗಳಿವೆ (ಇಕ್ಕಿದುದು, ಇಕ್ಕಿತು; ಆದುದು, ಆಯ್ತು; ಮೂಡಿದುದು, ಮೂಡಿತು; ಸಂದುದು; ಪೋಯ್ತು; ಆದರೆ, ಕೃಲ್ಲಿಂಗಗಳಲ್ಲಿ ಲಿಂಗ–ವಚನ ಭೇದವನ್ನು ಸೂಚಿಸುವ ನಪುಂಸಕ–ಏಕವಚನ ಪ್ರತ್ಯಯಕ್ಕೆ ಕ್ರಿಯಾಪದಗಳ ಎಲ್ಲಾ ರೀತಿಯ ನಾಮರೂಪಗಳಲ್ಲೂ ಉದು ರೂಪ ಮಾತ್ರ ಇದೆಯಲ್ಲದೆ

ತು ರೂಪ ಇರುವ ಹಾಗೆ ಕಾಣಿಸುವುದಿಲ್ಲ. ಇದನ್ನು ಕೆಳಗೆ ಕೊಟ್ಟಿರುವ ಪಂಪಭಾರತದ (೪ಕ–ಗ) ವಾಕ್ಯಗಳಲ್ಲಿ ಕಾಣಬಹುದು:

(೪ಕ) ಶಿಶುಗೆ ಪೆಸರನ್ವರ್ಥಂ ಆಯ್ತು (೧.೧೨೮)
‘ಶಿಶುವಿಗೆ (ಭೀಮನೆಂಬ) ಹೆಸರು ಅನ್ವರ್ಥವಾಯಿತು’

(೪ಖ) ಕುಂತಿ ಮಾದ್ರಿಗಳೊಳ್ ಪಾಂಡುರಾಜನಾ ವಿವಾಹ ಮಂಗಳಮದು ಅಚ್ಚರಿಯಾದುದು (೧.೧೦೭)
‘ಪಾಂಡುರಾಜ ಮತ್ತು ಕುಂತಿಮಾದ್ರಿಯರ ವಿವಾಹ ಮಂಗಳ ಕಾರ್ಯ ಆಶ್ಚರ್ಯಕರವಾಯಿತು’

(೪ಗ) ಪರಲೋಕ ಪ್ರಾಪ್ತನಾದುದನಱುತು (೨.೧೯ವ)
‘ಪರಲೋಕ ಪ್ರಾಪ್ತನಾದುದನ್ನು ತಿಳಿದು’

ಆಗು ಕ್ರಿಯಾಪದಕ್ಕೆ ಆಯ್ತು ಕ್ರಿಯಾರೂಪವಿರುವುದನ್ನು (೪ಕ) ವಾಕ್ಯದಲ್ಲೂ, ಆದುದು ಕ್ರಿಯಾರೂಪವಿರುವುದನ್ನು (೪ಖ) ವಾಕ್ಯದಲ್ಲೂ ಕಾಣಬಹುದು. ಆದರೆ, ಇದಕ್ಕೆ (೪ಗ) ವಾಕ್ಯದಲ್ಲಿ ಕಾಣಿಸಿದ ಹಾಗೆ, ಆದುದು ನಾಮರೂಪ (ಕೃಲ್ಲಿಂಗ) ಮಾತ್ರ ಇರುವ ಹಾಗೆ ಕಾಣುತ್ತದೆ.

ಈ ವ್ಯತ್ಯಾಸಕ್ಕೂ ಮೇಲೆ ಸೂಚಿಸಿದ ವ್ಯತ್ಯಾಸವೇ ಕಾರಣವಿರಬೇಕು. ಹೆಚ್ಚಿನ ಕ್ರಿಯಾಪದಗಳ ಸಂಬಂಧಿಸುವ ರೂಪಗಳೂ ಒಂದೇ ರೀತಿ ದ ಎಂಬುದರಲ್ಲಿ ಕೊನೆಗೊಳ್ಳುವುವಾದ ಕಾರಣ (ಇಕ್ಕಿದ, ಆದ, ಮೂಡಿದ, ಸಂದ, ಪೋದ) ಅವುಗಳ ಅನಂತರ ನಪುಂಸಕ ಏಕವಚನದಲ್ಲಿ ಉದು ಪ್ರತ್ಯಯ ಮಾತ್ರ ಬರುತ್ತದೆ.

(೪) ಕ್ರಿಯಾರೂಪಗಳಲ್ಲಿ ಘಟಕವನ್ನು ಸೂಚಿಸುವ ಆಖ್ಯಾತ ಪ್ರತ್ಯಯ ವಾಕ್ಯದ ಒಂದು ವಿಶಿಷ್ಟವಾದ ಘಟಕವನ್ನು ಮಾತ್ರ ಸೂಚಿಸಬಲ್ಲುದು. ವಾಕ್ಯದಲ್ಲಿ ಆಗುಗ ಮಾತ್ರ ಇದೆಯಾದರೆ ಅದು ಆಗುಗವನ್ನು ಸೂಚಿಸುತ್ತದೆ, ಆಗುಗ ಮತ್ತು ಮಾಡುಗಗಳೆರಡೂ ಇವೆಯಾದರೆ ಮಾಡುಗವನ್ನು ಸೂಚಿಸುತ್ತದೆ, ಮತ್ತು ಪ್ರೇರಕ ಇದೆಯಾದರೆ ಪ್ರೇರಕವನ್ನು ಸೂಚಿಸುತ್ತದೆ.

ಉದಾಹರಣೆಗಾಗಿ, ಅಱಿದನ್ ‘ಸತ್ತ’ ಎಂಬುದರಲ್ಲಿರುವ ಅನ್ ಪ್ರತ್ಯಯು ಸತ್ತ ವ್ಯಕ್ತಿ(ಆಗುಗ)ವನ್ನು ಸೂಚಿಸುವುದಾದರೆ, ಕೊಂದನ್ ಎಂಬುದರಲ್ಲಿರುವ ಅನ್ ಪ್ರತ್ಯಯ ಸಾಯಿಸಿದ ವ್ಯಕ್ತಿ(ಮಾಡುಗ)ನನ್ನು ಸೂಚಿಸುತ್ತದೆ, ಮತ್ತು ಕೊಲಿಸಿದನ್ ಕ್ರಿಯಾರೂಪದಲ್ಲಿರುವ ಅನ್ ಪ್ರತ್ಯಯ ಸಾಯಿಸುವಂತೆ ಪ್ರೇರೇಪಿಸಿದ ವ್ಯಕ್ತಿ(ಪ್ರೇರಕ)ನನ್ನು ಸೂಚಿಸುತ್ತದೆ (೯.೩ ನೋಡಿ).

ಆದರೆ, ಕ್ರಿಯಾಪದಗಳ ನಾಮರೂಪ(ಕೃಲ್ಲಿಂಗ)ಗಳಲ್ಲಿ ಬರುವ ಲಿಂಗ–ವಚನ ಪ್ರತ್ಯಯ ವಾಕ್ಯದ ಇತರ ಘಟಕಗಳನ್ನೂ ಸೂಚಿಸಬಲ್ಲುದು. ಉದಾಹರಣೆಗಾಗಿ, ಮಾಡಿದುದು ಎಂಬುದರಲ್ಲಿ ಬಂದಿರುವ ಉದು ಲಿಂಗ–ವಚನ ಪ್ರತ್ಯಯು ಮಾಡಿದ ವ್ಯಕ್ತಿ, ಮಾಡಿದ ವಸ್ತು ಇಲ್ಲವೇ ಮಾಡಿದ ಕೆಲಸ ಇವುಗಳಲ್ಲಿ ಯಾವುದನ್ನು ಬೇಕಿದ್ದರೂ ಸೂಚಿಸಬಲ್ಲುದು. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ಬಳಕೆಗಳನ್ನು ಗಮನಿಸಬಹುದು:

(೫ಕ) ಅಟ್ಟುದಂ ಭುಜಬಲದಿಂ ಎತ್ತಿದಂತೆ (೯.೧೫)
‘ಮುಳುಗಿದ (ಭೂಮಿಯನ್ನು) ಭುಜಬಲದಿಂದ ಎತ್ತಿದ ಹಾಗೆ’

(೫ಖ) ಅಜ್ಞಾತವಾಸ ಮಾಡಿದುದುಮಂ ನೆನೆದು (೧೨.೧೭ವ)
‘ಅಜ್ಞಾತವಾಸ ಮಾಡಿದುದನ್ನೂ ನೆನೆದು’

(೫ಕ)ದಲ್ಲಿ ಬಂದಿರುವ ಉದು ಪ್ರತ್ಯಯ ಅಬ್ ಕ್ರಿಯಾಪದ ತಿಳಿಸುವ ಘಟನೆಯ ಆಗುಗವನ್ನು (ಭೂಮಿಯನ್ನು) ಸೂಚಿಸುತ್ತದೆ, ಆದರೆ (೫ಖ)ದಲ್ಲಿ ಬಂದಿರುವ ಅದೇ ಪ್ರತ್ಯಯ ಮಾಡು ಕ್ರಿಯಾಪದ ತಿಳಿಸುವ ಘಟನೆಯನ್ನೇ ಸೂಚಿಸುತ್ತದೆ. ಈ ವ್ಯತ್ಯಾಸ ಕ್ರಿಯಾಪದಗಳಲ್ಲಿ ಬರುವ ಆಖ್ಯಾತ ಪ್ರತ್ಯಯಗಳ ಬಳಕೆಯಲ್ಲಿಲ್ಲ.

ಕೃಲ್ಲಿಂಗಗಳನ್ನು ಕ್ರಿಯಾಪದಗಳ ಸಂಬಂಧಿಸುವ ರೂಪದಿಂದ ಪಡೆಯುವ ಮೂಲಕ, ಅವಕ್ಕೂ ಕ್ರಿಯಾರೂಪಗಳಿಗೂ ನಡುವಿರುವ ಈ ಅರ್ಥವ್ಯತ್ಯಾಸವನ್ನು ಸುಲಭವಾಗಿ ವಿವರಿಸಲು ಸಾಧ್ಯವಿದೆ: ಕ್ರಿಯಾಪದಗಳ ಸಂಬಂಧಿಸುವ ರೂಪಗಳು ವಾಕ್ಯದ ಬೇರೆ ಬೇರೆ ಘಟಕಗಳೊಂದಿಗೆ ಇಲ್ಲವೇ ಘಟನೆಯನ್ನು ಸೂಚಿಸುವ ನಾಮಪದದೊಂದಿಗೆ ಬರಬಲ್ಲುವಾಗಿದ್ದು, ಕೃಲ್ಲಿಂಗದ ಕೊನೆಯಲ್ಲಿ ಬರುವ ಲಿಂಗ-ವಚನ ಪ್ರತ್ಯಯಗಳು ಈ ನಾಮಪದಗಳಿಗೆ ಬದಲಾಗಿ ಬಂದಿವೆಯೆಂದು ಹೇಳುವುದರ ಮೂಲಕ ಈ ವ್ಯತ್ಯಾಸವನ್ನು ವಿವರಿಸಬಹುದು.

| | | |
|---|---|---|
| (೬ಕ) | ಆತನ್ ಕಂಡ ಪೂ | ಆತನ್ ಕಂಡುದು |
| (೬ಖ) | ಆತನನ್ ಕಂಡ ಪುಲಿ | ಆತನನ್ ಕಂಡುದು |
| (೬ಗ) | ಆತನನ್ ಕಂಡ ಕಾಣ್ಕೆ | ಆತನ್ ಕಂಡುದು |
| (೬ಘ) | ಆತನನ್ ಕಂಡ ಪೆಣ್ | ಆತನನ್ ಕಂಡಳ್ |

(೬ಕ)ದಲ್ಲಿ ಕಂಡ ಎಂಬ ಸಂಬಂಧಿಸುವ ರೂಪದಲ್ಲಿರುವ ಅ ಪ್ರತ್ಯಯ ಅದನ್ನು ಪೂ ಎಂಬುದರೊಂದಿಗೆ (ಆ ಕ್ರಿಯೆಯ ಆಗುಗದೊಂದಿಗೆ) ಸಂಬಂಧಿಸುತ್ತದೆ, ಮತ್ತು ಕಂಡುದು ಎಂಬುದರಲ್ಲಿರುವ ಉದು ಪ್ರತ್ಯಯವೂ ಹೂವನ್ನು (ಎಂದರೆ ಆಗುಗವನ್ನು) ಸೂಚಿಸುತ್ತದೆ.

ಇದಕ್ಕೆ ಬದಲು, (೬ಖ)ದಲ್ಲಿ ಇದೇ ಕಂಡ ಎಂಬುದರಲ್ಲಿ ಬಂದಿರುವ ಅ ಪ್ರತ್ಯಯ ಅದನ್ನು ಪುಲಿ ಎಂಬುದರೊಂದಿಗೆ (ಆ ಕ್ರಿಯೆಯ ಮಾಡುಗದೊಂದಿಗೆ) ಸಂಬಂಧಿಸುತ್ತದೆ, ಮತ್ತು ಕಂಡುದು ಎಂಬುದರಲ್ಲಿರುವ ಉದು ಪ್ರತ್ಯಯವೂ ಅದೇ ಮಾಡುಗವನ್ನು (ಎಂದರೆ ಹುಲಿಯನ್ನು) ಸೂಚಿಸುತ್ತದೆ.

### ೬.೨.೨ ಹಿಂದಿನ ವ್ಯಾಕರಣಗಳ ಸಮಸ್ಯೆಗಳು

ಕ್ರಿಯಾರೂಪಗಳಲ್ಲಿ ಘಟಕವನ್ನು ಸೂಚಿಸುವುದಕ್ಕಾಗಿ ಬರುವ ಪ್ರತ್ಯಯ, ಮತ್ತು ಕ್ರಿಯಾಪದಗಳ ನಾಮರೂಪ(ಕೃಲ್ಲಿಂಗ)ಗಳಲ್ಲಿ ಲಿಂಗ-ವಚನಗಳನ್ನು ಸೂಚಿಸುವು ದಕ್ಕಾಗಿ ಬರುವ ಪ್ರತ್ಯಯ - ಇವೆರಡರ ನಡುವೆ ಮೇಲೆ (೬.೨.೧)ರಲ್ಲಿ ಸೂಚಿಸಿರುವಂತಹ ಮುಖ್ಯವಾದ ವ್ಯತ್ಯಾಸಗಳಿರುವುದನ್ನು ಗಮನಿಸದುದರಿಂದಾಗಿ, ಹಳೆಗನ್ನಡ ವ್ಯಾಕರಣವನ್ನು ವಿವರಿಸುವ ವಿದ್ವಾಂಸರ ಪ್ರಯತ್ನಗಳಲ್ಲಿ ಹಲವು ದೋಷಗಳನ್ನು ಕಾಣಬಹುದು.

(೧) ವೆಂಕಟಾಚಲ ಶಾಸ್ತ್ರಿಗಳು (೧೯೯೪:೩೫) ಸೂಚಿಸಿದಂತೆ, ಕೇಶಿರಾಜನು ಕೃಲ್ಲಿಂಗಗಳಿಗಾಗಿ ಕೊಟ್ಟಿರುವ ಹಲವು ಪ್ರಯೋಗಗಳಲ್ಲಿ ಕೃಲ್ಲಿಂಗಗಳೇ ಇಲ್ಲ (೮೨-೧, ೨, ೮೩-೧, ೨, ೪, ೫). ಈ ಪ್ರಯೋಗಗಳಲ್ಲೆಲ್ಲ ಕ್ರಿಯಾರೂಪಗಳು ಬಂದಿವೆಯಲ್ಲದೆ ಕ್ರಿಯಾಪದಗಳ ಕೃಲ್ಲಿಂಗ(ನಾಮರೂಪ)ಗಳು ಬಂದಿಲ್ಲ.

ಉದಾಹರಣೆಗಾಗಿ, ಸೂತ್ರ ೮೨ರಲ್ಲಿ ಭೂತವತಿಗೆ (ಹಿಂದಿನ ಸಮಯಕ್ಕೆ) ಕೊಟ್ಟಿರುವ ಬಾಳ್ದೆನೆಂದು ಮದನಂ ನಲಿದಂ ನಡೆ ನೋಡಿ ಚೂತಮಂ ಎಂಬ ಪ್ರಯೋಗದಲ್ಲಿ ನಲಿದಂ

'ಕುಣಿದನು' ಎಂಬುದು ಹಿಂದಿನ ಕಾಲದ ಘಟನೆಯೊಂದನ್ನು ಸೂಚಿಸುವ ಕ್ರಿಯಾರೂಪವಲ್ಲದೆ, ಆ ಘಟನೆಯನ್ನು ನಡೆಸಿದ ವ್ಯಕ್ತಿಯನ್ನು ವರ್ಣಿಸುವ ನಲಿದಂ 'ಕುಣಿದವನು' ಎಂಬ ನಾಮರೂಪವಲ್ಲ.

(೨) ಅಲ್ಲಗಳೆಯುವ ಕೃಲ್ಲಿಂಗಗಳ ಬಳಕೆಯನ್ನು ಕೇಶಿರಾಜನೇ ಮೊದಲಾದ ಪ್ರಾಚೀನ ವೈಯಾಕರಣಿಗಳು ಗಮನಿಸಿದಂತಿಲ್ಲ. ಹಾಗೆ ಗಮನಿಸಿದ್ದರೆ, ಅವಕ್ಕೂ, ಅಲ್ಲಗಳೆಯುವ ಕ್ರಿಯಾರೂಪಗಳಿಗೂ ನಡುವಿರುವ ವ್ಯತ್ಯಾಸ ಅವರ ಗಮನಕ್ಕೆ ಬರುತ್ತಿತ್ತು.

(೩) ಕೇಶಿರಾಜನೇ ಮೊದಲಾದವರು ಕ್ರಿಯಾಪದಗಳ ಸಂಬಂಧಿಸುವ ರೂಪಗಳನ್ನೇ ಕೃಲ್ಲಿಂಗಗಳೆಂದು ಪರಿಗಣಿಸಿದ್ದಾರೆ (ಶಬ್ದಮಣಿದರ್ಪಣ, ಸೂ. ೮೩ ನೋಡಿ). ಇದು ಸಂಸ್ಕೃತದ ವ್ಯಾಕರಣ ನಿಯಮವನ್ನು ಹಾಗೆಯೇ ಕನ್ನಡಕ್ಕೆ ಹಚ್ಚಿದುದರ ಫಲ. ಮೇಲೆ ೬.೧.೩ರಲ್ಲಿ ವಿವರಿಸಿದ ಹಾಗೆ, ಈ ವಿಷಯದಲ್ಲಿ ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವೆ ಮುಖ್ಯವಾದ ವ್ಯತ್ಯಾಸವಿದೆ:

ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯಗಳನ್ನು ನೇರವಾಗಿ ಕ್ರಿಯಾಪದಗಳ ಸಂಬಂಧಿಸುವ ರೂಪಕ್ಕೆ ಸೇರಿಸಲು ಸಾಧ್ಯವಿದೆ. ಗುಣಪದ ಮತ್ತು ನಾಮಪದಗಳ ನಡುವೆ ಸಂಸ್ಕೃತದಲ್ಲಿ ಯಾವ ವ್ಯತ್ಯಾಸವೂ ಇಲ್ಲದಿರುವುದೇ ಇದಕ್ಕೆ ಕಾರಣ. ನಿಜಕ್ಕೂ ಸಂಸ್ಕೃತದಲ್ಲಿ 'ಸಂಬಂಧಿಸುವ ರೂಪ' ಎಂಬುದೇ ಇಲ್ಲ; ಅದರಲ್ಲಿ ಕೃದಂತಗಳೇ ನಾಮಪದಗಳಾಗಿ ಬಳಕೆಯಾಗುತ್ತವೆ.

ಆದರೆ, ಹಳೆಗನ್ನಡದಲ್ಲಿ ಕೃದಂತಗಳು ಗುಣಪದಗಳು; ಅವಕ್ಕೆ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸಿದಾಗ ಮಾತ್ರ, ಅವು ನಾಮಪದಗಳ ಜಾಗದಲ್ಲಿ ಬಳಕೆಯಾಗಬಲ್ಲುವು, ಮತ್ತು ವಿಭಕ್ತಿ ಪ್ರತ್ಯಯಗಳನ್ನು ಪಡೆಯಬಲ್ಲುವು.

ಇಲ್ಲಿ ಇನ್ನೊಂದು ವಿಷಯವನ್ನೂ ಗಮನಿಸುವ ಅವಶ್ಯಕತೆಯಿದೆ: ಸಂಸ್ಕೃತದಲ್ಲಿ ಕೃಲ್ಲಿಂಗದೊಂದಿಗೆ ಬರುವ ಲಿಂಗ-ವಚನ ಪ್ರತ್ಯಯಗಳು ವಿಭಕ್ತಿ ಪ್ರತ್ಯಯಗಳಿಗಿಂತ ಭಿನ್ನವಾದುವಲ್ಲ; ಆದರೆ, ಹಳೆಗನ್ನಡದಲ್ಲಿ ಇವೆರಡು ಪ್ರತ್ಯಯಗಳೂ ಬೇರೆ ಬೇರಾಗಿವೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ಕೃಲ್ಲಿಂಗಗಳಿಗಿರುವ ವಿಭಕ್ತಿರೂಪಗಳನ್ನು ಹೋಲಿಸಿ ನೋಡಬಹುದು:

| ಸಂಸ್ಕೃತ | ಹಳೆಗನ್ನಡ |
|---|---|
| ಗತೇಭ್ಯಃ | ಪೋದರ್ಗೆ |
| ಗತೇನ | ಪೋದನಿನ್ |
| ಗತಾಯೈ | ಪೋದಳ್ಗೆ |
| ಗತಯಾ | ಪೋದಳಿನ್ |

ಮೇಲೆ ಕೊಟ್ಟಿರುವ ಹಳೆಗನ್ನಡದ ಕೃಲ್ಲಿಂಗ ರೂಪಗಳಲ್ಲಿ ಅರ್, ಅನ್ ಮತ್ತು ಅಳ್ ಎಂಬ ಲಿಂಗ-ವಚನ ಪ್ರತ್ಯಯಗಳು ಅವುಗಳ ಅನಂತರ ಬರುವ ಗೆ ಮತ್ತು ಇನ್ ಎಂಬ ವಿಭಕ್ತಿ ಪ್ರತ್ಯಯಗಳಿಂದ ಬೇರಾಗಿ ಉಳಿದಿವೆ; ಆದರೆ ಸಂಸ್ಕೃತದ ಕೃಲ್ಲಿಂಗ (ಕೃದಂತ) ರೂಪಗಳಲ್ಲಿ ಈ ರೀತಿ ಲಿಂಗ-ವಚನ ಪ್ರತ್ಯಯಗಳನ್ನು ವಿಭಕ್ತಿ ಪ್ರತ್ಯಯಗಳಿಂದ ಬೇರ್ಪಡಿಸಲು ಸಾಧ್ಯವಾಗದು.

ಉದಾಹರಣೆಗಾಗಿ, ಗತೇಭ್ಯಃ ಎಂಬ ರೂಪದಲ್ಲಿ ಚತುರ್ಥೀ ವಿಭಕ್ತಿಯನ್ನು ಮಾತ್ರವಲ್ಲದೆ ಪುಲ್ಲಿಂಗ-ಬಹುವಚನವನ್ನು ಸೂಚಿಸುವ ಕೆಲಸವನ್ನೂ ಭ್ಯಃ ಪ್ರತ್ಯಯವೇ ಮಾಡಬೇಕಾಗಿದೆ.

(೪) ಮಧ್ಯಮಪುರುಷ ಮತ್ತು ಉತ್ತಮಪುರುಷ ಕ್ರಿಯೆಗಳು ಕೃಲ್ಲಿಂಗಗಳಾಗವು ಎಂಬುದಾಗಿ ಕೇಶಿರಾಜನೇ ಮೊದಲಾದವರು (ಶಬ್ದಮಣಿದರ್ಪಣ, ಸೂ. ೮೩) ಹೇಳಿರುವುದೂ ಸಂಪೂರ್ಣ ಸರಿಯಲ್ಲ.

ಯಾಕೆಂದರೆ, ಹಳೆಗನ್ನಡದಲ್ಲಿ ಉತ್ತಮಪುರುಷ ಮತ್ತು ಮಧ್ಯಮಪುರುಷ ವ್ಯಕ್ತಿಗಳಿಗೆ ಸಂಬಂಧಿಸಿದಂತೆಯೂ ಕೃಲ್ಲಿಂಗಗಳನ್ನು ಬಳಸಲು ಸಾಧ್ಯವಿದೆ (ಇದಕ್ಕೆ ಉದಾಹರಣೆಗಳನ್ನು ಮೇಲೆ ೬.೧.೩ರಲ್ಲಿ ಕೊಡಲಾಗಿದೆ). ಆದರೆ, ಹೀಗೆ ಬಳಸುವಾಗ, ಅವು ಲಿಂಗ-ವಚನ ಭೇದಗಳನ್ನು ಮಾತ್ರ ಸೂಚಿಸುತ್ತವೆಯಲ್ಲದೆ ಪುರುಷಭೇದವನ್ನು ಸೂಚಿಸುವುದಿಲ್ಲ ಎಂಬುದೇ ಹಳೆಗನ್ನಡದಲ್ಲಿರುವ ನಿರ್ಬಂಧ.

(೫) ಕೃಲ್ಲಿಂಗಗಳನ್ನು ಕ್ರಿಯಾಪದಗಳ ಸಂಬಂಧಿಸುವ ರೂಪದಿಂದ ಸಾಧಿಸುವ ಅವಶ್ಯಕತೆಯನ್ನು ಕಿಟ್ಟೆಲ್ (೧೯೦೩:೨೧೮) ಕಂಡುಕೊಂಡಿದ್ದಾರೆ; ಆದರೆ, ಸಾಮಾನ್ಯ ಕ್ರಿಯಾರೂಪಗಳನ್ನೂ ಅವರು ಇಂತಹ ಸಂಬಂಧಿಸುವ ರೂಪಗಳಿಂದಲೇ ಸಾಧಿಸುವ ಕಾರಣ (೧೯೦೩:೧೩೭, ೧೪೨), ಅವಕ್ಕೂ ಕೃಲ್ಲಿಂಗಗಳಿಗೂ ನಡುವಿರುವ ವ್ಯತ್ಯಾಸಗಳನ್ನು ವಿವರಿಸಲು ಅವರಿಗೂ ತೊಂದರೆಯಾಗಿದೆ.

ಉದಾಹರಣೆಗಾಗಿ, ನಪುಂಸಕ ಏಕವಚನದ ಇತು, ಇತ್ತು ಪ್ರತ್ಯಯವನ್ನು ಬಳಸಿ ತಯಾರಿಸಿದ ಮಾಡಿತು, ತೀಡಿತ್ತು ಎಂಬಂತಹ ಹಿಂದಿನ ಸಮಯದ ಕ್ರಿಯಾರೂಪಗಳನ್ನು ಇತರ ಕ್ರಿಯಾರೂಪಗಳ ಹಾಗೆ ಮಾಡಿದ, ತೀಡಿದ ಮೊದಲಾದ ಸಂಬಂದಿಸುವ ಕ್ರಿಯಾರೂಪಗಳಿಂದ ಸಾಧಿಸಲು ಸಾಧ್ಯವಾಗುವುದಿಲ್ಲ. ಹಾಗಾಗಿ, ಇಂತಹ ಕ್ರಿಯಾರೂಪಗಳಲ್ಲಿ ಇತು, ಇತ್ತು ಪ್ರತ್ಯಯವನ್ನು ಸಂಬಂಧಿಸುವ ಕ್ರಿಯಾರೂಪಗಳಿಗೆ ಸೇರಿಸುವ ಬದಲು ಮಾಡಿ, ತೀಡಿ ಮೊದಲಾದ ಜೋಡಿಸುವ ಕ್ರಿಯಾರೂಪಗಳಿಗೆ ಸೇರಿಸಲಾಗುತ್ತದೆಯೆಂದು ಇವರು ಹೇಳಬೇಕಾಗಿದೆ (ಕಿಟ್ಟೆಲ್ ೧೯೦೩:೧೩೭ ನೋಡಿ).

ಇದೇ ರೀತಿಯಲ್ಲಿ, ಅಲ್ಲಗಳೆಯುವ ಕ್ರಿಯಾರೂಪಗಳಿಗೂ ಅಲ್ಲಗಳೆಯುವ ಕೃಲ್ಲಿಂಗಗಳಿಗೂ ನಡುವಿರುವ ವ್ಯತ್ಯಾಸವನ್ನು ವಿವರಿಸುವುದಕ್ಕಾಗಿ, ಅವರು ಅಲ್ಲಗಳೆಯುವ ಕ್ರಿಯಾರೂಪಗಳನ್ನು ಇತರ ಕ್ರಿಯಾರೂಪಗಳ ಹಾಗೆ ಕ್ರಿಯಾಪದಗಳ ಸಂಬಂಧಿಸುವ ರೂಪದಿಂದ ಸಾಧಿಸುವ ಬದಲು, ಇರ, ಕೇಳ, ಮಾಡ ಎಂಬಂತಹ 'ಕ್ರಿಯಾರ್ಥ' ರೂಪದಿಂದ ಸಾಧಿಸಬೇಕಾಗಿದೆ (ಕಿಟ್ಟೆಲ್ ೧೯೦೩:೧೫೭ ನೋಡಿ).

ಕ್ರಿಯಾರೂಪಗಳಲ್ಲಿ ಬರುವ ಆಖ್ಯಾತ ಪ್ರತ್ಯಯಗಳು ವಾಕ್ಯದ ಒಂದು ಘಟಕವನ್ನು ಮಾತ್ರ ಸೂಚಿಸಬಲ್ಲುವು; ಆದರೆ, ಕೃಲ್ಲಿಂಗಗಳಲ್ಲಿ ಬರುವ ಲಿಂಗ-ವಚನ ಪ್ರತ್ಯಯಗಳು ಇತರ ಘಟಕಗಳನ್ನೂ ಸೂಚಿಸಬಲ್ಲುವು ಎಂಬ ಮೇಲೆ (೬.೨.೧(೪)ರಲ್ಲಿ) ಸೂಚಿಸಿದ ವ್ಯತ್ಯಾಸವನ್ನು ಕ್ರಿಯಾರೂಪ ಮತ್ತು ಕೃಲ್ಲಿಂಗಗಳೆರಡನ್ನೂ ಕ್ರಿಯಾಪದದ ಸಂಬಂಧಿಸುವ ರೂಪದಿಂದ ಸಾಧಿಸ ಹೊರಟಿರುವ ಕಿಟ್ಟೆಲ್ ಅವರಿಗೆ ವಿವರಿಸಲು ಸಾಧ್ಯವಾಗಲಿಕ್ಕಿಲ್ಲ.

(೬) ಏಕವಚನದ ನಾಮಪದಗಳನ್ನು ಮಾತ್ರವಲ್ಲದೆ, ಬಹುವಚನದ ನಾಮಪದಗಳನ್ನೂ ಲಿಂಗಗಳೆಂದು ಕರೆಯಬಹುದಿತ್ತಲ್ಲವೇ? (ಯಾಕೆಂದರೆ ಏಕವಚನದ ನಾಮಪದಗಳ ಹಾಗೆ ಬಹುವಚನದ ನಾಮಪದಗಳೂ ವಿಭಕ್ತಿ ಪ್ರತ್ಯಯಗಳನ್ನು ಸ್ವೀಕರಿಸಲು ಸಮರ್ಥವಾಗಿವೆಯಲ್ಲ) ಎಂಬುದಾಗಿ ವೆಂಕಟಾಚಲ ಶಾಸ್ತ್ರಿಗಳು (೧೯೯೪:೩೫) ಪ್ರಶ್ನಿಸಿದ್ದಾರೆ.

ಕೇಶಿರಾಜನು ಸಂಸ್ಕೃತದ ವ್ಯಾಕರಣ ನಿಯಮಗಳನ್ನು ಅನುಸರಿಸಿ, ಬಹುವಚನ ಪ್ರತ್ಯಯವನ್ನು

ವಿಭಕ್ತಿ ಪ್ರತ್ಯಯಗಳೊಂದಿಗೆ ಬರುವ 'ಆಗಮ'ಗಳೆಂದು ಪರಿಗಣಿಸಿರುವುದೇ (ಸೂ. ೧೦೫) ಈ ರೀತಿ ಬಹುವಚನದ ನಾಮಪದಗಳನ್ನು ಲಿಂಗಗಳೆಂದು ಪರಿಗಣಿಸದಿರಲು ಕಾರಣ. ಅವನ ಮಟ್ಟಿಗೆ ಸಂಸ್ಕೃತದಲ್ಲಿರುವ ಹಾಗೆ, ಹಳೆಗನ್ನಡದಲ್ಲೂ ವಿಭಕ್ತಿ ಪ್ರತ್ಯಯಕ್ಕಿಂತ ಭಿನ್ನವಾದ ವಚನ ಪ್ರತ್ಯಯವಿಲ್ಲ. ಆದರೆ, ಹೀಗೆ ಮಾಡಿರುವಲ್ಲಿ ಹಳೆಗನ್ನಡದ ವೈಶಿಷ್ಟ್ಯವೊಂದನ್ನು ಆತ ಕಡೆಗಣಿಸಿದ್ದಾನೆ.

ಮುಂದೆ ೭.೩.೨ರಲ್ಲಿ ಸೂಚಿಸಿದ ಹಾಗೆ, ಕಿಟ್ಟೆಲ್ ಅವರೂ ಹಳೆಗನ್ನಡದ ಈ ವೈಶಿಷ್ಟ್ಯವನ್ನು ಕಂಡುಕೊಳ್ಳುವಲ್ಲಿ ಎಡವಿದ್ದಾರೆ. ಗ್ರೀಕ್, ಲ್ಯಾಟಿನ್ ಮೊದಲಾದ ಭಾಷೆಗಳ ವ್ಯಾಕರಣವನ್ನನುಸರಿಸ ಹೋಗಿ, ಅವರು ಬಹುವಚನ ಪ್ರತ್ಯಯವನ್ನು ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಕರೆದಿದ್ದಾರೆ; ಆದರೆ, ಈ ಪ್ರತ್ಯಯ ಇತರ ವಿಭಕ್ತಿ ರೂಪಗಳಲ್ಲೂ ಯಾಕೆ ಬರುತ್ತದೆ ಎಂಬುದನ್ನು ವಿವರಿಸಿದ ಹಾಗಿಲ್ಲ.

### ೬.೩ ಸಾರಾಂಶ

ಹಳೆಗನ್ನಡದಲ್ಲಿ ಎಂತಹ ಪದಗಳನ್ನೆಲ್ಲ ನಾಮಪದಗಳೆಂದು ಕರೆಯಬಹುದು ಎಂಬುದನ್ನು ವಿವರಿಸಿ ಹೇಳುವಲ್ಲಿ ಹಳೆಗನ್ನಡದ ವೈಯಾಕರಣಿಗಳು ಹಲವು ರೀತಿಯ ಗೊಂದಲಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಇವುಗಳಲ್ಲಿ ಹೆಚ್ಚಿನವೂ ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವೆ ವ್ಯಾಕರಣದ ಮೂಲತತ್ವಗಳಲ್ಲೇನೇ ಕಾಣಿಸುವಂತಹ ವ್ಯತ್ಯಾಸಗಳನ್ನು ಗಮನಿಸದುದರ ಫಲ ಎಂಬುದನ್ನು ಈ ಅಧ್ಯಾಯದಲ್ಲಿ ತೋರಿಸಿಕೊಡಲಾಗಿದೆ.

## ಅಧ್ಯಾಯ ಏಳು

# ಲಿಂಗ ಮತ್ತು ವಚನಗಳು

### ೭.೧ ಪೀಠಿಕೆ

ನಾಮಪದಗಳನ್ನು ವಾಕ್ಯಗಳಲ್ಲಿ ಬಳಸುವ ವಿಧಾನದಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಹಲವು ವ್ಯತ್ಯಾಸಗಳಿವೆ. ಈ ವ್ಯತ್ಯಾಸಗಳಿಗೂ ಈ ಎರಡು ಭಾಷೆಗಳು ಬಳಸುವ ವ್ಯಾಕರಣದ ಮೂಲತತ್ವಗಳು ಬೇರೆ ಬೇರೆಯಾಗಿರುವುದೇ ಕಾರಣ ಎಂಬುದನ್ನು ಕೆಳಗಿನ ಸಮೀಕ್ಷೆಯಿಂದ ತಿಳಿಯಬಹುದು.

ನಾಮಪದಗಳ ಬಳಕೆಗೆ ಸಂಬಂಧಿಸಿದಂತೆ ಲಿಂಗ, ವಚನ ಮತ್ತು ವಿಭಕ್ತಿ ಎಂಬುದಾಗಿ ಮೂರು ವ್ಯಾಕರಣ ತತ್ವಗಳನ್ನು ತಿಳಿದುಕೊಳ್ಳುವ ಅವಶ್ಯಕತೆಯಿದೆ.

(೧) ಲಿಂಗ ಎಂಬುದು ನಾಮಪದಗಳನ್ನು ಹೇಗೆ ಅವುಗಳ ಬಳಕೆಗೆ ಸಂಬಂಧಿಸಿದಂತೆ ಕೆಲವು ಮುಖ್ಯ ಗುಂಪುಗಳಾಗಿ ವಿಂಗಡಿಸಲು ಸಾಧ್ಯ ಎಂಬುದನ್ನು ತಿಳಿಸುತ್ತದೆ;

(೨) ವಚನ ಎಂಬುದು ನಾಮಪದಗಳು ಸೂಚಿಸುವ ವ್ಯಕ್ತಿ, ವಸ್ತು ಮೊದಲಾದವುಗಳ ಸಂಖ್ಯೆಯೆಷ್ಟು ಎಂಬುದನ್ನು ತಿಳಿಸುತ್ತದೆ; ಮತ್ತು

(೩) ವಿಭಕ್ತಿ ಎಂಬುದು ವಾಕ್ಯ ಸೂಚಿಸುವ ಘಟನೆ ಇಲ್ಲವೇ ಸಂಗತಿಯಲ್ಲಿ ನಾಮಪದಗಳು ಸೂಚಿಸುವ ವ್ಯಕ್ತಿ, ವಸ್ತು ಮೊದಲಾದವುಗಳ ಕಾರ್ಯವೆಂತಹದು ಎಂಬುದನ್ನು ತಿಳಿಸುತ್ತದೆ.

ಈ ಮೂರು ವಿಷಯಗಳಲ್ಲೂ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಹಲವು ವ್ಯತ್ಯಾಸಗಳಿವೆ. ಇವುಗಳಲ್ಲಿ ಲಿಂಗ ಮತ್ತು ವಚನಗಳ ಬಳಕೆಯನ್ನು ಈ ಅಧ್ಯಾಯದಲ್ಲೂ, ವಿಭಕ್ತಿಯ ಬಳಕೆಯನ್ನು ಮುಂದಿನ (ಎಂಟನೇ) ಅಧ್ಯಾಯದಲ್ಲೂ ವಿವರಿಸಲಾಗಿದೆ.

### ೭.೨ ವಿಭಜನೆಯಲ್ಲಿ ವ್ಯತ್ಯಾಸ

ನಾಮಪದಗಳನ್ನು ಎರಡು ಅಥವಾ ಹೆಚ್ಚು 'ಲಿಂಗ'ಗಳಲ್ಲಿ ವಿಂಗಡಿಸಿ ಹೇಳುವ ಕ್ರಮ ಹಲವು ಭಾಷೆಗಳಲ್ಲಿ ಬಳಕೆಯಲ್ಲಿದೆ. ಅವುಗಳ ಅರ್ಥ, ಅವುಗಳೊಂದಿಗೆ ಬರಬಲ್ಲ ಇತರ ಪದಗಳ ಸ್ವರೂಪ, ಕ್ರಿಯಾಪದದಲ್ಲಿ ಕಾಣಿಸುವ ರೂಪವ್ಯತ್ಯಾಸಗಳು, ಮತ್ತು ನಾಮಪದಗಳ ಜಾಗದಲ್ಲಿ ಬರುವ ಸರ್ವನಾಮಗಳ ಸ್ವರೂಪ ಮೊದಲಾದವು ಇಂತಹ ವಿಭಜನೆಗೆ ಆಧಾರವಾಗುತ್ತವೆ.

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ನಾಮಪದಗಳ ವಿಭಜನೆಯಲ್ಲಿ ಹಲವು ಮುಖ್ಯ ವ್ಯತ್ಯಾಸಗಳಿವೆ. ಹಳೆಗನ್ನಡ ನಾಮಪದಗಳ ಲಿಂಗ ವಿಭಜನೆಗೆ ಅವುಗಳ ಅರ್ಥವೇ ಆಧಾರ; ಆದರೆ, ಸಂಸ್ಕೃತ ನಾಮಪದಗಳ ಲಿಂಗವಿಭಜನೆಗೆ ಅವುಗಳೊಂದಿಗೆ ಬರಬಲ್ಲ ಇತರ ನಾಮಪದಗಳ ಸ್ವರೂಪ ಅಧಾರವಲ್ಲದೆ ಅರ್ಥ ಆಧಾರವಲ್ಲ.

## ೭.೨.೧ ಹಳೆಗನ್ನಡದ ಲಿಂಗವಿಭಜನೆ

ಹಳೆಗನ್ನಡದಲ್ಲಿ ನಾಮಪದಗಳನ್ನು ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗ ಎಂಬುದಾಗಿ ಮೂರು ಲಿಂಗಗಳಲ್ಲಿ ವಿಭಜಿಸಲಾಗಿದೆ. ಈ ವಿಭಜನೆಗೆ ನಾಮಪದಗಳ ಅರ್ಥವೇ ಮುಖ್ಯ ಆಧಾರ. ಮನುಷ್ಯರನ್ನು ಸೂಚಿಸುವ ಪದಗಳಲ್ಲಿ ಗಂಡಸರನ್ನು ಸೂಚಿಸುವ ಪದಗಳು ಪುಲ್ಲಿಂಗದಲ್ಲೂ, ಹೆಂಗಸರನ್ನು ಸೂಚಿಸುವ ಪದಗಳು ಸ್ತ್ರೀಲಿಂಗದಲ್ಲೂ ಹಂಚಿಕೆಯಾಗುತ್ತವೆ. ಉಳಿದ (ಮನುಷ್ಯರನ್ನು ಸೂಚಿಸದ) ಪದಗಳೆಲ್ಲ ನಪುಂಸಕಲಿಂಗದಲ್ಲಿ ಉಳಿಯುತ್ತವೆ.

ಉದಾಹರಣೆಗಾಗಿ, ಗಂಡಸರನ್ನು ಸೂಚಿಸುವ ಅಣ್ಣನ್, ಅರಸನ್, ಆಳ್, ಮಗನ್, ಮೊದಲಾದವು ಪುಲ್ಲಿಂಗದಲ್ಲಿವೆ, ಹೆಂಗಸರನ್ನು ಸೂಚಿಸುವ ಅಕ್ಕನ್, ತಂಗೆ, ಅರಸಿ ಮೊದಲಾದವು ಸ್ತ್ರೀಲಿಂಗದಲ್ಲಿವೆ, ಮತ್ತು ಮನುಷ್ಯರಲ್ಲದ ಪ್ರಾಣಿ, ವಸ್ತು, ಸಂಗತಿ ಮೊದಲಾದುವನ್ನು ಸೂಚಿಸುವ ಎಟ್ಟು, ಮರನ್, ತೋಳ್ ಮೊದಲಾದವು ನಪುಂಸಕಲಿಂಗದಲ್ಲಿವೆ. ಈ ನಾಮಪದಗಳೊಂದಿಗೆ ಬರುವ ಕ್ರಿಯಾಪದಗಳ ಸ್ವರೂಪ ಮತ್ತು ಅವುಗಳ ಬದಲಿಗೆ ಬರುವ ಸರ್ವನಾಮಗಳ ಸ್ವರೂಪ ಈ ವಿಭಜನೆಯ ಮೇಲೆ ಅವಲಂಬಿಸಿರುತ್ತದೆ.

| | |
|---|---|
| ಅಣ್ಣನ್ ಬಂದನ್ | ಅವನ್... |
| ಅಕ್ಕನ್ ಬಂದಳ್ | ಅವಳ್... |
| ಎಟ್ಟು ಬಂದುದು | ಅದು... |

ಅಣ್ಣನ್ ಪದ ಒಬ್ಬ ಗಂಡಸನ್ನು ಸೂಚಿಸುವ ಕಾರಣ ಪುಲ್ಲಿಂಗ, ಮತ್ತು ಈ ಕಾರಣಕ್ಕಾಗಿ, ಅದರೊಂದಿಗೆ ಬರುವ ಕ್ರಿಯಾಪದ ಅನ್ ಪ್ರತ್ಯಯದಲ್ಲಿ ಕೊನೆಗೊಳ್ಳುತ್ತದೆ. ಅಕ್ಕನ್ ಪದ ಒಬ್ಬ ಹೆಂಗಸನ್ನು ಸೂಚಿಸುವ ಕಾರಣ ಸ್ತ್ರೀಲಿಂಗ, ಮತ್ತು ಈ ಕಾರಣಕ್ಕಾಗಿ, ಅದರೊಂದಿಗೆ ಬರುವ ಕ್ರಿಯಾಪದ ಅಳ್ ಪ್ರತ್ಯಯದಲ್ಲಿ ಕೊನೆಗೊಳ್ಳುತ್ತದೆ. ಎಟ್ಟು ಎಂಬುದು ಒಂದು ಪ್ರಾಣಿಯನ್ನು (ಎತ್ತನ್ನು ಎಂದರೆ ಮನುಷ್ಯೇತರವನ್ನು) ಸೂಚಿಸುವ ಕಾರಣ ನಪುಂಸಕ ಲಿಂಗ, ಮತ್ತು ಈ ಕಾರಣಕ್ಕಾಗಿ, ಅದರೊಂದಿಗೆ ಬರುವ ಕ್ರಿಯಾಪದ ಉದು ಪ್ರತ್ಯಯದಲ್ಲಿ ಕೊನೆಗೊಳ್ಳುತ್ತದೆ.

ಇದೇ ರೀತಿಯಲ್ಲಿ, ಮೇಲೆ ಅಣ್ಣನ್ ಪದದ ಬದಲಿಗೆ ಅವನ್ ಸರ್ವನಾಮವೂ, ಅಕ್ಕನ್ ಪದದ ಬದಲಿಗೆ ಅವಳ್ ಸರ್ವನಾಮವೂ, ಮತ್ತು ಎಟ್ಟು ಪದದ ಬದಲಿಗೆ ಅದು ಸರ್ವನಾಮವೂ ಬಳಕೆಯಾಗುವುದಕ್ಕೆ ಅವುಗಳ ನಡುವೆ ಅರ್ಥದಲ್ಲಿ ಕಾಣಿಸುವ ವ್ಯತ್ಯಾಸವೇ ಮೂಲ ಕಾರಣ.

ಈ ರೀತಿ, ಹಳೆಗನ್ನಡದಲ್ಲಿ ಪುಲ್ಲಿಂಗ ಮತ್ತು ಸ್ತ್ರೀಲಿಂಗಗಳ ನಡುವಿರುವ ಲಿಂಗಭೇದ ಮನುಷ್ಯರನ್ನು ಸೂಚಿಸುವ ಪದಗಳಲ್ಲಿ ಮಾತ್ರ ಕಾಣಿಸುತ್ತದೆಯಲ್ಲದೆ ಇತರ ಪದಗಳಲ್ಲಿ ಕಾಣಿಸುವುದಿಲ್ಲ. ಉದಾಹರಣೆಗಾಗಿ, ಎಟ್ಟು 'ಎತ್ತು' ಪದ ಗಂಡು ಪ್ರಾಣಿಯನ್ನು ಸೂಚಿಸುವುದಾದರೂ ಪುಲ್ಲಿಂಗದಲ್ಲಿರುವ ಬದಲು ನಪುಂಸಕಲಿಂಗದಲ್ಲಿದೆ (ಎಟ್ಟು ಬಂದುದು); ಪೆಣ್ಗುದುರೆ ಪದ ಹೆಣ್ಣು ಪ್ರಾಣಿಯನ್ನು ಸೂಚಿಸುವುದಾದರೂ ಸ್ತ್ರೀಲಿಂಗದಲ್ಲಿಲ್ಲ, ನಪುಂಸಕಲಿಂಗದಲ್ಲೇ ಇದೆ (ಪೆಣ್ಗುದುರೆ ಬಂದುದು).

ಈ ಮೇಲಿನ ನಿಯಮಗಳಿಗೆ ಹಳೆಗನ್ನಡದ ಬರಹಗಳಲ್ಲಿ ಕೆಲವೇ ಕೆಲವು ಅಪವಾದಗಳು ಮಾತ್ರ ಕಾಣಿಸಿಕೊಳ್ಳುತ್ತವೆ. ಇಂತಹ ಅಪವಾದಗಳಿಗೆ ಕೆಲವು ಪದಗಳ ಬಳಕೆಯಲ್ಲಿ ಅವು ಸೂಚಿಸುವ ಪ್ರಾಣಿ ಇಲ್ಲವೇ ವಸ್ತುಗಳಿಗೆ ಮನುಷ್ಯತ್ವದ ಆರೋಪ ಇಲ್ಲವೇ ಮನುಷ್ಯರಿಗೆ ಪ್ರಾಣಿತ್ವದ ಆರೋಪವಾಗಿರುವುದೇ ಮುಖ್ಯ ಕಾರಣ.

ಉದಾಹರಣೆಗಾಗಿ, ರವಿ ಮೂಡಿದಂ ಎಂಬ ಬಳಕೆಯಲ್ಲಿ ರವಿ ಒಂದು ವಸ್ತುವನ್ನು ಸೂಚಿಸುವುದಾದರೂ, ಅದಕ್ಕೆ ಮನುಷ್ಯತ್ವದ ಆರೋಪವಾಗಿರುವುದರಿಂದ ಪುಲ್ಲಿಂಗ; ತೊಳ್ತು ಬಂದುದು ಎಂಬ ಬಳಕೆಯಲ್ಲಿ ತೊಳ್ತು ಒಬ್ಬ ಹೆಂಗುಸನ್ನು (ಇಲ್ಲವೇ ಗಂಡುಸನ್ನು) ಸೂಚಿಸುವುದಾದರೂ, ತಿರಸ್ಕಾರದ ಅರ್ಥದಲ್ಲಿ ಪ್ರಾಣಿತ್ವದ ಆರೋಪವಾಗಿದೆಯಾದ ಕಾರಣ, ನಪುಂಸಕ ಲಿಂಗ.

### ೭.೨.೨ ಸಂಸ್ಕೃತದ ಲಿಂಗವಿಭಜನೆ

ಹಳೆಗನ್ನಡದ ಹಾಗೆ, ಸಂಸ್ಕೃತದಲ್ಲೂ ನಾಮಪದಗಳನ್ನು ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗ ಎಂಬುದಾಗಿ ಮೂರು ಲಿಂಗಗಳಲ್ಲಿ ವಿಭಜಿಸಲಾಗಿದೆ. ಆದರೆ, ಸಂಸ್ಕೃತದ ಈ ವಿಭಜನೆ ಹಳೆಗನ್ನಡದ ವಿಭಜನೆಗಿಂತ ತೀರ ಭಿನ್ನವಾದುದು. ಯಾಕೆಂದರೆ, ಅದಕ್ಕೆ ಹಳೆಗನ್ನಡದ ವಿಭಜನೆಯ ಹಾಗೆ, ನಾಮಪದಗಳ ಅರ್ಥವನ್ನು ಆಧಾರವಾಗಿ ಕೊಡಲು ಸಾಧ್ಯವಾಗುವುದಿಲ್ಲ. ನಾಮಪದಗಳೊಂದಿಗೆ ಬರಬಲ್ಲ ಬೇರೆ ನಾಮಪದಗಳ ಸ್ವರೂಪದಿಂದಲೇನೇ ಅವುಗಳ ಲಿಂಗವನ್ನು ನಿರ್ಧರಿಸಬೇಕಾಗುತ್ತದೆ.

ಉದಾಹರಣೆಗಾಗಿ, ವರ್ಣ 'ಬಣ್ಣ' ಪದ ಸಂಸ್ಕೃತದಲ್ಲಿ ಪುಲ್ಲಿಂಗದಲ್ಲಿದೆ, ನೌ 'ದೋಣಿ' ಪದ ಸ್ತ್ರೀಲಿಂಗದಲ್ಲಿದೆ ಮತ್ತು ವಾಸ 'ಬಟ್ಟೆ' ಪದ ನಪುಂಸಕ ಲಿಂಗದಲ್ಲಿದೆ. ಸಂಸ್ಕೃತ ಈ ಪದಗಳ ನಡುವೆ ಈ ರೀತಿ ಲಿಂಗಭೇದವಿದೆಯೆಂದು ಹೇಳಲು ಮೂರು ಲಿಂಗಗಳಲ್ಲೂ ಬರಬಲ್ಲ ಶುಕ್ಲ 'ಬಿಳಿ', ಗುರು 'ಭಾರ' ಮೊದಲಾದ ಬೇರೆ ಕೆಲವು ನಾಮಪದಗಳು ಇವುಗಳೊಂದಿಗೆ ಯಾವ ರೂಪದಲ್ಲಿ ಬರುತ್ತವೆ ಎಂಬುದು ಆಧಾರವಲ್ಲದೆ ಈ ಪದಗಳ ಅರ್ಥ ಇಲ್ಲವೇ ಸ್ವರೂಪ ಅಧಾರವಲ್ಲ.

(೧ಕ) ಶುಕ್ಲಃ ವರ್ಣಃ 'ಬಿಳಿ ಬಣ್ಣ'
(೧ಖ) ಶುಕ್ಲಾ ನೌಃ 'ಬಿಳಿ ದೋಣಿ'
(೧ಗ) ಶುಕ್ಲಂ ವಾಸಃ 'ಬಿಳಿ ಬಟ್ಟೆ'

ಮೇಲೆ ಶುಕ್ಲ ಪದ ಶುಕ್ಲಃ, ಶುಕ್ಲಾ, ಮತ್ತು ಶುಕ್ಲಂ ಎಂಬ ಮೂರು ಲಿಂಗರೂಪಗಳಲ್ಲಿ ಬಂದಿದ್ದು, ಈ ಕಾರಣಕ್ಕಾಗಿ ಅದರೊಂದಿಗೆ ಬಂದಿರುವ ವರ್ಣ, ನೌ ಮತ್ತು ವಾಸ ನಾಮಪದಗಳು ಮೂರು 'ಲಿಂಗ'ಗಳಲ್ಲಿ (ಅನುಕ್ರಮವಾಗಿ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗಗಳಲ್ಲಿ) ಇವೆಯೆಂದು ಹೇಳಬೇಕಾಗಿದೆ.

ಇದಲ್ಲದೆ, ನಾಮಪದಗಳ ಲಿಂಗವನ್ನನುಸರಿಸಿ ಅವಕ್ಕೆ ಬೇರೆ ಬೇರೆ ರೀತಿಯ ವಿಭಕ್ತಿ-ವಚನರೂಪಗಳು ಕಾಣಿಸಿಕೊಳ್ಳುತ್ತವೆ. ಉದಾಹರಣೆಗಾಗಿ, ತೃತೀಯಾ ಏಕವಚನದಲ್ಲಿ ಪುಲ್ಲಿಂಗದ ಅಗ್ನಿ ಪದಕ್ಕೆ ಅಗ್ನಿನಾ ರೂಪವಿದೆಯಾದರೆ, ಸ್ತ್ರೀ ಲಿಂಗದ ಮತಿ ಪದಕ್ಕೆ ಮತ್ಯಾ ರೂಪವಿದೆ; ಸಪ್ತಮಿ-ಏಕವಚನದಲ್ಲಿ ಪುಲ್ಲಿಂಗದ ಅಗ್ನಿ ಪದಕ್ಕೆ ಅಗ್ನೌ ರೂಪವಿದೆಯಾದರೆ, ನಪುಂಸಕ ಲಿಂಗದ ವಾರಿ ಪದಕ್ಕೆ ವಾರಿಣಿ ರೂಪವಿದೆ.

ಸಂಸ್ಕೃತದಲ್ಲಿ ಹಳೆಗನ್ನಡದ ಹಾಗೆ ನಾಮಪದಗಳ ಲಿಂಗಭೇದವನ್ನು ಕ್ರಿಯಾರೂಪಗಳಲ್ಲಿ ಸೂಚಿಸುವ ಕ್ರಮ ಇಲ್ಲ. ನಾಮಪದಗಳು ಬೇರೆ ಬೇರೆ ಲಿಂಗಗಳಲ್ಲಿ ಬಂದರೂ ಕ್ರಿಯಾಪದ ಒಂದೇ ರೂಪದಲ್ಲಿರುತ್ತದೆ.

| ಸಂಸ್ಕೃತ | ಹಳೆಗನ್ನಡ |
|---|---|
| ತತ್ರ ರಾಮಃ ಅಸ್ತಿ | ಅಲ್ಲಿ ರಾಮನ್ ಇರ್ಪನ್ |
| ತತ್ರ ಸೀತಾ ಅಸ್ತಿ | ಅಲ್ಲಿ ಸೀತೆ ಇರ್ಪಳ್ |
| ತತ್ರ ಗೃಹಂ ಅಸ್ತಿ | ಅಲ್ಲಿ ಮನೆ ಇರ್ಪುದು |

ಮೇಲೆ ಕೊಟ್ಟಿರುವ ಉದಾಹರಣೆಯಲ್ಲಿ ಹಳೆಗನ್ನಡದ ಇರು ಕ್ರಿಯಾಪದ ನಾಮಪದದ ಲಿಂಗಭೇದವನ್ನನುಸರಿಸಿ, ಇರ್ಪನ್, ಇರ್ಪಳ್ ಮತ್ತು ಇರ್ಪುದು ಎಂಬ ಮೂರು ರೂಪಗಳಲ್ಲಿ ಬಂದಿದೆ; ಆದರೆ, ಸಂಸ್ಕೃತದ ಅಸ್ ಕ್ರಿಯಾಪದ ಈ ಮೂರು ಸಂದರ್ಭಗಳಲ್ಲೂ ಅಸ್ತಿ ಎಂಬ ಒಂದೇ ರೂಪದಲ್ಲಿ ಬಂದಿದೆ.

ಸರ್ವನಾಮಗಳು ಮಾತ್ರ ಸಂಸ್ಕೃತದಲ್ಲೂ ಲಿಂಗಭೇದವನ್ನು ಸೂಚಿಸುತ್ತವೆ (ಕೆಳಗೆ ಕೊಟ್ಟಿರುವ (೨ಕ) ನೋಡಿ). ಹಳೆಗನ್ನಡದ ಸರ್ವನಾಮಗಳಲ್ಲಿ ಪುಂ–ಸ್ತ್ರೀ ಲಿಂಗಭೇದ ಬಹುವಚನದಲ್ಲಿ ಇಲ್ಲವಾಗುತ್ತದೆ; ಆದರೆ, ಸಂಸ್ಕೃತದಲ್ಲಿ ದ್ವಿವಚನ–ಬಹುವಚನಗಳಲ್ಲೂ ಮೂರು ವಿಧದ ಲಿಂಗಭೇದ (ಕೆಲವು ಅಪವಾದಗಳನ್ನು ಬಿಟ್ಟರೆ) ಉಳಿದಿರುತ್ತದೆ.

(೨ಕ) ಸಂಸ್ಕೃತ:

| | ಏಕವಚನ | ದ್ವಿವಚನ | ಬಹುವಚನ |
|---|---|---|---|
| ‘ಅವನು’ | ಸಃ | ತೌ | ತೇ |
| ‘ಅವಳು’ | ಸಾ | ತೇ | ತಾಃ |
| ‘ಅದು’ | ತತ್ | ತೇ | ತಾನಿ |

(೨ಖ) ಹಳೆಗನ್ನಡ:

| | ಏಕವಚನ | ಬಹುವಚನ |
|---|---|---|
| ‘ಅವನು’ | ಅವನ್ | ಅವರ್ |
| ‘ಅವಳು’ | ಅವಳ್ | ಅವರ್ |
| ‘ಅದು’ | ಅದು | ಅವು |

ಹೆಚ್ಚಿನ ಸಂದರ್ಭಗಳಲ್ಲೂ, ಸಂಸ್ಕೃತದಲ್ಲಿ ನಾಮಪದವೊಂದರ ಲಿಂಗ ಯಾವುದೆಂಬುದನ್ನು ಅದರ ಅರ್ಥದ ಅಧಾರದ ಮೇಲೆ ಗುರುತಿಸಲು ಸಾಧ್ಯವಾಗದು. ಯಾಕೆಂದರೆ, ಒಂದೇ ಅರ್ಥವಿರುವ ಪದಗಳು ಬೇರೆ ಬೇರೆ ಲಿಂಗಗಳಲ್ಲಿ ಬರಬಲ್ಲುವು. ಉದಾಹರಣೆಗಾಗಿ, ‘ಹೆಂಡತಿ’ ಎಂಬ ಅರ್ಥವಿರುವ ಪದಗಳಲ್ಲಿ ದಾರ ಪದ ಪುಲ್ಲಿಂಗದಲ್ಲಿದೆ (ಈ ಪದ ಯಾವಾಗಲೂ ಬಹುವಚನ ರೂಪದಲ್ಲಿ (ದಾರಾಃ ಎಂಬುದಾಗಿ) ಬರುತ್ತದೆ), ಪತ್ನೀ ಪದ ಸ್ತ್ರೀಲಿಂಗದಲ್ಲಿದೆ, ಮತ್ತು ಕಲತ್ರ ಪದ ನಪುಂಸಕಲಿಂಗದಲ್ಲಿದೆ.

ಪದಗಳ ಕೊನೆಯ ವರ್ಣ ಯಾವುದೆಂಬುದರಿಂದಲೂ ಅವುಗಳ ಲಿಂಗ ಯಾವುದೆಂಬುದನ್ನು ನಿರ್ಧರಿಸಲು ಹೆಚ್ಚಿನೆಡೆಗಳಲ್ಲೂ ಸಾಧ್ಯವಾಗದು. ಈ, ಊ ಮತ್ತು ಆಗಳಲ್ಲಿ ಕೊನೆಗೊಳ್ಳುವ ಪದಗಳಲ್ಲಿ ಹೆಚ್ಚಿನವೂ ಸ್ತ್ರೀಲಿಂಗದಲ್ಲಿರುತ್ತವೆ, ಮತ್ತು ಅಕಾರದಲ್ಲಿ ಕೊನೆಗೊಳ್ಳುವ ಪದ ಸ್ತ್ರೀಲಿಂಗವಾಗಲಾರದು ಎಂಬಂತಹ ಕೆಲವೇ ಕೆಲವು ನಿಯಮಗಳು ಮಾತ್ರ ಇದಕ್ಕೆ

ಅಪವಾದಗಳಾಗಬಲ್ಲುವು (ಆದರೆ, ಇಂತಹ ನಿಯಮಗಳಿಗೂ ಅಪವಾದಗಳಿವೆ. ಉದಾಹರಣೆಗಾಗಿ, ಸೇನಾನೀ ಪದ ಈಕಾರದಲ್ಲಿ ಕೊನೆಗೊಳ್ಳುವುದಾದರೂ ಪುಲ್ಲಿಂಗದಲ್ಲಿದೆ).

ಇಂತಹ ನಿಯಮಗಳಲ್ಲಿ ಕೆಲವಕ್ಕೆ ಸಂಸ್ಕೃತದ ಪದರಚನೆಯಲ್ಲಿ ವಿವರಣೆಯನ್ನು ಕಾಣಬಹುದು. ಉದಾಹರಣೆಗಾಗಿ, ಸಂಸ್ಕೃತದ ಹಲವು ನಾಮಪದಗಳಿಗೆ ಈ ಇಲ್ಲವೇ ಆ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ಅವುಗಳ ಸ್ತ್ರೀಲಿಂಗ ರೂಪವನ್ನು ಸಾಧಿಸಲು ಸಾಧ್ಯವಿದೆ (ಬಾಲ–ಬಾಲಾ, ಶಿವ–ಶಿವಾ, ದೇವ–ದೇವೀ, ಇತ್ಯಾದಿ).

ನಿರ್ಜೀವಿಗಳಾದ ವಸ್ತು, ವಿಷಯ ಮೊದಲಾದವುಗಳನ್ನು ಸೂಚಿಸುವ ಪದಗಳಲ್ಲೂ ಸಂಸ್ಕೃತದಲ್ಲಿ ಲಿಂಗಭೇದ ಕಾಣಿಸುತ್ತದೆ. ಉದಾಹರಣೆಗಾಗಿ, ಪವನ, ಪಾದ, ವಾಯು ಮೊದಲಾದ ಪದಗಳು ಪುಲ್ಲಿಂಗದಲ್ಲಿವೆ, ನೌ, ನದೀ, ವಿಭಕ್ತಿ, ಮತಿ, ಮೊದಲಾದ ಪದಗಳು ಸ್ತ್ರೀಲಿಂಗದಲ್ಲಿವೆ, ಮತ್ತು ಹೃದಯ, ಮಧು, ಜಗತ್ ಮೊದಲಾದ ಪದಗಳು ನಪುಂಸಕಲಿಂಗದಲ್ಲಿವೆ.

ಈ ರೀತಿ, ಹೆಚ್ಚಿನ ಸಂದರ್ಭಗಳಲ್ಲೂ ಸಂಸ್ಕೃತ ಪದಗಳ ಲಿಂಗ ಯಾವುದೆಂಬುದನ್ನು ಅವುಗಳ ಅರ್ಥದಿಂದ ಇಲ್ಲವೇ ಸ್ವರೂಪದಿಂದ ನಿರ್ಧರಿಸಲು ಸಾಧ್ಯವಾಗುವುದಿಲ್ಲ. ಹಾಗಾಗಿ, ಆ ಭಾಷೆಯ ಅರ್ಥಕೋಶಗಳಲ್ಲಿ ಪ್ರತಿಯೊಂದು ನಾಮಪದದ ಮುಂದೆಯೂ ಅದರ ಲಿಂಗ ಯಾವುದೆಂಬುದನ್ನು ಸೂಚಿಸುವ ಅವಶ್ಯಕತೆಯಿದೆ.

ಇದಲ್ಲದೆ, ಸಂಸ್ಕೃತದ ನಾಮಪದಗಳನ್ನು (ಕ) ಯಾವಾಗಲೂ ಒಂದೇ ಲಿಂಗದಲ್ಲಿ ಬರಬಲ್ಲ ನಾಮಪದಗಳು ಮತ್ತು (ಖ) ಸಂದರ್ಭಕ್ಕನುಸಾರವಾಗಿ ಎರಡು ಇಲ್ಲವೇ ಮೂರು ಲಿಂಗಗಳಲ್ಲೊಂದನ್ನು ಆರಿಸಿಕೊಳ್ಳಬಲ್ಲ ನಾಮಪದಗಳು ಎಂಬುದಾಗಿಯೂ ವಿಂಗಡಿಸುವ ಅವಶ್ಯಕತೆಯಿದೆ. ಇಲ್ಲೂ ಪದಗಳ ಅರ್ಥಕ್ಕಿಂತಲೂ, ಅವುಗಳೊಂದಿಗೆ ಬರುವ ಇತರ ಪದಗಳ ಲಿಂಗವೇ ಆಧಾರವಾಗಿರುತ್ತದೆ.

ಹಾಗಾಗಿ, ಸಂಸ್ಕೃತದ ಅರ್ಥಕೋಶಗಳಲ್ಲಿ ನಾಮಪದವೊಂದು ಒಂದೇ ಲಿಂಗದಲ್ಲಿ ಬರುವಂತಹದೋ, ಇಲ್ಲವೇ ಎರಡು ಅಥವಾ ಮೂರು ಲಿಂಗಗಳಲ್ಲಿ ಬರುವಂತಹದೋ ಎಂಬುದನ್ನೂ ಸ್ಪಷ್ಟವಾಗಿ ಸೂಚಿಸುವ ಅವಶ್ಯಕತೆಯಿದೆ, ಮತ್ತು ಅರ್ಥಕೋಶಗಳಲ್ಲಿ ಹಾಗೆ ಸೂಚಿಸಲಾಗುತ್ತದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ನಾಮಪದಗಳನ್ನು ಗಮನಿಸಬಹುದು:

**(ಕ) ಯಾವಾಗಲೂ ಒಂದೇ ಲಿಂಗದಲ್ಲಿ ಬರುವ ಪದಗಳು**

(೩ಕ) ಪುಲ್ಲಿಂಗ: ಪಿತೃ, ತಿಲಕ, ಧೀ, ತಡಿ 'ಏಟು', ಚೋಲ 'ರವಿಕೆ', ತರ್ಕ, ತಿಮಿಂಗಿಲ, ತಿರಸ್ಕಾರ, ಆತ್ಮನ್, ನಿಧಿ, ಇತ್ಯಾದಿ.

(೩ಖ) ಸ್ತ್ರೀಲಿಂಗ: ಮಾತೃ, ನದೀ, ನೌ, ಶ್ರೀ, ಲಿಪಿ, ನಿದ್ರಾ, ಮಹಾನವಮೀ, ಚರ್ಚಾ, ಕಾದಂಬರೀ, ಇತ್ಯಾದಿ.

(೩ಗ) ನಪುಂಸಕಲಿಂಗ: ಹೃದಯ, ಚಿತ್ರ, ತಾಂಬೂಲ, ಮಧು, ಅಸ್ಥಿ, ಯಕೃತ್, ಬ್ರಹ್ಮನ್, ಇತ್ಯಾದಿ.

**(ಖ) ಎರಡು ಅಥವಾ ಮೂರು ಲಿಂಗಗಳಲ್ಲಿ ಬರಬಲ್ಲ ಪದಗಳು**

(೪ಕ) ಪುಂ–ಸ್ತ್ರೀ: ತಿಥಿ, ವಜ್ರ, ಕೀಲ 'ಕೀಲು', ಕುಟ 'ಮನೆ', ಇತ್ಯಾದಿ.

(೪ಖ) ಪುಂ–ನಪುಂಸಕ: ಕರ್ತೃ, ತಂಡುಲ, ಮೋದಕ, ಮೂಲ, ಕಷಾಯ, ಕಿರೀಟ, ಕುಟುಂಬ, ಅಭ್ರಕ, ಇತ್ಯಾದಿ.

(೪ಗ) ಸ್ತ್ರೀ–ನಪುಂಸಕ: ಔಚಿತ್ಯ(ತೀ), ಶಾಲ(ಲಾ), ನೃಸೇನ(ನಾ), ಇತ್ಯಾದಿ.
(೪ಘ) ಪುಂ–ಸ್ತ್ರೀ–ನಪುಂಸಕ: ಶುಚಿ, ಗುರು, ನಿತ್ಯ, ನಿದ್ರಿತ, ಪ್ರಕಾಶಕ, ಪರಕೀಯ, ಇತ್ಯಾದಿ.

ಹಳೆಗನ್ನಡದಲ್ಲಿ ನಾಮಪದಗಳ ಲಿಂಗಭೇದ ಹೆಚ್ಚಿನೆಡೆಗಳಲ್ಲೂ ಅವುಗಳ ಅರ್ಥದ ಮೇಲೆ ಅವಲಂಬಿಸಿದೆಯಾದ ಕಾರಣ, ಆ ಭಾಷೆಯ ಅರ್ಥಕೋಶಗಳಲ್ಲಿ ನಾಮಪದಗಳ ಲಿಂಗವನ್ನು ಸೂಚಿಸುವ ಅವಶ್ಯಕತೆಯಿಲ್ಲ. ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳೂ ಈ ನಿಯಮಕ್ಕೆ ಒಳಪಡುವ ಕಾರಣ, ಅವುಗಳ ಲಿಂಗವನ್ನೂ ಹಳೆಗನ್ನಡದ ಅರ್ಥಕೋಶಗಳಲ್ಲಿ ತಿಳಿಸಬೇಕಾಗಿಲ್ಲ.

ಹಳೆಗನ್ನಡ ಮತ್ತು ಸಂಸ್ಕೃತಗಳಲ್ಲಿ ಬಳಕೆಯಾಗುವ ಲಿಂಗಭೇದಗಳು ಈ ರೀತಿ ಎರಡು ತೀರ ಭಿನ್ನವಾದ ವ್ಯಾಕರಣ ತತ್ವಗಳನ್ನು ಅವಲಂಬಿಸಿವೆ.

ಲಿಂಗಭೇದವನ್ನು ಸೂಚಿಸುವಲ್ಲಿ ಹಳೆಗನ್ನಡಕ್ಕೂ ಸಂಸ್ಕೃತಕ್ಕೂ ನಡುವಿರುವ ಇನ್ನೊಂದು ಮುಖ್ಯವಾದ ವ್ಯತ್ಯಾಸವನ್ನು ಕೆಳಗೆ ೭.೩.೧ರಲ್ಲಿ ವಿವರಿಸಲಾಗಿದೆ: ಸಂಸ್ಕೃತದಲ್ಲಿ ಪುಂ–ಸ್ತ್ರೀ–ನಪುಂಸಕ ಲಿಂಗಭೇದ ಎಲ್ಲಾ ವಚನಗಳಲ್ಲೂ ಕಾಣಿಸಿಕೊಳ್ಳುತ್ತದೆ; ಆದರೆ, ಹಳೆಗನ್ನಡದಲ್ಲಿ ಇದು ಏಕವಚನದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ. ಬಹುವಚನದಲ್ಲಿ ಪುಂ–ಸ್ತ್ರೀ ಭೇದ ಅಳಿದು ಹೋಗಿ, ಮನುಷ್ಯ–ಮನುಷ್ಯೇತರ ಭೇದ ಮಾತ್ರ ಉಳಿದುಕೊಳ್ಳುತ್ತದೆ.

### ೭.೨.೩ ಹಳೆಗನ್ನಡ ವೈಯಾಕರಣಿಗಳ ಸಮಸ್ಯೆಗಳು

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳು ಈ ರೀತಿ ಲಿಂಗಭೇದವನ್ನು ತೋರಿಸುವಲ್ಲಿ ತೀರ ಭಿನ್ನವಾದ ವ್ಯಾಕರಣ ತತ್ವಗಳನ್ನು ಬಳಸಿರುವ ಕಾರಣ, ಸಂಸ್ಕೃತದ ವೈಯಾಕರಣಿಗಳು ಆ ಭಾಷೆಯ ಲಿಂಗ ವ್ಯವಸ್ಥೆಯ ಕುರಿತು ಹೇಳಿರುವುದನ್ನು ಹಾಗೆಯೇ ಹಳೆಗನ್ನಡಕ್ಕೂ ಅಳವಡಿಸಿಕೊಳ್ಳಲು ಸಾಧ್ಯವಾಗದು. ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳು ಹೀಗೆ ಮಾಡಲು ಹೋಗಿ, ಅನವಶ್ಯಕವಾಗಿ ಹಳೆಗನ್ನಡದ ಲಿಂಗಭೇದ ಬಹಳ ಕ್ಲಿಷ್ಟವಾದುದೆಂದು ಅನಿಸುವ ಹಾಗೆ ಮಾಡಿದ್ದಾರೆ.

ಉದಾಹರಣೆಗಾಗಿ, ಕೇಶಿರಾಜನು ಹಳೆಗನ್ನಡದಲ್ಲಿ ಒಂಬತ್ತು ರೀತಿಯ ಲಿಂಗಗಳಿವೆಯೆಂದು ಹೇಳುತ್ತಾನೆ (ಸೂ. ೯೮). ನಿಜಕ್ಕೂ ಮೂರಿರುವುದು ಒಂಬತ್ತು ಹೇಗಾಗುತ್ತದೆ? ಇದಕ್ಕಾಗಿ ಆತ ಹಳೆಗನ್ನಡ ಪದಗಳ ಬಳಕೆಯಲ್ಲಿ ಕಾಣಿಸುವ ಹಲವು ಗುಣಧರ್ಮಗಳನ್ನು ಒಟ್ಟು ಸೇರಿಸಲು ಪ್ರಯತ್ನಿಸಿ ದೊಡ್ಡದೊಂದು ಕಲಸುಮೇಲೋಗರವನ್ನೇ ಮಾಡಿಹಾಕಿದ್ದಾನೆ.

(೧) ಕೆಲವು ಮನುಷ್ಯೇತರ ಪದಗಳಿಗೆ ಮನುಷ್ಯತ್ವವನ್ನು ಆರೋಪಿಸಲು ಸಾಧ್ಯವಿದ್ದು, ಅವು ನಪುಂಸಕ ಲಿಂಗದಲ್ಲಿ ಬಳಕೆಯಾಗುವ ಬದಲು ಪುಲ್ಲಿಂಗದಲ್ಲಿ ಬಳಕೆಯಾಗಬಲ್ಲುವು (ರವಿ ಮೂಡಿದಂ, ರವಿ ಮೂಡಿದುದು; ಕಾಮನೆಚ್ಚಂ, ಕಾಮಂ ಪೆರ್ಚಿದುದು). ಇವನ್ನು ‘ಪುಂನಪುಂಸಕ’ಗಳೆಂದು ಕರೆಯಲಾಗಿದೆ. ಇದೇ ರೀತಿಯಲ್ಲಿ, ಸಿರಿ ಪದ ಸ್ತ್ರೀಲಿಂಗ ಮತ್ತು ನಪುಂಸಕಲಿಂಗಗಳೆರಡರಲ್ಲೂ ಬಳಕೆಯಾಗಲು ಸಾಧ್ಯವಿದ್ದು (ಸಿರಿಯೊಲ್ವಳ್, ಸಿರಿಯೊಂದಾಗಮೊಡಂ) ‘ಸ್ತ್ರೀ ನಪುಂಸಕ’ಕ್ಕೆ ಉದಾಹರಣೆಯಾಗಬಲ್ಲುದು.

(೨) ಕೆಲವು ಹೆಂಗಸರನ್ನು ಸೂಚಿಸುವ ಪದಗಳಿಗೆ ವಸ್ತುತ್ವ ಇಲ್ಲವೇ ಪ್ರಾಣಿತ್ವವನ್ನು ಆರೋಪಿಸಲು ಸಾಧ್ಯವಿದ್ದು, ಅವು ನಪುಂಸಕ ಲಿಂಗದಲ್ಲಿ ಬಳಕೆಯಾಗಬಲ್ಲುವಾಗಿದ್ದು, ಸ್ತ್ರೀನಪುಂಸಕಲಿಂಗಕ್ಕೆ ಉದಾಹರಣೆಗಳಾಗುತ್ತವೆ (ಆ ಪೆಣ್ ಜಾಣೆ, ಆ ಪೆಣ್ ಬಂದುದು).

ಇಂತಹ ಪದಗಳು ಗಂಡಸನ್ನಾಗಲಿ ಇಲ್ಲವೇ ಹೆಂಗಸನ್ನಾಗಲಿ ಸೂಚಿಸುವಂತಹವಾದರೆ, ತ್ರಿಲಿಂಗಕ್ಕೆ ಉದಾಹರಣೆಗಳಾಗಬಲ್ಲುವು (ಶಿಶು, ಕೂಸು, ಪಗೆ). ಪುಂನಪುಂಸಕಕ್ಕೂ ಇಂತಹ ಉದಾಹರಣೆಗಳಿರಲು ಸಾಧ್ಯವಿದೆ.

(೩) ಕೆಲವು ಪದಗಳು ಸಂದರ್ಭಕ್ಕನುಸಾರವಾಗಿ (ಯಾವ ಪ್ರತ್ಯಯವನ್ನೂ ಸೇರಿಸದೆ), ಗಂಡಸನ್ನಾಗಲಿ ಇಲ್ಲವೇ ಹೆಂಗಸನ್ನಾಗಲಿ ಸೂಚಿಸಬಲ್ಲುವು (ಇವಂ ದೇವರ ತೊಟ್ಟು, ಇದು ದೇವರ ತೊಟ್ಟು). ಇವು ಪುಂಸ್ತ್ರೀಲಿಂಗಕ್ಕೆ ಉದಾಹರಣೆಗಳಾಗುತ್ತವೆ.

(೪) ಇವರ್, ಅವರ್ ಮತ್ತು ಉವರ್ ಸರ್ವನಾಮಗಳು ಬಹುವಚನದಲ್ಲಿದ್ದು ಪುಂ-ಸ್ತ್ರೀ ಲಿಂಗಭೇದವನ್ನು ಸೂಚಿಸುವುದಿಲ್ಲ. ಈ ಕಾರಣಕ್ಕಾಗಿ, ಇವನ್ನು ಪುಂಸ್ತ್ರೀಲಿಂಗಕ್ಕೆ ಉದಾಹರಣೆಗಳನ್ನಾಗಿ ಕೊಡಲಾಗಿದೆ.

(೫) ಲಿಂಗಭೇದವನ್ನೇ ತೋರಿಸದಿರುವ ಆನ್, ನೀನ್ ಮತ್ತು ತಾನ್ ಸರ್ವನಾಮಗಳನ್ನು ತ್ರಿಲಿಂಗಕ್ಕೆ ಉದಾಹರಣೆಗಳನ್ನಾಗಿ ಕೊಡಲಾಗಿದೆ.

(೬) ವಾಚ್ಯಲಿಂಗ ಇಲ್ಲವೇ ವಿಶೇಷ್ಯಾಧೀನಲಿಂಗಕ್ಕೆ ಕೊಟ್ಟಿರುವ ಉದಾಹರಣೆಗಳಲ್ಲಿ ಎರಡು ರೀತಿಯ ಪದಗಳನ್ನು, ಕೆಳಗೆ ವಿವರಿಸಿದ ಹಾಗೆ, ಒಟ್ಟಿಗೆ ಸೇರಿಸಿ ಹೇಳಲಾಗಿದೆ:

(ಕ) ನೇರಿದನ್, ನೇರಿದಳ್, ನೇರಿತು, ಅವನ್, ಅವಳ್, ಇನಿಯಂ, ಇನಿಯಳ್ ಮೊದಲಾದವುಗಳು ಅವುಗಳಲ್ಲಿ ಬರುವ ಲಿಂಗಸೂಚಕ ಪ್ರತ್ಯಯಗಳ ಮೂಲಕ ಸ್ಪಷ್ಟವಾಗಿ ಅವುಗಳ ಲಿಂಗವೇನೆಂಬುದನ್ನು ಸೂಚಿಸುತ್ತವೆ.

(ಖ) ಆನ್, ನೀನ್ ಮೊದಲಾದ ಸರ್ವನಾಮಗಳು, ಕೆಲವು ಬಹುವ್ರೀಹಿ ಪದಗಳು (ವಿಮಲಮತಿ), ಕೆಲವು ತದ್ಧಿತ ಪದಗಳು (ಓದಾಳಿ) ಮತ್ತು ಸಂಖ್ಯೆಗಳು (ಸಾಸಿರ) ಈ ರೀತಿ ಪ್ರತ್ಯಯಗಳ ಮೂಲಕ ಲಿಂಗಭೇದವನ್ನು ಸೂಚಿಸುವುದಿಲ್ಲ.

(ಈ ಎರಡು ರೀತಿಯ ನಾಮಪದಗಳನ್ನೂ ವಿಶೇಷ್ಯಾಧೀನ ಲಿಂಗಕ್ಕೆ ಉದಾಹರಣೆಗಳನ್ನಾಗಿ ಕೊಡಲಾಗಿದೆ.)

(೭) ಭೋಕನೆ, ಚೆಚ್ಚರಂ, ಮಿಗೆ, ಮತ್ತೆ ಮೊದಲಾದುವನ್ನು ಅವ್ಯಯ ಲಿಂಗಕ್ಕೆ ಉದಾಹರಣೆಗಳನ್ನಾಗಿ ಕೊಡಲಾಗಿದೆ.

ಕೇಶಿರಾಜನು ಇಲ್ಲಿ ಹಲವು ತಪ್ಪುಗಳನ್ನು ಮಾಡಿದ್ದಾನೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಕೆಳಗೆ ಸೂಚಿಸಲಾಗಿದೆ.

(೧) ಪುಲ್ಲಿಂಗದ ಕಾಮಂ ಪದ ನಪುಂಸಕಲಿಂಗದ ಕಾಮಂ ಪದದ ಹಾಗೆಯೇ ಕಾಣಿಸುವುದರಿಂದ, ಕಾಮಂ ಪದವನ್ನು ಪುಂನಪುಂಸಕ ಪದವೆಂದು ಕರೆದಿದ್ದಾನೆ; ಆದರೆ, ನಿಜಕ್ಕೂ ಅವುಗಳಲ್ಲಿ ಮೊದಲನೆಯದು ನಕಾರದಲ್ಲಿ ಕೊನೆಗೊಳ್ಳುತ್ತದೆ, ಮತ್ತು ಎರಡನೆಯದು ಮಕಾರದಲ್ಲಿ ಕೊನೆಗೊಳ್ಳುತ್ತವೆ; ಕೇಶಿರಾಜನೇ ಕೊಟ್ಟಿರುವ ಇವುಗಳ ಚತುರ್ಥೀ ರೂಪಗಳು (ಕಾಮಂಗೆ, ಕಾಮಕ್ಕೆ) ಇದನ್ನು ಸ್ಪಷ್ಟಪಡಿಸುತ್ತವೆ.

(೨) ಅವರ್, ಇವರ್, ಉವರ್ ಎಂಬ ಸರ್ವನಾಮಗಳ ಬಹುವಚನ ರೂಪಗಳನ್ನು ಪುಂಸ್ತ್ರೀಲಿಂಗಕ್ಕೆ ಉದಾಹರಣೆಗಳನ್ನಾಗಿ ಕೊಡಲಾಗಿದೆ. ಹಾಗಿದ್ದರೆ, ಬಹುವಚನ ರೂಪಗಳು ಏಕವಚನ ರೂಪಕ್ಕಿಂತ ಭಿನ್ನವಾದ ಲಿಂಗ (ನಾಮಪ್ರಕೃತಿ)ಗಳೇ? ಈ ಸರ್ವನಾಮಗಳು ಮಾತ್ರವಲ್ಲದೆ,

ಗುಣವಚನ (ಇನಿಯರ್), ಬಹುವ್ರೀಹಿ (ಕುಸಿಕೊರಲರ್), ಕೃದಂತ (ಪಾಡಿದರ್) ಮೊದಲಾದವುಗಳೂ ಈ ರೀತಿ ಬಹುವಚನದಲ್ಲಿ ಪುಂಸ್ತ್ರೀ ಭೇದವನ್ನು ಕಳೆದುಕೊಳ್ಳುವುವಾದ ಕಾರಣ, ಅವುಗಳ ಬಹುವಚನ ರೂಪಗಳೂ ಏಕವಚನ ರೂಪಕ್ಕಿಂತ ಭಿನ್ನವಾದ ಲಿಂಗ (ನಾಮಪ್ರಕೃತಿ)ಗಳೆಂದು ಹೇಳಬೇಕೇ? (೬.೨.೨.(೬) ನೋಡಿ).

ಆದರೆ, ಪುಂಸ್ತ್ರೀ ಲಿಂಗಭೇದವನ್ನು ಉಳಿಸಿಕೊಳ್ಳುವ ಪುರುಷರ್, ಸ್ತ್ರೀಯರ್, ಪೆಂಡಿರ್ ಮೊದಲಾದುವನ್ನು ಈ ರೀತಿ ಏಕವಚನರೂಪಕ್ಕಿಂತ ಭಿನ್ನವಾದ ಲಿಂಗಗಳೆಂದು ಪರಿಗಣಿಸಿದ ಹಾಗಿಲ್ಲ. ದೇವತೆ ಪದ ಸ್ತ್ರೀ ಲಿಂಗದಲ್ಲಿ ಬರಬಲ್ಲುದೆಂಬುದನ್ನು ಸೂಚಿಸಲು ದೇವತೆಯರ್ ಎಂಬ ಬಹುವಚನ ರೂಪವನ್ನೂ, ನಪುಂಸಕ ಲಿಂಗದಲ್ಲಿ ಬರಬಲ್ಲುದೆಂಬುದನ್ನು ಸೂಚಿಸಲು ದೇವತೆಗಳ್ ಎಂಬ ಬಹುವಚನ ರೂಪವನ್ನೂ ಉದಾಹರಣೆಗಳನ್ನಾಗಿ ಕೊಡಲಾಗಿದೆ.

(೩) ಸರ್ವನಾಮಗಳಾದ ಆನ್, ನೀನ್, ತಾನ್ ಎಂಬವನ್ನು ತ್ರಿಲಿಂಗಕ್ಕೂ ಉದಾಹರಣೆಗಳನ್ನಾಗಿ ಕೊಡಲಾಗಿದೆ, ಮತ್ತು ವಾಚ್ಯ (ವಿಶೇಷ್ಯಾಧೀನ)ಲಿಂಗಕ್ಕೂ ಉದಾಹರಣೆಗಳನ್ನಾಗಿ ಕೊಡಲಾಗಿದೆ. ಇಲ್ಲಿ ವಾಚ್ಯಲಿಂಗಕ್ಕೂ ತ್ರಿಲಿಂಗಕ್ಕೂ ಏನು ವ್ಯತ್ಯಾಸ ಎಂಬುದು ಸ್ಪಷ್ಟವಾಗಿಲ್ಲ.

(೪) ಹಳೆಗನ್ನಡದ ಮಟ್ಟಿಗೆ ವಾಚ್ಯಲಿಂಗ ಮತ್ತು ವಿಶೇಷ್ಯಾಧೀನಲಿಂಗ ಎಂಬವುಗಳು ಬೇರೆ ಬೇರೆ ಎಂದು ಹೇಳಿ ಮೇಲೆ (೬ಕ–ಖ)ಗಳ ನಡುವೆ ಕಾಣಿಸುವ ವ್ಯತ್ಯಾಸವನ್ನು ಈ ವ್ಯತ್ಯಾಸವೆಂದು ಪರಿಗಣಿಸಬಹುದಾಗಿತ್ತು. ಆದರೆ, ಸಂಸ್ಕೃತದಲ್ಲಿ ಇಂತಹ ವ್ಯತ್ಯಾಸವಿಲ್ಲ ಎಂಬುದೇ ಹೀಗೆ ಮಾಡದಿರಲು ಕಾರಣವಿರಬೇಕು.

(೫) ಮೇಲೆ (೭.೨.೨)ರಲ್ಲಿ ವಿವರಿಸಿದ ಹಾಗೆ, ಸಂಸ್ಕೃತದಲ್ಲಿ ನಾಮಪದಗಳ ಲಿಂಗವೇನೆಂಬುದು ಹೆಚ್ಚಿನೆಡೆಗಳಲ್ಲೂ ಅವುಗಳ ಅರ್ಥದ ಮೇಲೆ ಅವಲಂಬಿಸಿಲ್ಲವಾದ ಕಾರಣ, ಅವನ್ನು ಮೂರಕ್ಕಿಂತ ಜಾಸ್ತಿ ಲಿಂಗಗಳಲ್ಲಿ ವಿಭಜಿಸುವ ಅವಶ್ಯಕತೆಯಿದೆ. ಪುಂಸ್ತ್ರೀ, ಪುಂನಪುಂಸಕ, ಸ್ತ್ರೀನಪುಂಸಕ, ತ್ರಿಲಿಂಗ ಮೊದಲಾದ ಕಲ್ಪನೆಗಳು ಸಂಸ್ಕೃತ ಪದಗಳ ಲಿಂಗವನ್ನು ವಿವರಿಸುವಲ್ಲಿ ಸಹಾಯಕವಾಗಬಲ್ಲುವು. ಆದರೆ, ಕನ್ನಡದಲ್ಲಿ ಲಿಂಗಭೇದ ಪದಗಳ ಅರ್ಥವನ್ನವಲಂಬಿಸಿದೆಯಾದ ಕಾರಣ, ಇಂತಹ ಕಲ್ಪನೆಗಳ ಅವಶ್ಯಕತೆ ಕನ್ನಡಕ್ಕಿಲ್ಲ.

ಬಹುಶಃ ಇದನ್ನು ಗಮನಿಸಿಯೇ ಕೇಶಿರಾಜನು ತನ್ನ ದೀರ್ಘವಾದ ಲಿಂಗವಿವಕ್ಷೆಯ ಕೊನೆಯಲ್ಲಿ (ಸೂ. ೧೦೧) ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗಗಳೆಂಬ ಮೂರನ್ನು ಬಿಟ್ಟು ಉಳಿದ ಆರು ಲಿಂಗಗಳು ಕನ್ನಡದಲ್ಲಿದ್ದರೂ 'ಪರಿವರ್ತಿಸುವುದಿಲ್ಲ' ಎಂದು ಹೇಳಿದ್ದಾನೆ!

### ೭.೩ ವಚನದ ಸೂಚನೆ

ನಾಮಪದಗಳು ಗುರುತಿಸುವ ವ್ಯಕ್ತಿ, ವಸ್ತು ಮೊದಲಾದವುಗಳ ಸಂಖ್ಯೆಯನ್ನು ಸೂಚಿಸುವುದಕ್ಕಾಗಿ ಅವುಗಳೊಂದಿಗೆ 'ವಚನ'ಪ್ರತ್ಯಯವನ್ನು ಸೇರಿಸಲಾಗುತ್ತದೆ. ಉದಾಹರಣೆಗಾಗಿ, ಪುಲ್ಲೆ ಪದ ಒಂದು ಪ್ರಾಣಿ(ಜಂಕೆ)ಯನ್ನು ಸೂಚಿಸುತ್ತದೆ, ಮತ್ತು ಆ ಪದಕ್ಕೆ ಗಳ್ ವಚನ ಪ್ರತ್ಯಯವನ್ನು ಸೇರಿಸಿ ರಚಿಸಿರುವ ಪುಲ್ಲೆಗಳ್ ಪದರೂಪ ಒಂದಕ್ಕಿಂತ ಜಾಸ್ತಿ ಪ್ರಾಣಿ(ಜಂಕೆ)ಗಳನ್ನು ಸೂಚಿಸುತ್ತದೆ.

ವಚನ ಪ್ರತ್ಯಯ ಈ ರೀತಿ ವ್ಯಕ್ತಿ, ವಸ್ತು ಮೊದಲಾದವುಗಳ ಸಂಖ್ಯೆಯನ್ನು ಬಹಳ ಚುಟುಕಾಗಿ ಸೂಚಿಸುತ್ತದೆ; ಅದನ್ನೇ ಹೆಚ್ಚು ವಿವರವಾಗಿ ತಿಳಿಸಬೇಕಿದ್ದಲ್ಲಿ, ನಾಮಪದಗಳೊಂದಿಗೆ

ಎಣಿಕೆಯ ಪದಗಳನ್ನು ಬಳಸಬಹುದು. ಉದಾಹರಣೆಗಾಗಿ, ಹಳೆಗನ್ನಡದ ಪುಲ್ಲೆಗಳ್ ಪದರೂಪದಲ್ಲಿ ಬಂದಿರುವ ಗಳ್ ಪ್ರತ್ಯಯ 'ಒಂದಕ್ಕಿಂತ ಜಾಸ್ತಿ (ಜಿಂಕೆಗಳು)' ಎಂದಿಷ್ಟೇ ಸೂಚಿಸುತ್ತದೆ. ಇದಕ್ಕಿಂತ ಹೆಚ್ಚಿನ ವಿವರ ಬೇಕಿದ್ದಲ್ಲಿ, ಎರಡು ಪುಲ್ಲೆಗಳ್, ಅಯ್ದು ಪುಲ್ಲೆಗಳ್ ಎಂಬಂತಹ ಪದಕಂತೆಗಳನ್ನು ಬಳಸಬೇಕಾಗುತ್ತದೆ.

### ೭.೩.೧ ವ್ಯತ್ಯಾಸಗಳು

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ವಚನ ಪ್ರತ್ಯಯಗಳ ಮೂಲಕ ವ್ಯಕ್ತಿ, ವಸ್ತು ಮೊದಲಾದವುಗಳ ಸಂಖ್ಯೆಯನ್ನು ಸೂಚಿಸುವಲ್ಲಿ ಕಾಣಿಸುವ ಮುಖ್ಯವಾದ ಕೆಲವು ವ್ಯತ್ಯಾಸಗಳನ್ನು ಕೆಳಗೆ ಕೊಡಲಾಗಿದೆ.

(೧) ಹಳೆಗನ್ನಡದಲ್ಲಿ ಒಂದು ಮತ್ತು ಒಂದಕ್ಕಿಂತ ಹೆಚ್ಚು ಎಂಬುದಾಗಿ ಏಕವಚನ–ಬಹುವಚನ ಭೇದ ಮಾತ್ರ ಕಾಣಿಸುತ್ತದೆಯಾದರೆ, ಸಂಸ್ಕೃತದಲ್ಲಿ ಒಂದು, ಎರಡು ಮತ್ತು ಎರಡಕ್ಕಿಂತ ಹೆಚ್ಚು ಎಂಬುದಾಗಿ ಏಕವಚನ–ದ್ವಿವಚನ–ಬಹುವಚನ ಭೇದ ಕಾಣಿಸುತ್ತದೆ.

**ಹಳೆಗನ್ನಡದ ವಚನ ರೂಪಗಳು**

| | | |
|---|---|---|
| (೫ಕ) | ಒಂದು ಪುಲ್ಲೆ | 'ಒಂದು ಜಿಂಕೆ' |
| (೫ಖ) | ಎರಡು ಪುಲ್ಲೆಗಳ್ | ಎರಡು ಜಿಂಕೆಗಳು' |
| (೫ಗ) | ಮೂಱು ಪುಲ್ಲೆಗಳ್ | 'ಮೂರು ಜಿಂಕೆಗಳು' |

**ಸಂಸ್ಕೃತದ ವಚನ ರೂಪಗಳು**

| | | |
|---|---|---|
| (೬ಕ) | ಏಕಃ ಪುಸ್ತಕಃ | 'ಒಂದು ಪುಸ್ತಕ' |
| (೬ಖ) | ದ್ವೌ ಪುಸ್ತಕೌ | 'ಎರಡು ಪುಸ್ತಕಗಳು' |
| (೬ಗ) | ತ್ರಯಃ ಪುಸ್ತಕಾಃ | 'ಮೂರು ಪುಸ್ತಕಗಳು' |

ಹಳೆಗನ್ನಡದ (೫ಗ)ದಲ್ಲಿ ಮಾತ್ರವಲ್ಲದೆ (೫ಖ)ದಲ್ಲೂ ಪುಲ್ಲೆಗಳ್ ಎಂಬ ಬಹುವಚನ ರೂಪವೇ ಬಂದಿದೆ; ಆದರೆ, ಸಂಸ್ಕೃತದ (೬ಖ)ದಲ್ಲಿ ದ್ವಿವಚನದ ಪುಸ್ತಕೌ ರೂಪವೂ, (೬ಗ)ದಲ್ಲಿ ಬಹುವಚನದ ಪುಸ್ತಕಾಃ ರೂಪವೂ ಬಂದಿವೆ. ಹಳೆಗನ್ನಡದ ನಾಮಪದಗಳಿಗೆ, ಸಂಸ್ಕೃತದ ನಾಮಪದಗಳ ಹಾಗೆ, ಬಹುವಚನಕ್ಕಿಂತ ಭಿನ್ನವಾದ ದ್ವಿವಚನವೆಂಬ ರೂಪವಿಲ್ಲ.

(೨) ಸಂಸ್ಕೃತದಲ್ಲಿ ವಚನ ಮತ್ತು ವಿಭಕ್ತಿ ಇವೆರಡನ್ನೂ ಒಂದೇ ಪ್ರತ್ಯಯ ಸೂಚಿಸುತ್ತದೆ; ಆದರೆ, ಹಳೆಗನ್ನಡದಲ್ಲಿ ಇವೆರಡನ್ನು ಸೂಚಿಸಲು ಬೇರೆ ಬೇರೆ ಪ್ರತ್ಯಯಗಳಿವೆ.

ಉದಾಹರಣೆಗಾಗಿ, ಸಂಸ್ಕೃತದಲ್ಲಿ ನದೀಭಿಃ 'ನದಿಗಳಿಂದ' ಪದರೂಪದಲ್ಲಿ ಬಂದಿರುವ ಭಿಃ ಪ್ರತ್ಯಯ ಬಹುವಚನ ಮತ್ತು ತೃತೀಯಾ ವಿಭಕ್ತಿ ಇವೆರಡನ್ನೂ ಸೂಚಿಸುತ್ತದೆ, ಮತ್ತು ನದೀಷು 'ನದಿಗಳಲ್ಲಿ' ಪದರೂಪದಲ್ಲಿ ಬಂದಿರುವ ಷು ಪ್ರತ್ಯಯ ಬಹುವಚನ ಮತ್ತು ಸಪ್ತಮೀ ವಿಭಕ್ತಿ ಇವೆರಡನ್ನೂ ಸೂಚಿಸುತ್ತದೆ.

ಕನ್ನಡದ ನದಿಗಳಿಂದ ಮತ್ತು ನದಿಗಳಲ್ಲಿ ಎಂಬ ನಾಮಪದರೂಪಗಳಲ್ಲಿ ಕಾಣಿಸುವ ಇಂದ ಮತ್ತು ಅಲ್ಲಿ ವಿಭಕ್ತಿ ಪ್ರತ್ಯಯಗಳನ್ನು ಗಳು ವಚನ ಪ್ರತ್ಯಯದಿಂದ ಪ್ರತ್ಯೇಕಿಸಲು ಸಾಧ್ಯವಿರುವ

ಹಾಗೆ, ಸಂಸ್ಕೃತದ ನದೀಭಿಃ ಮತ್ತು ನದೀಷು ನಾಮಪದರೂಪಗಳಲ್ಲಿ ಕಾಣಿಸುವ ಭಿಃ ಮತ್ತು ಷು ಪ್ರತ್ಯಯಗಳಲ್ಲಿ ವಿಭಕ್ತಿ ಪ್ರತ್ಯಯಗಳನ್ನು ವಚನ ಪ್ರತ್ಯಯದಿಂದ ಪ್ರತ್ಯೇಕಿಸಲು ಸಾಧ್ಯವಾಗದು.

ಹೊಸಗನ್ನಡದ ಹಾಗೆ, ಹಳೆಗನ್ನಡದಲ್ಲೂ ವಚನ ಮತ್ತು ವಿಭಕ್ತಿ ಪ್ರತ್ಯಯಗಳು ಬೇರೆ ಬೇರಾಗಿವೆ. ಉದಾಹರಣೆಗಾಗಿ, ಅರಸರಿಂ ಪದರೂಪದಲ್ಲಿ ಅರ್ ಪ್ರತ್ಯಯ ಬಹುವಚನವನ್ನು ಸೂಚಿಸುತ್ತದೆ, ಮತ್ತು ಅದಕ್ಕಿಂತ ಭಿನ್ನವಾಗಿರುವ ಇಂ ಪ್ರತ್ಯಯ ತೃತೀಯಾ ವಿಭಕ್ತಿಯನ್ನು ಸೂಚಿಸುತ್ತದೆ. ಇದೇ ರೀತಿಯಲ್ಲಿ, ಅರಸರ್ಗೆ ಪದರೂಪದಲ್ಲಿ ಅದೇ ಅರ್ ಪ್ರತ್ಯಯ ಬಹುವಚನವನ್ನು ಸೂಚಿಸುತ್ತದೆ, ಮತ್ತು ಅದಕ್ಕಿಂತ ಭಿನ್ನವಾಗಿರುವ ಗೆ ಪ್ರತ್ಯಯ ಚತುರ್ಥೀ ವಿಭಕ್ತಿಯನ್ನು ಸೂಚಿಸುತ್ತದೆ.

(೩) ಸಂಸ್ಕೃತದಲ್ಲಿ ದ್ವಿವಚನ ಮತ್ತು ಬಹುವಚನಗಳನ್ನು ಮಾತ್ರವಲ್ಲದೆ, ಏಕವಚನವನ್ನು ಸೂಚಿಸುವುದಕ್ಕಾಗಿಯೂ ನಾಮಪದಗಳೊಂದಿಗೆ ಪ್ರತ್ಯಯಗಳನ್ನು ಬಳಸಲಾಗುತ್ತದೆ. ಆ ಭಾಷೆಯಲ್ಲಿ ವಚನ ಮತ್ತು ವಿಭಕ್ತಿಗಳೆರಡನ್ನೂ ಒಂದೇ ಪ್ರತ್ಯಯ ಸೂಚಿಸುತ್ತಿರುವುದೇ ಇದಕ್ಕೆ ಕಾರಣ.

ಉದಾಹರಣೆಗಾಗಿ, ಗಿರಾ 'ಮಾತಿನಿಂದ' ಎಂಬ ನಾಮಪದರೂಪದಲ್ಲಿ ಗಿರ್ ನಾಮಪದಕ್ಕೆ ಏಕವಚನ ಮತ್ತು ತೃತೀಯಾ ವಿಭಕ್ತಿಗಳೆರಡನ್ನೂ ಸೂಚಿಸುವ ಆ ಪ್ರತ್ಯಯವನ್ನು ಸೇರಿಸಲಾಗಿದೆ. ಈ ಪ್ರತ್ಯಯಕ್ಕೂ, ಗೀರ್ಭಿಃ 'ಮಾತುಗಳಿಂದ' ಎಂಬ ರೂಪದಲ್ಲಿ ಬಹುವಚನ ಮತ್ತು ತೃತೀಯಾ ವಿಭಕ್ತಿಗಳನ್ನು ಸೂಚಿಸುವ ಭಿಃ (ಭಿಸ್) ಪ್ರತ್ಯಯಕ್ಕೂ ನಡುವೆ ರೂಪದಲ್ಲಿ ಯಾವ ಸಾಮ್ಯವೂ ಇಲ್ಲ. ಹಾಗಾಗಿ, ಇವುಗಳಲ್ಲಿ ವಚನ ಪ್ರತ್ಯಯವನ್ನು ವಿಭಕ್ತಿ ಪ್ರತ್ಯಯಗಳಿಂದ ಬೇರ್ಪಡಿಸಲು ಸಾಧ್ಯವಾಗದು.

ಹಳೆಗನ್ನಡದಲ್ಲಿ ಬಹುವಚನವನ್ನು ಸೂಚಿಸುವುದಕ್ಕಾಗಿ ಒಂದು ವಿಶಿಷ್ಟವಾದ ಪ್ರತ್ಯಯವಿದೆ; ಆದರೆ, ಏಕವಚನವನ್ನು ಸೂಚಿಸುವುದಕ್ಕಾಗಿ ಪ್ರತ್ಯಯವಿಲ್ಲ. ನಾಮಪದವನ್ನು ಹಾಗೆಯೇ ಬಳಸಿದಾಗಲೆಲ್ಲ ಏಕವಚನದ ಅರ್ಥ ಬರುತ್ತದೆ. ಹಳೆಗನ್ನಡದಲ್ಲಿ ವಚನ ಮತ್ತು ವಿಭಕ್ತಿಗಳನ್ನು ಬೇರೆ ಬೇರೆ ಪ್ರತ್ಯಯಗಳ ಮೂಲಕ ಸೂಚಿಸುತ್ತಿರುವುದೇ ಈ ರೀತಿ ಎರಡು ವಚನಗಳಲ್ಲಿ ಒಂದನ್ನು ಪ್ರತ್ಯಯದ ಸಹಾಯವಿಲ್ಲದೆಯೇ ಸೂಚಿಸಲು ಸಾಧ್ಯವಾಗುತ್ತಿರುವುದಕ್ಕೆ ಕಾರಣ.

ನವಿಲಿನ್ ಮತ್ತು ನವಿಲ್ಗಳಿನ್ ಎಂಬ ತೃತೀಯಾ ವಿಭಕ್ತಿ ರೂಪಗಳನ್ನು ಮೇಲೆ ಕೊಟ್ಟಿರುವ ಸಂಸ್ಕೃತ ಪದಗಳ ರೂಪಗಳೊಂದಿಗೆ ಹೋಲಿಸಿ ನೋಡಿದಾಗ ಈ ವಿಷಯ ಸ್ಪಷ್ಟವಾಗುತ್ತದೆ. ನವಿಲಿನ್ ಎಂಬುದರಲ್ಲಿ ಇನ್ ವಿಭಕ್ತಿ ಪ್ರತ್ಯಯವಿದೆ, ಆದರೆ ವಚನ ಪ್ರತ್ಯಯವಿಲ್ಲ. ನವಿಲ್ಗಳಿನ್ ಎಂಬುದರಲ್ಲಿ ಇನ್ ವಿಭಕ್ತಿ ಪ್ರತ್ಯಯ ಮಾತ್ರವಲ್ಲದೆ ಗಳ್ ವಚನ ಪ್ರತ್ಯಯವೂ ಇದೆ.

(೪) ಹಳೆಗನ್ನಡದಲ್ಲಿ ಕೆಲವು ನಾಮಪದಗಳೊಂದಿಗೆ ಲಿಂಗ–ವಚನಗಳನ್ನು ಸೂಚಿಸುವುದಕ್ಕಾಗಿ ಪ್ರತ್ಯಯವೊಂದನ್ನು ಸೇರಿಸಲಾಗುತ್ತದೆ; ಮಗನ್, ಅಣ್ಣನ್, ಒರ್ವನ್ ಮೊದಲಾದ ಇಂತಹ ಪದರೂಪಗಳು ಮಾತ್ರ ಮೇಲಿನ ನಿಯಮಕ್ಕೆ ಅಪವಾದಗಳಾಗಿರುತ್ತವೆ. ಯಾಕೆಂದರೆ, ಈ ಪದರೂಪಗಳಲ್ಲಿ ಬಳಕೆಯಾಗುವ ಪ್ರತ್ಯಯಗಳು ವಚನ ಮತ್ತು ಲಿಂಗಗಳೆರಡನ್ನೂ ಸೂಚಿಸುತ್ತಿರುವುದೇ ಇದಕ್ಕೆ ಕಾರಣ. ಉದಾಹರಣೆಗಾಗಿ, ಬಡವನ್ ಮತ್ತು ಬಡವಳ್ ಪದಗಳಲ್ಲಿ ಬಂದಿರುವ ಅನ್ ಮತ್ತು ಅಳ್ ಪ್ರತ್ಯಯಗಳು ಪುಂ–ಸ್ತ್ರೀ ಭೇದವನ್ನು ಮಾತ್ರವಲ್ಲದೆ, ಏಕವಚನವನ್ನೂ ಸೂಚಿಸುತ್ತವೆಯೆಂದು ಹೇಳಲು ಸಾಧ್ಯವಿದೆ.

ಆದರೆ, ಇಂತಹ ಸಂದರ್ಭಗಳಲ್ಲೂ ವಚನ ಪ್ರತ್ಯಯ ವಿಭಕ್ತಿ ಪ್ರತ್ಯಯಕ್ಕಿಂತ ಭಿನ್ನವಾಗಿರುತ್ತದೆ. ಅದು ಲಿಂಗದೊಂದಿಗೆ ಸೇರುತ್ತದೆ; ಆದರೆ, ವಿಭಕ್ತಿಗಿಂತ ಭಿನ್ನವಾಗಿ ಉಳಿಯುತ್ತದೆ. ಉದಾಹರಣೆಗಾಗಿ, ಬಡವನ್ಗೆ ಎಂಬುದರಲ್ಲಿ ಅನ್ ಪ್ರತ್ಯಯ ಪುಲ್ಲಿಂಗ ಮತ್ತು ಏಕವಚನಗಳನ್ನು

ಸೂಚಿಸುತ್ತದೆ, ಮತ್ತು ಗೆ ಪ್ರತ್ಯಯ ವಿಭಕ್ತಿಯನ್ನು ಸೂಚಿಸುತ್ತದೆ; ಇದೇ ರೀತಿಯಲ್ಲಿ, ಬಡವಳ್ಗೆ ಎಂಬುದರಲ್ಲಿ ಅಳ್ ಪ್ರತ್ಯಯ ಸ್ತ್ರೀಲಿಂಗ ಮತ್ತು ಏಕವಚನಗಳನ್ನು ಸೂಚಿಸುತ್ತದೆ, ಮತ್ತು ಗೆ ಪ್ರತ್ಯಯ ವಿಭಕ್ತಿಯನ್ನು ಸೂಚಿಸುತ್ತದೆ.

(ಖ) ಹಳೆಗನ್ನಡದಲ್ಲಿ ಲಿಂಗಭೇದವನ್ನು ಸೂಚಿಸುವ ಪ್ರತ್ಯಯಗಳಿರುವ ಪದಗಳು ಬಹುವಚನದಲ್ಲಿ ಪುಂ–ಸ್ತ್ರೀ ಭೇದವನ್ನು ಸೂಚಿಸುವುದಿಲ್ಲ. ಬಡವನ್ ಮತ್ತು ಬಡವಳ್ ಎಂಬವೆರಡಕ್ಕೂ ಬಹುವಚನದಲ್ಲಿ ಬಡವರ್ ಎಂಬ ಒಂದೇ ರೂಪವಿದೆ. ಇವು ಬಹುವಚನದಲ್ಲಿ ಮನುಷ್ಯ–ಮನುಷ್ಯೇತರ ಭೇದವನ್ನಷ್ಟೇ ಸೂಚಿಸಬಲ್ಲುವು.

ಇತರ ನಾಮಪದಗಳ ಬಳಕೆಯಲ್ಲೂ ಬಹುವಚನದಲ್ಲಿ ಪುಂ–ಸ್ತ್ರೀ ಭೇದ ಸೂಚಿತವಾಗುವುದಿಲ್ಲವೆಂದು ಹೇಳಲು ಸಾಧ್ಯವಿದೆ. ಯಾಕೆಂದರೆ, ಅವುಗಳೊಂದಿಗೆ ಬರುವ ಕ್ರಿಯಾರೂಪಗಳಲ್ಲಾಗಲಿ, ಇಲ್ಲವೇ ಅವುಗಳ ಬದಲಿಗೆ ಬರುವ ಸರ್ವನಾಮಗಳಲ್ಲಾಗಲಿ ಪುಂ–ಸ್ತ್ರೀ ಭೇದ ಕಾಣಿಸುವುದಿಲ್ಲ.

(೭ಕ) ಮುನಿ ಬಂದನ್ ಮುನಿಗಳ್ ಬಂದರ್
(೭ಖ) ತಾಯ್ ಬಂದಳ್ ತಾಯ್ಗಳ್ ಬಂದರ್

ಆದರೆ, ಸಂಸ್ಕೃತದ ಲಿಂಗಭೇದ ಈ ರೀತಿ ನಾಮಪದದ ವಚನಭೇದದ ಮೇಲೆ ಅವಲಂಬಿತವಾಗಿರುವುದಿಲ್ಲ. ಉದಾಹರಣೆಗಾಗಿ, ಕಾಂತ ಪದ ಪುಲ್ಲಿಂಗ–ಏಕವಚನದಲ್ಲಿ ಕಾಂತಃ ಎಂಬ ರೂಪದಲ್ಲೂ, ಸ್ತ್ರೀಲಿಂಗ–ಏಕವಚನದಲ್ಲಿ ಕಾಂತಾ ಎಂಬ ರೂಪದಲ್ಲೂ ಬರುತ್ತಿದ್ದು, ದ್ವಿವಚನದಲ್ಲಿ ಕಾಂತೌ (ಪುಲ್ಲಿಂಗ) ಮತ್ತು ಕಾಂತೇ (ಸ್ತ್ರೀಲಿಂಗ) ಎಂಬುದಾಗಿ ರೂಪಭೇದವನ್ನು ತೋರಿಸುತ್ತದೆ.

(೬) ಆದರೆ, ಕೆಳಗೆ ೮.೫ರಲ್ಲಿ ವಿವರಿಸಿರುವ ಹಾಗೆ, ಸಂಸ್ಕೃತದ ನಾಮಪದಗಳಲ್ಲಿ ಕಾಣಿಸುವ ವಿಭಕ್ತಿ–ವಚನರೂಪಗಳು ಹಲವೆಡೆಗಳಲ್ಲಿ ವ್ಯತ್ಯಾಸಗಳನ್ನು ತೋರಿಸದಿರುತ್ತವೆ. ಉದಾಹರಣೆಗಾಗಿ, ಪತಿ ಪದಕ್ಕೆ ತೃತೀಯಾ–ಚತುರ್ಥಿ–ಪಂಚಮಿಗಳಲ್ಲಿ ಪತಿಭ್ಯಾಂ ಎಂಬ ಒಂದೇ ದ್ವಿವಚನದ ರೂಪವಿದೆ. ಇಂತಹ ರೂಪಸಾಮ್ಯ ವಿಭಕ್ತಿಗಳ ನಡುವೆ ಮಾತ್ರವಲ್ಲದೆ ಲಿಂಗ ಮತ್ತು ವಚನಗಳ ನಡುವೆಯೂ ಕಾಣಿಸಿಕೊಳ್ಳುತ್ತದೆ.

ಉದಾಹರಣೆಗಾಗಿ, ಪುಲ್ಲಿಂಗದ ಅಗ್ನಿ ಮತ್ತು ಸ್ತ್ರೀಲಿಂಗದ ಮತಿ ಪದಗಳಿಗೆ ತೃತೀಯಾ–ಏಕವಚನದಲ್ಲಿ ಅಗ್ನಿನಾ ಮತ್ತು ಮತ್ಯಾ ಎಂಬ ರೂಪಗಳಿದ್ದು, ಅವುಗಳಲ್ಲಿ ಕಾಣಿಸುವ ವಿಭಕ್ತಿ–ವಚನ ಪ್ರತ್ಯಯಗಳು ನಾ ಮತ್ತು ಯಾ ಎಂಬ ಬೇರೆ ಬೇರೆ ರೂಪಗಳಲ್ಲಿವೆ; ಆದರೆ, ತೃತೀಯಾ–ದ್ವಿವಚನದಲ್ಲಿ ಇವಕ್ಕೆ ಅಗ್ನಿಭ್ಯಾಂ ಮತ್ತು ಮತಿಭ್ಯಾಂ ಎಂಬ ರೂಪಗಳಿದ್ದು, ಅವುಗಳ ಅನಂತರ ಬರುವ ವಿಭಕ್ತಿ–ವಚನ ಪ್ರತ್ಯಯ ಭ್ಯಾಂ ಎಂಬ ಒಂದೇ ರೂಪದಲ್ಲಿದೆ.

ಸಂಸ್ಕೃತದಲ್ಲಿ ಇಂತಹ ರೂಪಸಾಮ್ಯಗಳನ್ನು ಮೇಲೆ ಕೊಟ್ಟಿರುವ ಸಾಮಾನ್ಯ ನಿಯಮಕ್ಕೆ ಅಪವಾದಗಳೆಂದು ಪರಿಗಣಿಸಲು ಸಾಧ್ಯವಿದೆ; ಆದರೆ, ಹಳೆಗನ್ನಡದಲ್ಲಿ ಪುಂ–ಸ್ತ್ರೀ ಲಿಂಗಭೇದ ಬಹುವಚನದಲ್ಲಿಲ್ಲದಿರುವುದು ಅದರ ವ್ಯಾಕರಣ ನಿಯಮದಲ್ಲೇನೇ ಕಾಣಿಸುವ ಒಂದು ವೈಶಿಷ್ಟ್ಯವಲ್ಲದೆ ಅಪವಾದವಲ್ಲ.

(೭) ವಚನವನ್ನು ಸೂಚಿಸುವ ಪ್ರತ್ಯಯಗಳ ಬಳಕೆಯಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ

ಭಾಷೆಗಳ ನಡುವಿರುವ ಇನ್ನೊಂದು ಮುಖ್ಯವಾದ ವ್ಯತ್ಯಾಸವೇನೆಂದರೆ, ನಪುಂಸಕಲಿಂಗದಲ್ಲಿರುವ ಒಂದು ನಾಮಪದ ಸೂಚಿಸುವ ವಸ್ತು, ವಿಷಯ ಮೊದಲಾದವುಗಳ ಸಂಖ್ಯೆಯನ್ನು ಅದರೊಂದಿಗೆ ಬಂದಿರುವ ಎಣಿಕೆಯ ಪದ ಸೂಚಿಸುತ್ತಿದೆಯಾದರೆ, ಆ ನಾಮಪದದೊಂದಿಗೆ ಹಳೆಗನ್ನಡದಲ್ಲಿ ವಚನ ಪ್ರತ್ಯಯವನ್ನು ಬಳಸದಿರಲೂ ಸಾಧ್ಯವಿದೆ. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ವಾಕ್ಯಗಳನ್ನು ಗಮನಿಸಬಹುದು:

(೮ಕ) ಎರಡು ಅಗಮಂ ಇಳಿಪಂತಾದುದು
‘ಎರಡು ಬೆಟ್ಟಗಳನ್ನು ಇಳಿಸಿದಂತಾಯಿತು’

(೮ಖ) ಪದಿನೆಂಟು ಧರ್ಮಶಾಸ್ತ್ರಂಗಳೊಳಂ ನಾಲ್ಕು ವೇದದೊಳಂ ಆಱುಂಗದೊಳಂ ಅಯ್ದು ತೆಱದ ಮಂತ್ರಂಗಳೊಳಂ ಆಱುಂ ದರ್ಶನದೊಳಂ....
‘ಹದಿನೆಂಟು ಧರ್ಮಶಾಸ್ತ್ರಗಳಲ್ಲಿಯೂ, ನಾಲ್ಕು ವೇದಗಳಲ್ಲಿಯೂ, ಆರು ಅಂಗಗಳಲ್ಲಿಯೂ, ಐದು ರೀತಿಯ ಮಂತ್ರಗಳಲ್ಲಿಯೂ, ಆರು ದರ್ಶನಗಳಲ್ಲಿಯೂ...

(೮ಕ)ದಲ್ಲಿ ಬೆಟ್ಟದ ಸಂಖ್ಯೆಯನ್ನು ಎರಡು ಎಂಬ ಎಣಿಕೆಯ ಪದ ಸೂಚಿಸುವ ಕಾರಣ, ಅಗ ‘ಬೆಟ್ಟ’ ಪದದೊಂದಿಗೆ ಬಹುವಚನ ಪ್ರತ್ಯಯ ಬಳಕೆಯಾಗಿಲ್ಲ.

ಈ ರೀತಿ, ನಪುಂಸಕ ಲಿಂಗದಲ್ಲಿ ವಚನ ಪ್ರತ್ಯಯವನ್ನು ಬಳಸದೆಯೂ ಇರಬಹುದು, ಇಲ್ಲವೇ ಬೇಕಿದ್ದಲ್ಲಿ ಬಳಸಲೂ ಸಾಧ್ಯ ಎಂಬ ವಿಷಯ ಮೇಲೆ (೮ಖ)ದಲ್ಲಿ ಇನ್ನಷ್ಟು ಸ್ಪಷ್ಟವಾಗಿದೆ. ಅಲ್ಲಿ ಕೊಟ್ಟಿರುವ ಐದು ನಾಮಪದಗಳೊಂದಿಗೂ ಎಣಿಕೆಯ ಪದಗಳನ್ನು ಬಳಸಲಾಗಿದೆ, ಮತ್ತು ಈ ಕಾರಣಕ್ಕಾಗಿ, ವೇದ, ಅಂಗ ಮತ್ತು ದರ್ಶನ ಪದಗಳೊಂದಿಗೆ ಬಹುವಚನ ಪ್ರತ್ಯಯವನ್ನು ಬಳಸಿಲ್ಲ; ಆದರೆ ಧರ್ಮಶಾಸ್ತ್ರ ಮತ್ತು ಮಂತ್ರ ಪದಗಳೊಂದಿಗೆ ಎಣಿಕೆಯ ಪದ ಮಾತ್ರವಲ್ಲದೆ ವಚನ ಪ್ರತ್ಯಯವೂ ಬಂದಿದೆ.

ಸಂಸ್ಕೃತದಲ್ಲಿ ವಚನ ಮತ್ತು ವಿಭಕ್ತಿಗಳೆರಡನ್ನೂ ಒಂದೇ ಪ್ರತ್ಯಯ ಸೂಚಿಸುವುದಾದ ಕಾರಣ (೭.೩.೧ (೨) ನೋಡಿ), ಆ ಭಾಷೆಯಲ್ಲಿ ಈ ರೀತಿ ನಾಮಪದಗಳೊಂದಿಗೆ ವಚನ ಪ್ರತ್ಯಯವನ್ನು ಬಳಸದಿರಲು ಸಾಧ್ಯವಾಗದು. ಅವುಗಳೊಂದಿಗೆ ಎಣಿಕೆಯ ಪದಗಳು ಬಂದಿದ್ದರೂ ಬರದಿದ್ದರೂ ಅವುಗಳ ಕೊನೆಯಲ್ಲಿ ಬರುವ ವಿಭಕ್ತಿ ಪ್ರತ್ಯಯ ಸರಿಯಾದ ವಚನದಲ್ಲೇ ಇರಬೇಕು. ಇದಲ್ಲದೆ, ಸಂಸ್ಕೃತದಲ್ಲಿ ಎಣಿಕೆಯ ಪದಗಳೂ ನಾಮಪದಗಳಾಗಿದ್ದು, ಅವು ಸೂಚಿಸುವ ವಚನವನ್ನು ಆ ಪದಗಳ ಕೊನೆಯಲ್ಲಿ ಬರುವ ವಿಭಕ್ತಿ ಪ್ರತ್ಯಯಗಳ ಮೂಲಕವೂ ಸೂಚಿಸಬೇಕಾಗುತ್ತದೆ.

(೯ಕ) ಏಕಃ ವೃಕ್ಷಃ ಅಪತತ್
‘ಒಂದು ಮರ ಬಿತ್ತು’

(೯ಖ) ದ್ವೌ ವೃಕ್ಷೌ ಅಪತತಾಂ
‘ಎರಡು ಮರಗಳು ಬಿದ್ದುವು’

(೯ಗ) ತ್ರೀಣಿ ವೃಕ್ಷಾನಿ ಅಪತನ್
‘ಮೂರು ಮರಗಳು ಬಿದ್ದುವು’

(೯ಕ-ಗ) ವಾಕ್ಯಗಳಲ್ಲಿ ವೃಕ್ಷ ಪದ ಮಾತ್ರವಲ್ಲದೆ, ಅದರೊಂದಿಗೆ ಬಂದಿರುವ ಎಣಿಕೆಯ ಪದಗಳೂ ಆ ಪದದ ವಚನವನ್ನು ಸೂಚಿಸುತ್ತಿವೆ.

## ೭.೩.೨ ಹಳೆಗನ್ನಡ ವೈಯಾಕರಣಿಗಳ ಸಮಸ್ಯೆಗಳು

ಕೇಶಿರಾಜನೇ ಮೊದಲಾದ ಪ್ರಾಚೀನ ವಿದ್ವಾಂಸರು ಸಂಸ್ಕೃತದ ಹಾಗೆ ಹಳೆಗನ್ನಡದಲ್ಲೂ ಮೂರು ವಚನಗಳಿವೆಯೆಂದು ಹೇಳಿರುವುದು ಸಂಸ್ಕೃತದ ವ್ಯಾಕರಣ ನಿಯಮವನ್ನು ಕನ್ನಡಕ್ಕೆ ಹಾಗೆಯೇ ಅನ್ವಯಿಸುವ ಪ್ರಯತ್ನವಲ್ಲದೆ ಬೇರೇನಲ್ಲ. ನಿಜಕ್ಕೂ ದ್ವಿವಚನವನ್ನು ಸೂಚಿಸಲು ಹಳೆಗನ್ನಡದಲ್ಲಿ ಬಹುವಚನದ ಪ್ರತ್ಯಯಕ್ಕಿಂತ ಭಿನ್ನವಾದ ಬೇರೆ ಪ್ರತ್ಯಯವಿಲ್ಲ. ಇದನ್ನು ಗಮನಿಸಿಯೂ (ಕೇಶಿರಾಜ ಸೂ. ೧೦೫ ನೋಡಿ) ಈ ವಿದ್ವಾಂಸರು ಹಳೆಗನ್ನಡದ ಮೇಲೆ ದ್ವಿವಚನವನ್ನು ಹೇರಲು ಪ್ರಯತ್ನಿಸಿದ್ದಾರೆ. ದ್ವಿವಚನಕ್ಕೆ ಉದಾಹರಣೆಗಳಾಗಿ ಕೇಶಿರಾಜನು ಕೊಡುವ ಭೀಮಾರ್ಜುನರ್, ರಾಮಲಕ್ಷ್ಮಣರ್ ಮೊದಲಾದ ಬಳಕೆಗಳಲ್ಲೂ ಬಹುವಚನದ ಅರ್ ಪ್ರತ್ಯಯವೇ ಕಾಣಿಸುತ್ತದೆ.

ಸಂಸ್ಕೃತದಲ್ಲಿ ವಚನ ಮತ್ತು ವಿಭಕ್ತಿಗಳೆರಡನ್ನೂ ಒಂದೇ ಪ್ರತ್ಯಯ ಸೂಚಿಸುತ್ತಿದೆಯಾದ ಕಾರಣ, ಅದಕ್ಕೆ ಕ್ರಿಯಾಪದ ಮತ್ತು ನಾಮಪದಗಳ ನಡುವಿನ ಸಂಬಂಧವನ್ನು ಸೂಚಿಸದಿರುವಂತಹ 'ಪ್ರಥಮಾ' ವಿಭಕ್ತಿ ಪ್ರತ್ಯಯದ ಅವಶ್ಯಕತೆಯಿದೆ (೮.೨ ನೋಡಿ). ಆದರೆ, ಹಳೆಗನ್ನಡದಲ್ಲಿ ವಚನ ಮತ್ತು ವಿಭಕ್ತಿಗಳನ್ನು ಬೇರೆ ಬೇರೆ ಪ್ರತ್ಯಯಗಳು ಸೂಚಿಸುತ್ತಿವೆಯಾದ ಕಾರಣ, ಅದಕ್ಕೆ ಈ ಅವಶ್ಯಕತೆಯಿಲ್ಲ. ಹೀಗಿದ್ದರೂ, ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳು ಪ್ರಥಮೆಯನ್ನು ಸೃಷ್ಟಿಸಿ ಅದಕ್ಕೊಂದು ಪ್ರತ್ಯಯವನ್ನು ಒದಗಿಸಿಕೊಡುವ ಪ್ರಯತ್ನ ನಡೆಸಿದ್ದಾರೆ.

ಉದಾಹರಣೆಗಾಗಿ, ಕೇಶಿರಾಜನ ಮತದಂತೆ, ಅಂ ಎಂಬುದರಲ್ಲಿ ಕೊನೆಗೊಳ್ಳುವ ಪದಗಳನ್ನೆಲ್ಲ ಅಕಾರದಲ್ಲಿ ಕೊನೆಗೊಳ್ಳುವ ಪ್ರಕೃತಿ(ಲಿಂಗ)ಗಳೆಂದು ಪರಿಗಣಿಸಬೇಕು, ಮತ್ತು ಅವುಗಳ ಕೊನೆಯಲ್ಲಿ ಬರುವ ಸೊನ್ನೆಯನ್ನು ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಪರಿಗಣಿಸಬೇಕು (ಸೂ. ೧೦೩).

ಸಂಸ್ಕೃತದಲ್ಲಿ ಅಕಾರದಲ್ಲಿ ಕೊನೆಗೊಳ್ಳುವ ಕಾಂತ, ಶಿವ, ದೇವ, ಅಶ್ವ ಮೊದಲಾದ ನಾಮಪದಗಳಿಗೆ ಏಕವಚನದಲ್ಲಿ ಕಾಣಿಸುವ ವಿಸರ್ಗವನ್ನು ಪ್ರಥಮಾ ವಿಭಕ್ತಿಯೆಂದು ಕರೆಯಲಾಗಿದೆ. ಇದನ್ನೇ ಅನುಸರಿಸಿ, ಕೇಶಿರಾಜನೇ ಮೊದಲಾದವರು ಹಳೆಗನ್ನಡದಲ್ಲೂ ಅಕಾರಾಂತ ಪದಗಳಿಗೆ ಪ್ರಥಮಾ ವಿಭಕ್ತಿ ಪ್ರತ್ಯಯವಾಗಿ ಸೊನ್ನೆ ಸೇರುತ್ತದೆಯೆಂದು ಹೇಳಿರಬೇಕು.

ಆದರೆ, ಇಲ್ಲಿ ತೊಂದರೆಯೇನೆಂದರೆ, ಸಂಸ್ಕೃತದ ವಿಸರ್ಗ ಅಕಾರಾಂತ ಪದಗಳ ಪ್ರಥಮಾ ವಿಭಕ್ತಿರೂಪದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ; ಇತರ ವಿಭಕ್ತಿ ರೂಪಗಳಲ್ಲಿ ಅದು ಕಾಣಿಸುವುದಿಲ್ಲ. ಉದಾಹರಣೆಗಾಗಿ, ಕಾಂತ ಪದಕ್ಕೆ ಪ್ರಥಮಾ ವಿಭಕ್ತಿಯಲ್ಲಿ ಕಾಂತಃ ಎಂಬ ರೂಪವಿದ್ದು ಇದರಲ್ಲಿ ವಿಸರ್ಗ ಬಂದಿದೆ; ಆದರೆ, ಕಾಂತಂ, ಕಾಂತೇನ, ಕಾಂತಾಯ, ಕಾಂತಸ್ಯ ಮೊದಲಾದ ಇತರ ವಿಭಕ್ತಿ ರೂಪಗಳಲ್ಲಿ ಈ ವಿಸರ್ಗ ಕಾಣಿಸುವುದಿಲ್ಲ.

ಹಳೆಗನ್ನಡದ ಸೊನ್ನೆ ಪ್ರಥಮಾ ವಿಭಕ್ತಿಯಲ್ಲಿ ಮಾತ್ರವಲ್ಲದೆ ವ್ಯಂಜನದಲ್ಲಿ ಸುರುವಾಗುವ ಗೆ ವಿಭಕ್ತಿ ಪ್ರತ್ಯಯದೊಂದಿಗೂ (ಪುಲ್ಲಿಂಗ ಮತ್ತು ಸ್ತ್ರೀಲಿಂಗದ ಪದಗಳಲ್ಲಿ) ಕಾಣಿಸಿಕೊಳ್ಳುತ್ತದೆ (ಅರಸಂ–ಅರಸಂಗೆ, ಅಕ್ಕಂ–ಅಕ್ಕಂಗೆ). ಇತರ ಸ್ವರದಲ್ಲಿ ಸುರುವಾಗುವ ವಿಭಕ್ತಿ ಪ್ರತ್ಯಯಗಳೊಂದಿಗೂ ಇದು ನಕಾರ ಇಲ್ಲವೇ ಮಕಾರದ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ (ಅರಸಂ–ಅರಸನನ್, ಅಕ್ಕಂ–ಅಕ್ಕನನ್, ಮರಂ–ಮರನನ್, ಪಳ್ಳಂ–ಪಳ್ಳಮಂ).

ಪ್ರಥಮಾ ವಿಭಕ್ತಿಯಲ್ಲೂ ಈ ಪದಗಳ ಅನಂತರ 'ಮತ್ತು' ಎಂಬರ್ಥವನ್ನು ಕೊಡುವ (ಮತ್ತು ಸ್ವರದಲ್ಲಿ ಸುರುವಾಗುವ) ಉಂ ಪ್ರತ್ಯಯ ಸೇರಿದಾಗ, ಸೊನ್ನೆಯ ಬದಲು ನಕಾರ ಇಲ್ಲವೇ ಮಕಾರ ಕಾಣಿಸಿಕೊಳ್ಳುತ್ತದೆ (ಅರಸಂ–ಅರಸನುಂ, ಅಕ್ಕಂ–ಅಕ್ಕನುಂ, ಪಳ್ಳಂ–ಪಳ್ಳಮುಂ) ಎಂಬುದರಿಂದ ಈ ನಕಾರ ಮತ್ತು ಮಕಾರಗಳು ಸೊನ್ನೆಗೆ ಸಂಬಂಧಿಸಿದುವೆಂಬ ವಿಷಯ ಸ್ಪಷ್ಟವಾಗುತ್ತದೆ.

ಕಿಟ್ಟೆಲ್ (೧೯೦೩:೪೧) ಅವರ ಅಭಿಪ್ರಾಯದಂತೆ ಮರಂ, ಅಣ್ಣಂ ಮೊದಲಾದವುಗಳ ಕೊನೆಯಲ್ಲಿ ಬರುವ ಸೊನ್ನೆ (ಇಲ್ಲವೇ ನ್ ಅಥವಾ ಮ್) ಎಂಬುದನ್ನು ಮಾತ್ರವಲ್ಲದೆ, ಎತ್ತು, ಕೂಸು ಮೊದಲಾದವುಗಳ ಕೊನೆಯಲ್ಲಿ ಬರುವ ಉಕಾರ (ಕಿಟ್ಟೆಲ್ ೧೯೦೩:೫೮), ಪುಲಿ, ಕರಡಿ ಮೊದಲಾದವುಗಳ ಕೊನೆಯಲ್ಲಿ ಬರುವ ಇಕಾರ (ಕಿಟ್ಟೆಲ್ ೧೯೦೩:೬೭) ಇತ್ಯಾದಿಗಳನ್ನೂ ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಪರಿಗಣಿಸಲು ಸಾಧ್ಯವಿದೆ. ಇದೇ ರೀತಿಯಲ್ಲಿ, ಈ ನಾಮಪದಗಳ ಬಹುವಚನ ರೂಪದಲ್ಲಿ ಅವುಗಳ ಜಾಗದಲ್ಲಿ (ಅಥವಾ ಅವುಗಳ ಅನಂತರ) ಬರುವ ಗಳ್, ಂಗಳ್, ಅರ್ ಮೊದಲಾದುವನ್ನೂ ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಪರಿಗಣಿಸಲು ಸಾಧ್ಯವಿದೆ (ಕಿಟ್ಟೆಲ್ ೧೯೦೩:೫೧).

ಕಿಟ್ಟೆಲರ ಈ ಅಭಿಪ್ರಾಯಕ್ಕೆ ಬಹುಶಃ ಸಂಸ್ಕೃತದ ಸಂಬಂಧಿಗಳಾದ ಲ್ಯಾಟಿನ್, ಗ್ರೀಕ್ ಮೊದಲಾದ ಭಾಷೆಗಳಲ್ಲಿ ಬಳಕೆಯಲ್ಲಿರುವ ವ್ಯಾಕರಣ ತತ್ವ ಕಾರಣವಿರಬಹುದು. ಈ ಭಾಷೆಗಳಲ್ಲೂ ಸಂಸ್ಕೃತದ ಹಾಗೆ ವಿಭಕ್ತಿ ಮತ್ತು ವಚನಗಳೆರಡನ್ನೂ ಒಂದೇ ಪ್ರತ್ಯಯ ಸೂಚಿಸುತ್ತದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಲ್ಯಾಟಿನ್ ಭಾಷೆಯ ವಿರ್ 'ಮನುಷ್ಯ' ಮತ್ತು ದೋನುಮ್ 'ದಾನ, ಕೊಡುಗೆ' ಪದಗಳಿಗೆ ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಗಳಲ್ಲಿರುವ ಪದರೂಪಗಳನ್ನು ಗಮನಿಸಬಹುದು:

| ಏಕವಚನ | ಬಹುವಚನ |
|---|---|
| ವಿರುಮ್ 'ಮನುಷ್ಯನನ್ನು' | ವಿರೋಸ್ ಮನುಷ್ಯರನ್ನು' |
| ವಿರೋ 'ಮನುಷ್ಯನಿಗೆ' | ವಿರೀಸ್ 'ಮನುಷ್ಯರಿಗೆ' |
| ದೋನುಮ್ 'ದಾನವನ್ನು' | ದೋನ 'ದಾನಗಳನ್ನು' |
| ದೋನೋ 'ದಾನಕ್ಕೆ' | ದೋನೀಸ್ 'ದಾನಗಳಿಗೆ' |

ವಿರ್ 'ಮನುಷ್ಯ' ಪದದ ಅನಂತರ ಏಕವಚನದಲ್ಲಿ ಬರುವ ದ್ವಿತೀಯಾ ವಿಭಕ್ತಿಯ ಉಮ್ ಪ್ರತ್ಯಯಕ್ಕೂ, ಬಹುವಚನದಲ್ಲಿ ಬರುವ ಅದೇ ವಿಭಕ್ತಿಯ ಓಸ್ ಪ್ರತ್ಯಯಕ್ಕೂ ನಡುವೆ ಯಾವ ಸಾಮ್ಯವೂ ಇಲ್ಲ. ಹಾಗಾಗಿ, ಈ ಪದರೂಪಗಳಲ್ಲಿ ವಿಭಕ್ತಿ ಪ್ರತ್ಯಯವನ್ನು ವಚನ ಪ್ರತ್ಯಯದಿಂದ ಪ್ರತ್ಯೇಕಿಸಲು ಸಾಧ್ಯವಾಗದು. ಮೇಲೆ ಕೊಟ್ಟಿರುವ ಇತರ ಪದರೂಪಗಳಲ್ಲೂ ಹೀಗೆಯೇ.

ಲ್ಯಾಟಿನ್ ಮತ್ತು ಸಂಸ್ಕೃತಗಳೆರಡಕ್ಕೂ ಇಂಡೋ–ಯುರೋಪಿಯನ್ ಎಂಬ ಒಂದೇ ಮೂಲವಿರುವುದೇ ಈ ರೀತಿ ಅವೆರಡೂ ವಿಭಕ್ತಿ ಮತ್ತು ವಚನಗಳನ್ನು ಒಂದೇ ರೀತಿಯಲ್ಲಿ (ಒಂದೇ ಪ್ರತ್ಯಯದ ಮೂಲಕ) ಸೂಚಿಸುತ್ತಿರಲು ಕಾರಣ. ಹಳೆಗನ್ನಡಕ್ಕೆ ಇಂಡೋ–

ಯುರೋಪಿಯನ್‌ಗಿಂತ ತೀರ ಭಿನ್ನವಾಗಿರುವ ದ್ರಾವಿಡ ಮೂಲವಿದೆಯಾದ ಕಾರಣ, ಅದರಲ್ಲಿ ವಿಭಕ್ತಿ ಮತ್ತು ವಚನಗಳನ್ನು ಸೂಚಿಸಲು ಇದಕ್ಕಿಂತ ತೀರ ಭಿನ್ನವಾದ, ಎರಡು ಬೇರೆ ಬೇರೆ ಪ್ರತ್ಯಯಗಳನ್ನು ಬಳಸುವ ವಿಧಾನ ಬಳಕೆಯಲ್ಲಿದೆ.

**೭.೪ ಸಾರಾಂಶ**

ಹಳೆಗನ್ನಡ ನಾಮಪದಗಳ ಲಿಂಗಭೇದ ನೇರವಾಗಿ ಅವುಗಳ ಅರ್ಥದ ಮೇಲೆ ಅವಲಂಬಿಸಿದೆ. ಆದರೆ, ಸಂಸ್ಕೃತ ನಾಮಪದಗಳ ಲಿಂಗಭೇದ ಅರ್ಥಕ್ಕಿಂತಲೂ ರೂಢಿಯಲ್ಲಿ ಈ ನಾಮಪದಗಳಿಗೆ ಎಂತಹ ಬಳಕೆಯಿದೆ ಎಂಬುದನ್ನವಲಂಬಿಸಿದೆ. ಇಂತಹ ಬಳಕೆಗಳಿಗೆ ನಾಮಪದಗಳ ಚರಿತ್ರೆಯಲ್ಲಿ ಮೂಲವನ್ನು ಹುಡುಕಲು ಸಾಧ್ಯವಿದೆಯಾದರೂ, ಸಂಸ್ಕೃತದ ವ್ಯಾಕರಣದಲ್ಲಿ ಅವನ್ನು ವಿವರಿಸುವಂತಹ ನಿಯಮಗಳನ್ನು ಅರ್ಥದ ಆಧಾರದ ಮೇಲೆ ತಯಾರಿಸಲು ಸಾಧ್ಯವಾಗುವುದಿಲ್ಲ.

ಹಳೆಗನ್ನಡದಲ್ಲಿ ವಚನಭೇದವನ್ನು ಸೂಚಿಸುವ ಪ್ರತ್ಯಯ ವಿಭಕ್ತಿಗಳನ್ನು ಸೂಚಿಸುವ ಪ್ರತ್ಯಯಕ್ಕಿಂತ ಭಿನ್ನವಾದುದು. ಆದರೆ, ಸಂಸ್ಕೃತದಲ್ಲಿ ಇವೆರಡನ್ನೂ ಒಂದೇ ಪ್ರತ್ಯಯ ಸೂಚಿಸುತ್ತದೆ. ಈ ಕಾರಣಕ್ಕಾಗಿ, ಹಳೆಗನ್ನಡದಲ್ಲಿ ವಚನ ಮತ್ತು ವಿಭಕ್ತಿ ಪ್ರತ್ಯಯಗಳನ್ನು ಅವಶ್ಯವಿರುವಲ್ಲಿ ಮಾತ್ರ ಬಳಸಿದರೆ ಸಾಕು. ಆದರೆ, ಸಂಸ್ಕೃತದಲ್ಲಿ ವಿಭಕ್ತಿ–ವಚನ ಪ್ರತ್ಯಯಗಳನ್ನು ಎಲ್ಲಾ ಸಂದರ್ಭಗಳಲ್ಲೂ (ಅವಶ್ಯವಿರುವಲ್ಲೂ ಮತ್ತು ಇಲ್ಲದಲ್ಲೂ) ನಾಮಪದಗಳನ್ನು ಬಳಸುವಾಗಲೆಲ್ಲ ಬಳಸಬೇಕಾಗುತ್ತದೆ.

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಲಿಂಗ ಮತ್ತು ವಚನಗಳನ್ನು ಸೂಚಿಸುವಲ್ಲಿ ಕಂಡುಬರುವ ಈ ಮೂಲಭೂತವಾದ ವ್ಯತ್ಯಾಸಗಳನ್ನು ಗಮನಿಸದುದರಿಂದಾಗಿ, ಹಳೆಗನ್ನಡದ ವೈಯಾಕರಣಿಗಳು ಅನವಶ್ಯಕವಾಗಿ ಹಲವಾರು ಗೊಂದಲಗಳಿಗೆಡೆಯಾಗಿದ್ದಾರೆ.

ಅಧ್ಯಾಯ ಎಂಟು

# ವಿಭಕ್ತಿಗಳು ಮತ್ತು ಕಾರಕಗಳು

## ೮.೧ ಪೀಠಿಕೆ

ಒಂದು ವಾಕ್ಯವು ತಿಳಿಸುವ ಘಟನೆ ಇಲ್ಲವೇ ಸಂಗತಿಯಲ್ಲಿ ನಾಮಪದಗಳು ಸೂಚಿಸುವ ವ್ಯಕ್ತಿ, ವಸ್ತು ಮೊದಲಾದವುಗಳು ಯಾವ ರೀತಿಯಲ್ಲಿ ತೊಡಗಿಕೊಂಡಿವೆ ಎಂಬುದನ್ನು ಆ ನಾಮಪದಗಳೊಂದಿಗೆ ಬರುವ ವಿಭಕ್ತಿ ಪ್ರತ್ಯಯಗಳು ಸೂಚಿಸುತ್ತವೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಹಳೆಗನ್ನಡ ವಾಕ್ಯಗಳನ್ನು ಪರಿಶೀಲಿಸಬಹುದು:

(೧ಕ) ಅರಸನ್ ಪಾರ್ವಂಗೆ ತುರುಗಳನ್ ಕೊಟ್ಟನ್
‘ರಾಜ ಬ್ರಾಹ್ಮಣನಿಗೆ ದನಗಳನ್ನು ಕೊಟ್ಟ’

(೧ಖ) ಅರಗಿನ ಮನೆಯೊಳ್ ಪಾಂಡವರ್ ಅಳ್ಗಿದರ್
‘ಪಾಂಡವರು ಅರಗಿನ ಮನೆಯಲ್ಲಿ ನಾಶವಾದರು’

(೧ಕ) ವಾಕ್ಯದಲ್ಲಿ ಪಾರ್ವಂ ಪದದ ಅನಂತರ ಬಂದಿರುವ ಗೆ ವಿಭಕ್ತಿ ಪ್ರತ್ಯಯ ಆ ವಾಕ್ಯವು ತಿಳಿಸುವ ಕೊಡುವಿಕೆ ಎಂಬ ಘಟನೆಯಲ್ಲಿ ಬ್ರಾಹ್ಮಣನು (ಪಾರ್ವಂ) ಅರಸನು ಕೊಟ್ಟುದನ್ನು ಪಡೆಯುವವನೆಂಬುದನ್ನೂ, ತುರುಗಳ್ ಪದದ ಅನಂತರ ಬಂದಿರುವ ಅನ್ ವಿಭಕ್ತಿ ಪ್ರತ್ಯಯ ಆ ಘಟನೆಯಲ್ಲಿ ದನಗಳು (ತುರುಗಳ್) ಅರಸನು ಕೊಟ್ಟ ವಸ್ತುಗಳೆಂದೂ ತಿಳಿಸುತ್ತವೆ.

ಇದೇ ರೀತಿಯಲ್ಲಿ, (೧ಖ) ವಾಕ್ಯದ ಅರಗಿನ ಮನೆ ಪದಕಂತೆಯ ಕೊನೆಯಲ್ಲಿ ಬಂದಿರುವ ಒಳ್ ಪ್ರತ್ಯಯ ಪಾಂಡವರು ನಾಶವಾಗಿರುವರೆನ್ನಲಾದ ಘಟನೆಯ ಜಾಗ ಅರಗಿನ ಮನೆ ಎಂಬುದನ್ನು ಸೂಚಿಸುತ್ತದೆ.

ಇಂತಹ ವಿಭಕ್ತಿ ಪ್ರತ್ಯಯಗಳ ಬಳಕೆಯಲ್ಲಿ, ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಹಲವು ಮುಖ್ಯವಾದ ವ್ಯತ್ಯಾಸಗಳಿವೆ. ಇವುಗಳಲ್ಲಿ ಕೆಲವನ್ನು ಕೆಳಗೆ ಕೊಡಲಾಗಿದೆ:

## ೮.೨ ವಿಭಕ್ತಿ ಪ್ರತ್ಯಯವನ್ನು ಬಳಸದಿರುವುದು

ಮೇಲೆ (೭.೩.೧)ರಲ್ಲಿ ಸೂಚಿಸಿದ ಹಾಗೆ, ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯಗಳು ವಿಭಕ್ತಿಭೇದವನ್ನು ಮಾತ್ರವಲ್ಲದೆ ವಚನಭೇದವನ್ನೂ ಸೂಚಿಸುತ್ತವೆ. ಉದಾಹರಣೆಗಾಗಿ, ಸಂಸ್ಕೃತದ ಗೋಷು ‘ದನಗಳಲ್ಲಿ’ ಪದರೂಪದಲ್ಲಿರುವ ಷು ಪ್ರತ್ಯಯ ಸಪ್ತಮೀ ವಿಭಕ್ತಿಯನ್ನು ಮಾತ್ರವಲ್ಲದೆ ಬಹುವಚನವನ್ನೂ ಸೂಚಿಸುತ್ತದೆ.

ಹಾಗಾಗಿ, ವಿಭಕ್ತಿಯನ್ನು ಸೂಚಿಸುವ ಅವಶ್ಯಕತೆಯಿಲ್ಲದಂತಹ ಸಂದರ್ಭಗಳಲ್ಲೂ ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯವನ್ನು ಬಳಸಬೇಕಾಗುತ್ತದೆ. ಇದಕ್ಕೆ ಕಾರಣವೇನೆಂದರೆ, ಇಂತಹ

ಸಂದರ್ಭಗಳಲ್ಲೂ ವಚನವನ್ನು ಸೂಚಿಸಬೇಕಾಗುತ್ತದೆ, ಮತ್ತು ಇದಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಬಳಸುವುದಲ್ಲದೆ ಬೇರೆ ದಾರಿಯಿಲ್ಲ (ಕೆಳಗೆ ಕೊಟ್ಟಿರುವ (೩ಕ–ಖ) ವಾಕ್ಯಗಳನ್ನು ನೋಡಿ).

ಇದರಿಂದಾಗಿ, ವಾಕ್ಯದಲ್ಲಿ ಯಾವ ನಾಮಪದವನ್ನು ಬಳಸುವುದಿದ್ದರೂ ಅದಕ್ಕೆ ಯಾವುದಾದರೂ ಒಂದು ವಿಭಕ್ತಿ ಪ್ರತ್ಯಯವನ್ನು ಸೇರಿಸಿಯೇ ಬಳಸಬೇಕೆಂಬ ನಿಯಮವನ್ನು ಆ ಭಾಷೆಯ (ಸಂಸ್ಕೃತದ) ವ್ಯಾಕರಣದಲ್ಲಿ ರಚಿಸಬೇಕಾಗಿದೆ.

ಆದರೆ, ಹಳೆಗನ್ನಡದಲ್ಲಿ ವಿಭಕ್ತಿ ಪ್ರತ್ಯಯಗಳು ವಚನ ಪ್ರತ್ಯಯಕ್ಕಿಂತ ಭಿನ್ನವಾಗಿದ್ದು ವಿಭಕ್ತಿ ಭೇದವನ್ನು ಮಾತ್ರ ಸೂಚಿಸುತ್ತವೆ. ಉದಾಹರಣೆಗಾಗಿ, ಹಳೆಗನ್ನಡದ ಮುಗಿಲ್ಗಳಿನ್ ಪದರೂಪದಲ್ಲಿ ವಚನವನ್ನು ಗಳ್ ಪ್ರತ್ಯಯ ಸೂಚಿಸುತ್ತದೆಯಾದರೆ, ವಿಭಕ್ತಿಯನ್ನು ಅದರ ಅನಂತರ ಬರುವ ಇನ್ ಪ್ರತ್ಯಯ ಸೂಚಿಸುತ್ತದೆ. ಸಂಸ್ಕೃತದ ಹಾಗೆ ಇವೆರಡನ್ನೂ ಒಂದೇ ಪ್ರತ್ಯಯ ಸೂಚಿಸುವ ಬದಲು, ಬೇರೆ ಬೇರೆ ಪ್ರತ್ಯಯಗಳು ಸೂಚಿಸುತ್ತವೆ.

ಈ ರೀತಿ, ಹಳೆಗನ್ನಡದಲ್ಲಿ ವಿಭಕ್ತಿ ಮತ್ತು ವಚನಗಳನ್ನು ಸೂಚಿಸುವುದಕ್ಕಾಗಿ ಬೇರೆ ಬೇರೆ ಪ್ರತ್ಯಯಗಳಿರುವ ಕಾರಣ, ವಚನ ಪ್ರತ್ಯಯದ ಹಾಗೆ (೭.೩.೧ ನೋಡಿ) ವಿಭಕ್ತಿ ಪ್ರತ್ಯಯವನ್ನೂ ಅವಶ್ಯವಿದ್ದಲ್ಲಿ ಮಾತ್ರ ಬಳಸುವ ಸಾಧ್ಯತೆ ಹಳೆಗನ್ನಡದಲ್ಲಿದೆ. ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧ ಎಂತಹದು ಎಂಬ ವಿಷಯ ಸ್ಪಷ್ಟವಾಗಿರುವ ಸಂದರ್ಭಗಳಲ್ಲಿ ವಿಭಕ್ತಿ ಪ್ರತ್ಯಯವನ್ನು ಬಳಸದೆಯೇ ಇರಲೂ ಹಳೆಗನ್ನಡದಲ್ಲಿ ಸಾಧ್ಯ; ಆದರೆ, ಸಂಸ್ಕೃತದಲ್ಲಿ ಇದು ಅಸಾಧ್ಯ.

ಉದಾಹರಣೆಗಾಗಿ, ಹಳೆಗನ್ನಡದ ವಾಕ್ಯವೊಂದರಲ್ಲಿ ಕ್ರಿಯಾಪದದೊಂದಿಗೆ ಒಂದು ನಾಮಪದ ಮಾತ್ರ ಬಂದಿದೆಯಾದರೆ, ಅದಕ್ಕೂ ಕ್ರಿಯಾಪದಕ್ಕೂ ನಡುವೆ ಎಂತಹ ಸಂಬಂಧವಿದೆಯೆಂಬುದು ಆ ಕ್ರಿಯಾಪದದ ಸ್ವರೂಪದಿಂದಲೇ ಸ್ಪಷ್ಟವಾಗಬಲ್ಲುದು, ಮತ್ತು ಇಂತಹ ಸಂದರ್ಭಗಳಲ್ಲಿ ಆ ನಾಮಪದದೊಂದಿಗೆ ವಿಭಕ್ತಿ ಪ್ರತ್ಯಯವನ್ನು ಬಳಸದಿರಲು ಸಾಧ್ಯವಿದೆ.

(೨ಕ) ನಲ್ಲಳ್ ನಸುನಕ್ಕಳ್
(೨ಖ) ಮಕ್ಕಳ್ ಪಾಡಿದರ್
(೨ಗ) ಅರಸನ್ ಬಂದನ್

(೨ಕ–ಗ) ವಾಕ್ಯಗಳಲ್ಲಿ ಒಂದೊಂದೇ ನಾಮಪದ ಬಂದಿದ್ದು, ಅವಕ್ಕೂ ಕ್ರಿಯಾಪದಕ್ಕೂ ನಡುವಿರುವ ಸಂಬಂಧವೇನೆಂಬುದನ್ನು ತಿಳಿಯುವಲ್ಲಿ ಯಾವ ಸಮಸ್ಯೆಯೂ ಇಲ್ಲ. (೨ಕ)ದಲ್ಲಿ ನಕ್ಕವಳು ನಲ್ಲಳು, (೨ಖ)ದಲ್ಲಿ ಹಾಡಿದವರು ಮಕ್ಕಳು, ಮತ್ತು (೨ಗ)ದಲ್ಲಿ ಬಂದವನು ಅರಸನು ಎಂಬುದಾಗಿ ಈ ಸಂಬಂಧವನ್ನು ಯಾವ ಪ್ರತ್ಯಯದ ಸಹಾಯವೂ ಇಲ್ಲದೆ ತಿಳಿದುಕೊಳ್ಳಲು ಬರುತ್ತದೆ. ಹಾಗಾಗಿ, ಈ ನಾಮಪದಗಳೊಂದಿಗೆ ಯಾವ ವಿಭಕ್ತಿ ಪ್ರತ್ಯಯವನ್ನೂ ಬಳಸದಿರಲು ಹಳೆಗನ್ನಡದಲ್ಲಿ ಸಾಧ್ಯವಾಗಿದೆ.

ಆದರೆ, ಸಂಸ್ಕೃತ ವಾಕ್ಯಗಳಲ್ಲಿ ಈ ರೀತಿ ವಿಭಕ್ತಿ ಪ್ರತ್ಯಯಗಳನ್ನು ಸೇರಿಸದೆ ನಾಮಪದಗಳನ್ನು ಬಳಸಲು ಸಾಧ್ಯವಾಗದು. ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧವನ್ನು ಸೂಚಿಸುವ ಅವಶ್ಯಕತೆಯಿಲ್ಲದ ಸಂದರ್ಭಗಳಲ್ಲೂ ವಚನಭೇದವನ್ನು ಸೂಚಿಸಬೇಕಾಗುವುದಾದ ಕಾರಣ, ಅಂತಹ ಸಂದರ್ಭಗಳಲ್ಲಿ ಸಂಸ್ಕೃತದ ನಾಮಪದಗಳೊಂದಿಗೆ 'ಪ್ರಥಮಾ ವಿಭಕ್ತಿ' ಪ್ರತ್ಯಯವನ್ನು ಬಳಸಬೇಕಾಗುತ್ತದೆ. ಈ ಪ್ರತ್ಯಯಕ್ಕೆ ನಾಮಪದಗಳ ವಚನವನ್ನು ತಿಳಿಸುವ ಕೆಲಸ ಮಾತ್ರ ಇದೆ.

(೩ಕ) ನದ್ಯಃ ಸ್ರವಂತಿ
'ನದಿಗಳು ಹರಿಯುತ್ತವೆ'
(೩ಖ) ಮಾಣವಕಃ ಗಚ್ಛತಿ
'ಹುಡುಗ ಹೋಗುತ್ತಾನೆ'

(೩ಕ)ದಲ್ಲಿ ನದಿಗೂ ಹರಿಯುವಿಕೆಗೂ ನಡುವೆ ಎಂತಹ ಸಂಬಂಧವಿದೆ ಎಂಬುದನ್ನು ತಿಳಿಸುವ ಅವಶ್ಯಕತೆಯಿಲ್ಲ; ಹರಿಯುವ ಕ್ರಿಯೆಯನ್ನು ನದಿ ನಡೆಸುತ್ತದೆ ಎಂಬುದು ಇಲ್ಲಿ ಸ್ಪಷ್ಟವಾಗಿದೆ. (ಸಂಸ್ಕೃತದ ವೈಯಾಕರಣಿಗಳ ಅಭಿಪ್ರಾಯದಂತೆ ಈ ವಿಷಯವನ್ನು ಕ್ರಿಯಾಪದದ ಕೊನೆಯಲ್ಲಿ ಬರುವ ತಿಙ್ ಪ್ರತ್ಯಯವೇ ತಿಳಿಸುತ್ತದೆ).

ಹೀಗಿದ್ದರೂ, ಇಲ್ಲಿ ಹಲವು ನದಿಗಳು ಈ ಕ್ರಿಯೆಯನ್ನು ನಡೆಸುತ್ತವೆ ಎಂಬುದಾಗಿ ಬಹುವಚನವನ್ನು ಸೂಚಿಸುವ ಅವಶ್ಯಕತೆಯಿದೆಯಾದ ಕಾರಣ, ಮತ್ತು ಸಂಸ್ಕೃತದಲ್ಲಿ ವಚನ ಮತ್ತು ವಿಭಕ್ತಿಗಳನ್ನು ಒಂದೇ ಪ್ರತ್ಯಯ ಸೂಚಿಸುತ್ತಿದೆಯಾದ ಕಾರಣ, ನದೀ ಪದದ ಅನಂತರ ಅಃ (ಅಸ್) ಪ್ರಥಮಾ ಬಹುವಚನ ಪ್ರತ್ಯಯವನ್ನು ಬಳಸಬೇಕಾಗಿದೆ.

ಇದೇ ರೀತಿಯಲ್ಲಿ, (೩ಖ)ದಲ್ಲಿ ಹೋಗುವವನು ಹುಡುಗ ಎಂಬ ವಿಷಯ ಸ್ಪಷ್ಟವಾಗಿದೆಯಾದರೂ, ಆತ ಒಬ್ಬನೇ ಎಂಬುದನ್ನು ಸೂಚಿಸಬೇಕಾಗಿದೆಯಾದ ಕಾರಣ, ಮಾಣವಕ ಪದದ ಅನಂತರ ಃ (ಸ್) ಪ್ರಥಮಾ ಏಕವಚನ ಪ್ರತ್ಯಯವನ್ನು ಬಳಸಬೇಕಾಗಿದೆ.

ಕ್ರಿಯಾಪದದೊಂದಿಗೆ ಎರಡು ನಾಮಪದಗಳು ಬಂದಿರುವಾಗಲೂ ಆ ನಾಮಪದಗಳಲ್ಲಿ ಒಂದು ವ್ಯಕ್ತಿ ಇಲ್ಲವೇ ಪ್ರಾಣಿಯನ್ನು ಸೂಚಿಸುತ್ತಿದ್ದು, ಇನ್ನೊಂದು ವಸ್ತು ಇಲ್ಲವೇ ವಿಷಯವನ್ನು ಸೂಚಿಸುತ್ತಿದೆಯಾದರೆ, ಅಂತಹ ಸಂದರ್ಭದಲ್ಲೂ ಹಳೆಗನ್ನಡದಲ್ಲಿ ನಾಮಪದ ಮತ್ತು ಕ್ರಿಯಾಪದಗಳ ನಡುವಿನ ಸಂಬಂಧವೇನು ಎಂಬುದನ್ನು ವಿಭಕ್ತಿ ಪ್ರತ್ಯಯಗಳ ಮೂಲಕ ತಿಳಿಸುವ ಅವಶ್ಯಕತೆ ಇಲ್ಲ. ಯಾಕೆಂದರೆ, ಅಂತಹ ಸಂದರ್ಭಗಳಲ್ಲಿ ಕ್ರಿಯಾಪದವು ಸೂಚಿಸುವಂತಹ ಘಟನೆಯನ್ನು ನಡೆಸುವ ಕೆಲಸವನ್ನು ವ್ಯಕ್ತಿ ಇಲ್ಲವೇ ಪ್ರಾಣಿ ಮಾತ್ರ ಮಾಡಲು ಸಾಧ್ಯವಲ್ಲದೆ ವಸ್ತು ಇಲ್ಲವೇ ವಿಷಯ ಮಾಡಲು ಸಾಧ್ಯವಿಲ್ಲ.

ಹಾಗಾಗಿ, ಅಂತಹ ಸಂದರ್ಭಗಳಲ್ಲಿ ಘಟನೆಯಿಂದ ಬಾಧಿತವಾಗುವ ವ್ಯಕ್ತಿ ಇಲ್ಲವೇ ವಸ್ತುವನ್ನು ಸೂಚಿಸುವ ಅನ್ ಪ್ರತ್ಯಯವನ್ನು ಬಳಸದಿರಲು ಬರುತ್ತದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಪಂಪಭಾರತದ ಬಳಕೆಗಳನ್ನು ಗಮನಿಸಬಹುದು:

(೪ಕ) ಆತನ ಬರವಿಂಗೆ ಬದ್ಧವಣಂ ಬಾಜಿಪಂತೆ (೨.೧೨ವ)
'ಆತನ ಬರುವಿಕೆಗೆ ಮಂಗಳ ವಾದ್ಯವನ್ನು ಬಾರಿಸುವ ಹಾಗೆ'
(೪ಖ) ಮನಮಿಕ್ಕಿಯುಂ ಎರ್ದೆಯಿಕ್ಕಿಯುಮ್ ಕಿಡುವರ್ (೨.೨೮ವ)
'ಉತ್ಸಾಹಶೂನ್ಯರಾಗಿಯೂ ಅಧೈರ್ಯರಾಗಿಯೂ ಕೆಟ್ಟುಹೋಗುತ್ತಾರೆ'

(೪ಕ)ದಲ್ಲಿ ಬದ್ಧವಣ ಪದದೊಂದಿಗೆ ಅದಕ್ಕೂ ಕ್ರಿಯಾಪದಕ್ಕೂ ನಡುವಿರುವ ಸಂಬಂಧವನ್ನು ಸೂಚಿಸುವುದಕ್ಕಾಗಿ ಬರಬೇಕಾಗಿದ್ದ ಅನ್ ಪ್ರತ್ಯಯದ ಬಳಕೆಯಾಗಿಲ್ಲ. ಇದೇ ರೀತಿಯಲ್ಲಿ, (೪ಖ)ದಲ್ಲಿ ಮನಂ ಮತ್ತು ಎರ್ದೆ ಪದಗಳೊಂದಿಗೂ ಅನ್ ಪ್ರತ್ಯಯ ಬಂದಿಲ್ಲ.

ಆದರೆ, ಸಂಸ್ಕೃತದಲ್ಲಿ ಈ ರೀತಿ ನಾಮಪದದೊಂದಿಗೆ ದ್ವಿತೀಯಾ ವಿಭಕ್ತಿಯನ್ನು ಬಳಸದಿರಲು ಸಾಧ್ಯವಾಗದು. ಅದು ವಿಭಕ್ತಿಯೊಂದಿಗೆ ವಚನವನ್ನೂ ಸೂಚಿಸುತ್ತಿರುವುದೇ ಇದಕ್ಕೆ ಕಾರಣ.

**೮.೩ ವಿಭಕ್ತಿ ಪ್ರತ್ಯಯಗಳ ಸಂಖ್ಯೆ**

ಹಳೆಗನ್ನಡದಲ್ಲಿ ನಾಮಪದಗಳೊಂದಿಗೆ ಬಳಸಲು ಒಟ್ಟು ನಾಲ್ಕು ವಿಭಕ್ತಿ ಪ್ರತ್ಯಯಗಳು ಮಾತ್ರ ಬಳಕೆಯಲ್ಲಿವೆ.

(೧) ಘಟನೆಯೊಂದರಿಂದ ಬಾಧಿತವಾಗುವ ವ್ಯಕ್ತಿ, ವಸ್ತು ವೊದಲಾದುವನ್ನು ಸೂಚಿಸುವುದಕ್ಕಾಗಿ ಬಳಕೆಯಾಗುವ ಅನ್ (ಅಂ) ಪ್ರತ್ಯಯ ಇವುಗಳಲ್ಲಿ ವೊದಲನೆಯದು.

(೫ಕ) ಆ ತಪೋವೃದ್ಧರ್ ಕಾಂತೆಯನ್ ಸಂತೈಸಿದರ್
'ಆ ತಪೋವೃದ್ಧರು ಕಾಂತೆಯನ್ನು ಸಂತೈಸಿದರು'

(೫ಖ) ಮುಂ ಪೊಡೆವೆಂ ಕೂಳಂ ಬೞಿಯಂ ಪೊಡೆವೆಂ ರಕ್ಕಸನನ್
'ವೊದಲು ಅನ್ನವನ್ನು ಹೊಡೆಯುತ್ತೇನೆ (ತಿನ್ನುತ್ತೇನೆ), ಅನಂತರ ರಾಕ್ಷಸನನ್ನು ಹೊಡೆಯುತ್ತೇನೆ'

(೫ಕ)ದಲ್ಲಿ ಸಂತೈಸುವ ಘಟನೆಯಿಂದ ಬಾಧಿತವಾಗುವ ಕಾಂತೆಯನ್ನು ಮತ್ತು (೫ಖ)ದಲ್ಲಿ ಹೊಡೆಯುವ (ತಿನ್ನುವ) ಘಟನೆಯಿಂದ ಬಾಧಿತವಾಗುವ ಅನ್ನವನ್ನು (ಮತ್ತು ರಾಕ್ಷಸನನ್ನು) ಸೂಚಿಸುವುದಕ್ಕಾಗಿ ಅನ್ ಪ್ರತ್ಯಯದ ಬಳಕೆಯಾಗಿದೆ.

(೨) ಘಟನೆಯ ಜಾಗವನ್ನು ಸೂಚಿಸುವ ಒಳ್ ಪ್ರತ್ಯಯ ಎರಡನೆಯದು. ಇದರ ಬಳಕೆಯನ್ನು ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು.

(೬ಕ) ಅರಗಿನ ಮನೆಯೊಳ್ ಪಾಂಡವರ್ ಉರಿದು ಅೞ್ಗಿದರ್
'ಅರಗಿನ ಮನೆಯಲ್ಲಿ ಪಾಂಡವರು ಉರಿದು ನಾಶವಾದರು'

(೬ಖ) ಅಡವಿಯೊಳ್ ಎನ್ನುಮನ್ ಎನ್ನ ಶಿಶುಗಳುಮನ್ ಇರಿಸಿ...
'ಕಾಡಿನಲ್ಲಿ ನನ್ನನ್ನೂ ನನ್ನ ಶಿಶುಗಳನ್ನೂ ಇರಿಸಿ'

(೬ಕ)ದಲ್ಲಿ ಪಾಂಡವರು ಉರಿದು ನಾಶವಾಗಿರುವ ಜಾಗವನ್ನು ಸೂಚಿಸುವುದಕ್ಕಾಗಿ ಮನೆ ಪದದೊಂದಿಗೆ ಒಳ್ ಪ್ರತ್ಯಯ ಬಂದಿದೆ; ಮತ್ತು (೬ಖ)ದಲ್ಲಿ ಕುಂತಿ ತನ್ನನ್ನೂ ತನ್ನ ಮಕ್ಕಳನ್ನೂ ಇರಿಸಿರುವ ಜಾಗವನ್ನು ಸೂಚಿಸುವುದಕ್ಕಾಗಿ ಅಡವಿ ಪದದೊಂದಿಗೆ ಒಳ್ ಪ್ರತ್ಯಯ ಬಂದಿದೆ.

(೩) ಒಂದು ಕ್ರಿಯಾಪದ ತಿಳಿಸುವ ಘಟನೆ ಯಾವುದಾದರೂ ಒಂದು ರೀತಿಯ ಚಲನೆಯನ್ನು ಒಳಗೊಂಡಿದೆಯಾದರೆ, ಅಂತಹ ಕ್ರಿಯಾಪದದೊಂದಿಗೆ ಆ ಚಲನೆಯ ಸುರು ಮತ್ತು ಕೊನೆಗಳನ್ನು ಸೂಚಿಸುವುದಕ್ಕಾಗಿ ಇನ್ ಮತ್ತು ಗೆ ಎಂಬ ಇನ್ನೂ ಎರಡು ಪ್ರತ್ಯಯಗಳು ಬರಬಲ್ಲುವು; ಇವು ಚಲನೆಗೆ ಸಂಬಂಧಿಸಿದಂತಹ ಎರಡು ರೀತಿಯ ವಿಶಿಷ್ಟವಾದ ಜಾಗಗಳನ್ನು ಸೂಚಿಸುತ್ತವೆ. ಇವು ಹಳೆಗನ್ನಡದ ಮೂರು ಮತ್ತು ನಾಲ್ಕನೆಯ ವಿಭಕ್ತಿ ಪ್ರತ್ಯಯಗಳು.

(೭ಕ) ತಾಪಸಾಶ್ರಮದಿಂ ಪೊರಮಟ್ಟು
'ತಾಪಸಾಶ್ರಮದಿಂದ ಹೊರಟು'

(೭ಖ) ಧೃತರಾಷ್ಟ್ರ ಕರ್ಣ ಶಕುನಿ ಪ್ರಭೃತಿಗಳ್ ನಿಜ ನಿವಾಸಂಗಳ್ಗೆ ಪೋದರ್
'ಧೃತರಾಷ್ಟ್ರ, ಕರ್ಣ, ಶಕುನಿ ಮೊದಲಾದವರು ತಮ್ಮ ಮನೆಗಳಿಗೆ ಹೋದರು'

(೭ಕ)ದಲ್ಲಿ ಹೊರಡುವ ಘಟನೆ ಎಲ್ಲಿಂದ ಸುರುವಾಗಿದೆಯೆಂಬುದನ್ನು ಸೂಚಿಸಲು ತಾಪಸಾಶ್ರಮ ಪದದೊಂದಿಗೆ ಇಂ ಪ್ರತ್ಯಯ ಬಂದಿದೆ, ಮತ್ತು (೭ಖ)ದಲ್ಲಿ ಹೋಗುವ ಘಟನೆ ಎಲ್ಲಿ ಕೊನೆಗೊಳ್ಳುತ್ತದೆ ಎಂಬುದನ್ನು ಸೂಚಿಸುವುದಕ್ಕಾಗಿ ನಿವಾಸಂಗಳ್ ಎಂಬುದರೊಂದಿಗೆ ಗೆ ಪ್ರತ್ಯಯ ಬಂದಿದೆ.

ಸಂಸ್ಕೃತದಲ್ಲಿ ಬಳಕೆಯಾಗುವ ವಿಭಕ್ತಿ ಪ್ರತ್ಯಯಗಳ ಸಂಖ್ಯೆ ಇದಕ್ಕಿಂತ ಜಾಸ್ತಿ. ಮೇಲೆ (೮.೨)ರಲ್ಲಿ ಸೂಚಿಸಿರುವ ಪ್ರಥಮಾ ವಿಭಕ್ತಿ ಮಾತ್ರವಲ್ಲದೆ, ನಾಮಪದಗಳಿಗೂ ಕ್ರಿಯಾಪದಗಳಿಗೂ ನಡುವಿರುವ ಸಂಬಂಧಗಳನ್ನು ಸೂಚಿಸಬಲ್ಲ ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮೀ, ಷಷ್ಠೀ ಮತ್ತು ಸಪ್ತಮೀ ಎಂಬುದಾಗಿ ಹೆಸರಿಸಲಾಗಿರುವ ಇನ್ನೂ ಆರು ವಿಭಕ್ತಿಗಳು ಸಂಸ್ಕೃತದಲ್ಲಿವೆ.

(೮ಕ) ದಂಡಪಾಲಃ ಚೋರಂ ಕರ್ಷತಿ
'ಕಾವಲುಗಾರನು ಕಳ್ಳನನ್ನು ಎಳೆಯುತ್ತಾನೆ'
(೮ಖ) ವೃತ್ರಂ ಇಂದ್ರೋ ವಜ್ರೇಣ ಅಹನ್
'ಇಂದ್ರನು ವೃತ್ರನನ್ನು ವಜ್ರಾಯುಧದಿಂದ ಕೊಂದ'
(೮ಗ) ಬ್ರಾಹ್ಮಣೇಭ್ಯೋ ನಿಷ್ಕಾನ್ ದದೌ
'ಬ್ರಾಹ್ಮಣರಿಗೆ ಚಿನ್ನದ ನಾಣ್ಯಗಳನ್ನು ಕೊಟ್ಟ'
(೮ಘ) ಧಾವತೋ ಅಶ್ವಾತ್ ಪತತಿ
'ಓಡುತ್ತಿರುವ ಕುದುರೆಯಿಂದ ಬೀಳುತ್ತಾನೆ'
(೮ಜ) ಮಾತುಃ ಸ್ಮರತಿ
'ತಾಯನ್ನು ನೆನೆಯುತ್ತಾನೆ'
(೮ಚ) ಕಸ್ಮಿಂಶ್ಚಿದ್ ವನೇ ಭಾಸುರಕೋ ನಾಮ ಸಿಂಹಃ ಪ್ರತಿವಸತಿ ಸ್ಮ
'ಯಾವುದೋ ಒಂದು ಕಾಡಿನಲ್ಲಿ ಭಾಸುರಕನೆಂಬ ಸಿಂಹ ವಾಸಿಸುತ್ತಿತ್ತು'

(೮ಕ)ದಲ್ಲಿ ಎಳೆಯುವ ಕ್ರಿಯೆಯಿಂದ ಬಾಧಿತನಾಗಿರುವ ವ್ಯಕ್ತಿಯನ್ನು ದ್ವಿತೀಯಾ ವಿಭಕ್ತಿಯ ಮೂಲಕವೂ, (೮ಖ)ದಲ್ಲಿ ಕೊಲ್ಲುವ ಘಟನೆಯಲ್ಲಿ ಬಳಸಿದ ಆಯುಧವನ್ನು ತೃತೀಯಾ ವಿಭಕ್ತಿಯ ಮೂಲಕವೂ, (೮ಗ)ದಲ್ಲಿ ಕೊಟ್ಟ ವಸ್ತುವನ್ನು ಪಡೆದ ವ್ಯಕ್ತಿಯನ್ನು ಚತುರ್ಥೀ ವಿಭಕ್ತಿಯ ಮೂಲಕವೂ, (೮ಘ) ದಲ್ಲಿ ಬಿದ್ದುದೆಲ್ಲಿಂದ ಎಂಬುದನ್ನು ಪಂಚಮೀ ವಿಭಕ್ತಿಯ ಮೂಲಕವೂ, (೮ಜ) ದಲ್ಲಿ ನೆನೆದುದು ಯಾರನ್ನು ಎಂಬುದನ್ನು ಷಷ್ಠೀ ವಿಭಕ್ತಿಯ ಮೂಲಕವೂ, ಮತ್ತು (೮ಚ)ದಲ್ಲಿ ವಾಸಿಸಿರುವ ಜಾಗವನ್ನು ಸಪ್ತಮೀ ವಿಭಕ್ತಿಯ ಮೂಲಕವೂ ಸೂಚಿಸಲಾಗಿದೆ.

ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯಗಳು ಈ ರೀತಿ ನಾಮಪದಕ್ಕೂ ಕ್ರಿಯಾಪದಕ್ಕೂ ನಡುವಿರುವ ಸಂಬಂಧಗಳನ್ನು ಮಾತ್ರವಲ್ಲದೆ, ವಚನಭೇದವನ್ನೂ ಸೂಚಿಸಬೇಕಾಗಿದೆಯಾದ ಕಾರಣ, ಮೇಲೆ ಸೂಚಿಸಿದ ಪ್ರತಿಯೊಂದು ವಿಭಕ್ತಿಯಲ್ಲೂ ಏಕವಚನ, ದ್ವಿವಚನ ಮತ್ತು ಬಹುವಚನಗಳನ್ನು ಸೂಚಿಸಬಲ್ಲ ಮೂರು ಮೂರು ಪ್ರತ್ಯಯಗಳಿವೆ.

(೯ಕ) ಕಟಂ ಕರೋತಿ
'ಚಾಪೆಯನ್ನು ಮಾಡುತ್ತಾನೆ'
(೯ಖ) ಕಟೌ ಕರೋತಿ
'(ಎರಡು) ಚಾಪೆಗಳನ್ನು ಮಾಡುತ್ತಾನೆ'
(೯ಗ) ಕಟಾನ್ ಕರೋತಿ
'(ಹಲವು) ಚಾಪೆಗಳನ್ನು ಮಾಡುತ್ತಾನೆ'

(೧ಕ)ದಲ್ಲಿ ಕಟ 'ಚಾಪೆ' ಪದದೊಂದಿಗೆ ದ್ವಿತೀಯಾ ವಿಭಕ್ತಿ ಮತ್ತು ಏಕವಚನ ಇವೆರಡನ್ನೂ ಒಟ್ಟಾಗಿ ಸೂಚಿಸಲು ಂ ಪ್ರತ್ಯಯ ಬಂದಿದೆ. (೧ಖ)ದಲ್ಲಿ ದ್ವಿತೀಯಾ ವಿಭಕ್ತಿ ಮತ್ತು ದ್ವಿವಚನಗಳನ್ನು ಸೂಚಿಸಲು ಔ ಪ್ರತ್ಯಯ ಬಂದಿದೆ ಮತ್ತು (೧ಗ)ದಲ್ಲಿ ಅದೇ ದ್ವಿತೀಯಾ ವಿಭಕ್ತಿ ಮತ್ತು ಬಹುವಚನಗಳನ್ನು ಸೂಚಿಸಲು ಅನ್ ಪ್ರತ್ಯಯ ಬಂದಿದೆ.

ಆದರೆ, ಹೆಚ್ಚಿನ ನಾಮಪದಗಳಲ್ಲೂ ಈ ಇಪ್ಪತ್ತೊಂದು ವಿಭಕ್ತಿ ಮತ್ತು ವಚನಗಳ ಜೋಡಿಗಳನ್ನು ಸೂಚಿಸುವ ಪ್ರತ್ಯಯಗಳಲ್ಲಿ ಎಲ್ಲವೂ ಒಂದಕ್ಕಿಂತ ಒಂದು ಭಿನ್ನವಾಗಿರುವುದಿಲ್ಲ. ಅವುಗಳಲ್ಲಿ ಕೆಲವು ಒಂದೇ ರೂಪದಲ್ಲಿರಲು ಸಾಧ್ಯವಿದೆ. ಉದಾಹರಣೆಗಾಗಿ, ಆಸ್ಯ 'ಬಾಯಿ' ಪದಕ್ಕೆ ಚತುರ್ಥಿ–ಬಹುವಚನ ಮತ್ತು ಪಂಚಮಿ–ಬಹುವಚನ ಎಂಬ ಎರಡು ವಿಭಕ್ತಿ–ವಚನ ಜೋಡಿಗಳಲ್ಲೂ ಆಸ್ಯೇಭ್ಯಃ ಎಂಬ ಒಂದೇ ರೂಪವಿದೆ; ನದೀ ಪದಕ್ಕೆ ತೃತೀಯಾ–ದ್ವಿವಚನ, ಚತುರ್ಥೀ–ದ್ವಿವಚನ ಮತ್ತು ಪಂಚಮೀ–ದ್ವಿವಚನಗಳೆಂಬ ಮೂರು ವಿಭಕ್ತಿ–ವಚನ ಜೋಡಿಗಳಲ್ಲೂ ನದೀಭ್ಯಾಂ ಎಂಬ ಒಂದೇ ರೂಪವಿದೆ.

ಸಂಸ್ಕೃತದ ವಿಭಕ್ತಿಗಳನ್ನು ಪ್ರಥಮಾ, ದ್ವಿತೀಯಾ, ತೃತೀಯಾ ಇತ್ಯಾದಿಯಾಗಿ ಹೆಸರಿಸಲು ಮುಖ್ಯ ಕಾರಣವೇನೆಂದರೆ, ಹೀಗೆ ಹೆಸರಿಸುವ ಮೂಲಕ ಅವುಗಳಲ್ಲಿ ಯಾವ ವಿಭಕ್ತಿ–ವಚನ ಪ್ರತ್ಯಯಗಳಿಗೆ ಒಂದಲ್ಲ ಒಂದು ನಾಮಪದದೊಂದಿಗೆ ಬಂದಾಗ ಸಮಾನ ರೂಪಗಳು ಕಾಣಿಸಿಕೊಳ್ಳುತ್ತವೆ ಎಂಬುದನ್ನು ತಿಳಿಸುವ ಕೆಲಸ ಸುಲಭವಾಗುತ್ತದೆ. ಬೇರೆ ಯಾವ ಅನುಕ್ರಮದಲ್ಲಿ ಅವನ್ನು ಹೆಸರಿಸಿದರೂ ಈ ಕೆಲಸ ಅಷ್ಟು ಸುಲಭವಾಗದು (ವಿಟ್ನಿ ೧೮೮೮:೮೯ ನೋಡಿ).

## ೮.೪ ವಿಭಕ್ತಿ ಪ್ರತ್ಯಯಗಳ ಅರ್ಥ

ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧಗಳನ್ನು ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳು ಬೇರೆ ಬೇರೆ ರೀತಿಯಲ್ಲಿ ವಿಂಗಡಿಸಿರುವುದೇ ಅವುಗಳಲ್ಲಿ ಬಳಕೆಯಾಗುವ ವಿಭಕ್ತಿ ಪ್ರತ್ಯಯಗಳ ಸಂಖ್ಯೆಯಲ್ಲಿ, ಮೇಲೆ ಸೂಚಿಸಿದ ಹಾಗೆ, ವ್ಯತ್ಯಾಸ ಕಾಣಿಸಲು ಮುಖ್ಯ ಕಾರಣ. (ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯಗಳ ಮೂಲಕ ವಚನವನ್ನೂ ಸೂಚಿಸುತ್ತಿರುವುದು (೮.೩ ನೋಡಿ) ಇನ್ನೊಂದು ಕಾರಣ).

### ೮.೪.೧ ಹಳೆಗನ್ನಡದ ವಿಭಕ್ತಿಗಳು

ಹಳೆಗನ್ನಡದಲ್ಲಿ ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧಗಳನ್ನು ಮಾಡುಗ, ಆಗುಗ ಮತ್ತು ಜಾಗ ಎಂಬುದಾಗಿ ಮೂರು ಮುಖ್ಯ ಗುಂಪುಗಳಲ್ಲಿ ವಿಂಗಡಿಸಲಾಗುತ್ತದೆಯೆಂದು ಹೇಳಬಹುದು. ಒಂದು ಘಟನೆಯನ್ನು ನಡೆಸುವ ವ್ಯಕ್ತಿ ಇಲ್ಲವೇ ಪ್ರಾಣಿ ಮಾಡುಗ, ಅದರಿಂದ

ಬಾಧಿತವಾಗುವ ವ್ಯಕ್ತಿ, ಪ್ರಾಣಿ ಇಲ್ಲವೇ ವಸ್ತು ಆಗುಗ ಮತ್ತು ಘಟನೆ ನಡೆಯುವುದು ಎಲ್ಲಿ ಎಂಬುದನ್ನು ಸೂಚಿಸುವುದು ಜಾಗ (ಭಟ್ ೨೦೦೪:೩೫ ನೋಡಿ).

ಮೇಲೆ (ಅ.೨)ರಲ್ಲಿ ವಿವರಿಸಿದ ಹಾಗೆ, ಈ ಮೂರು ರೀತಿಯ ಸಂಬಂಧಗಳಲ್ಲಿ ಎರಡನ್ನು ಮಾತ್ರ ಸೂಚಿಸಿ, ಮೂರನೆಯದನ್ನು ಸೂಚಿಸದೆ ಬಿಡಲು ಸಾಧ್ಯವಿದೆಯಾದ ಕಾರಣ, ಆಗುಗವನ್ನು ಸೂಚಿಸುವ ಅನ್ ಮತ್ತು ಜಾಗವನ್ನು ಸೂಚಿಸುವ ಒಳ್ ಎಂಬುದಾಗಿ ಹಳೆಗನ್ನಡಕ್ಕೆ ಎರಡು ವಿಭಕ್ತಿ ಪ್ರತ್ಯಯಗಳ ಅವಶ್ಯಕತೆ ಮಾತ್ರ ಇದೆ.

ಇದಲ್ಲದೆ, ಘಟನೆಯು ಯಾವುದಾದರೊಂದು ರೀತಿಯ 'ಚಲನೆ'ಯನ್ನು ಒಳಗೊಂಡಿದೆಯಾದರೆ, ಅಂತಹ ಚಲನೆಯ ಸುರು ಮತ್ತು ಕೊನೆಗಳನ್ನು ಸೂಚಿಸುವುದಕ್ಕಾಗಿ ಇನ್ ಮತ್ತು ಗೆ ಎಂಬ ಬೇರೆ ಎರಡು ವಿಭಕ್ತಿ ಪ್ರತ್ಯಯಗಳ ಅವಶ್ಯಕತೆಯೂ ಹಳೆಗನ್ನಡಕ್ಕಿದೆ.

ಈ ನಾಲ್ಕು ಪ್ರತ್ಯಯಗಳಲ್ಲಿ ಒಳ್, ಇನ್, ಮತ್ತು ಗೆ ಎಂಬ ಮೂರು ಪ್ರತ್ಯಯಗಳು ಘಟನೆಯ ಜಾಗಕ್ಕೆ ಸಂಬಂಧಿಸಿದ್ದು (ಚಲನೆಯ ಅರ್ಥವಿದ್ದರೆ ಇನ್ ಅಥವಾ ಗೆ ಮತ್ತು ಇಲ್ಲದಿದ್ದರೆ ಒಳ್), ಅವು ಮೂರು ಒಂದು ಗುಂಪಿನಲ್ಲೂ, ಅನ್ ಎಂಬುದು ಇನ್ನೊಂದು ಗುಂಪಿನಲ್ಲೂ ಬರುತ್ತವೆ. ಹಳೆಗನ್ನಡ ವಿಭಕ್ತಿ ಪ್ರತ್ಯಯಗಳ ಈ ವಿಭಜನೆಗೆ ಚಾರಿತ್ರಿಕ ಆಧಾರವೂ ಇದೆ.

ಉದಾಹರಣೆಗಾಗಿ, ಒಳ್, ಇನ್, ಮತ್ತು ಗೆ ಎಂಬ ಮೂರು ಪ್ರತ್ಯಯಗಳು ನಾಮಪದಗಳಿಂದ ಸಾಧಿತವಾಗಿದ್ದು, ಅನ್ ಪ್ರತ್ಯಯದ ಹಾಗೆ ನಾಮಪದಗಳಿಗೆ ನೇರವಾಗಿ ಸೇರುವ ಬದಲು ನಾಮಪದಕ್ಕೆ ಅ ಪ್ರತ್ಯಯವನ್ನು ಸೇರಿಸಿ ರಚಿಸಿದ ಸಂಬಂಧಿಸುವ ರೂಪಕ್ಕೆ ಸೇರುತ್ತವೆಯೆಂದು ಹೇಳಲು ಸಾಧ್ಯವಿದೆ. ಇದು ಅಂತಹ ಒಂದು ಚಾರಿತ್ರಿಕ ಆಧಾರ.

| ಅ | ಒಳ್ | ಇನ್ | ಗೆ | ಅನ್ |
|---|---|---|---|---|
| ಮಗನ | ಮಗನೊಳ್ | ಮಗನಿನ್ | ಮಗಂಗೆ | ಮಗನನ್ |
| ಕಿಚ್ಚಿನ | ಕಿಚ್ಚಿನೊಳ್ | ಕಿಚ್ಚಿನಿನ್ | ಕಿಚ್ಚಿಂಗೆ | ಕಿಚ್ಚಿನ್ |
| ಆಟದ | ಆಟದೊಳ್ | ಆಟದಿನ್ | ಆಟಕ್ಕೆ | ಆಟಮನ್ |
| ಅದಱ | ಅದಱೊಳ್ | ಅದಱಿನ್ | ಅದರ್ಕೆ | ಅದನ್ |
| ಎತ್ತಣ | -- | ಎತ್ತಣಿನ್ | -- | -- |

ಮೇಲಿನ ಕೋಷ್ಟಕದಲ್ಲಿ ಕಾಣಿಸಿದ ಹಾಗೆ, ಒಳ್, ಇನ್, ಮತ್ತು ಗೆ ಪ್ರತ್ಯಯಗಳು ಸೇರಿದಾಗ ಕೆಲವು ನಾಮಪದಗಳ ಮುಂದೆ ಇನ್, ದ್, ಅಱ್, ಮತ್ತು ಅಣ್ ಎಂಬ ಆಗಮಗಳು ಬರುತ್ತವೆ, ಮತ್ತು ಸಂಬಂಧಿಸುವ ಅ ಪ್ರತ್ಯಯ ಸೇರಿದಾಗಲೂ ಇವೇ ಆಗಮಗಳು ಬರುತ್ತವೆ. ಆದರೆ, ಅನ್ ಪ್ರತ್ಯಯ ಸೇರಿದಾಗ ಈ ಆಗಮಗಳು ಬರುವುದಿಲ್ಲ. ಈ ಆಗಮಗಳು ಚಾರಿತ್ರಿಕವಾಗಿ ಸಂಬಂಧಿಸುವ ರೂಪದ ಅಂಶಗಳೆಂದು ಕಲ್ಪಿಸಿಕೊಳ್ಳಲು ಸಾಧ್ಯವಿದ್ದು, ಅಂತಹ ಸಂಬಂಧಿಸುವ ರೂಪಕ್ಕೇನೇ ಒಳ್, ಇನ್, ಮತ್ತು ಗೆ ಪ್ರತ್ಯಯಗಳು ಸೇರುತ್ತವೆಯೆಂದು ಹೇಳಲು ಸಾಧ್ಯವಿದೆ.

ಮೇಲೆ ಸೂಚಿಸಿರುವ ಆಗುಗ, ಜಾಗ, ಸುರು, ಮತ್ತು ಕೊನೆ ಎಂಬ ಸಂಬಂಧಗಳು ಈ ವಿಭಕ್ತಿ ಪ್ರತ್ಯಯಗಳ ಮುಖ್ಯ ಅರ್ಥಗಳು. ಈ ಅರ್ಥಗಳಲ್ಲಿ ಮಾತ್ರವಲ್ಲದೆ ಹಲವು ವಿಸ್ತೃತ ಅರ್ಥಗಳಲ್ಲೂ ಅವನ್ನು ಬಳಸಲು ಸಾಧ್ಯವಿದ್ದು (ಅ.೫ ನೋಡಿ), ಇದರಿಂದಾಗಿ ಈ ನಾಲ್ಕು ವಿಭಕ್ತಿ ಪ್ರತ್ಯಯಗಳ ಮೂಲಕ ಹಳೆಗನ್ನಡದಲ್ಲಿ ನಾಮಪದ ಮತ್ತು ಕ್ರಿಯಾಪದಗಳ ನಡುವೆ ಕಾಣಿಸುವ ಎಲ್ಲಾ ಬಗೆಯ ಸಂಬಂಧಗಳನ್ನೂ ಸೂಚಿಸಲು ಸಾಧ್ಯವಾಗುತ್ತದೆ.

## ೮.೪.೨ ಸಂಸ್ಕೃತದ ವಿಭಕ್ತಿಗಳು

ಸಂಸ್ಕೃತದಲ್ಲಿ ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧಗಳನ್ನು ಹಳೆಗನ್ನಡಕ್ಕಿಂತ ತೀರ ಭಿನ್ನವಾದ ರೀತಿಯಲ್ಲಿ ವಿಂಗಡಿಸಲಾಗಿದ್ದು, ಅವನ್ನು ಸೂಚಿಸುವುದಕ್ಕಾಗಿ ಏಳು ವಿಭಕ್ತಿ ಪ್ರತ್ಯಯಗಳ ಬಳಕೆಯಾಗುತ್ತದೆ. ಆದರೆ, ಹಳೆಗನ್ನಡದ ಹಾಗೆ ಈ ಏಳು ವಿಭಕ್ತಿಗಳು ನೇರವಾಗಿ ಏಳು ರೀತಿಯ ಸಂಬಂಧಗಳನ್ನು ಸೂಚಿಸುವುದಿಲ್ಲ.

ಸಂಸ್ಕೃತದ ವೈಯಾಕರಣಿಗಳು ಹೇಳುವ ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಮತ್ತು ಅಧಿಕರಣ ಎಂಬ ಆರು 'ಕಾರಕ'ಗಳು ಸಂಸ್ಕೃತದಲ್ಲಿ ನಾಮಪದ ಮತ್ತು ಕ್ರಿಯಾಪದಗಳ ನಡುವಿನ ಸಂಬಂಧಗಳನ್ನು ಆರು ಮುಖ್ಯ ಗುಂಪುಗಳಲ್ಲಿ ವಿಂಗಡಿಸುತ್ತವೆ. ಇವುಗಳಲ್ಲೊಂದನ್ನು (ಕರ್ತೃವನ್ನು) ಕ್ರಿಯಾಪದವೇ ಸೂಚಿಸಲು ಸಾಧ್ಯವಿದೆಯಾದ ಕಾರಣ, ಅದನ್ನು ಸೂಚಿಸಲು ಬೇರೆ ವಿಭಕ್ತಿ ಪ್ರತ್ಯಯದ ಅವಶ್ಯಕತೆಯಿಲ್ಲ.

ಹೀಗಿದ್ದರೂ, ಮೇಲೆ (೮.೨)ರಲ್ಲಿ ವಿವರಿಸಿದ ಹಾಗೆ, ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯವು ವಚನವನ್ನೂ ಸೂಚಿಸಬೇಕಾಗುವುದಾದ ಕಾರಣ, ಇಂತಹ ಸಂದರ್ಭಗಳಲ್ಲಿ ಬಳಸಲು ಆ ಭಾಷೆಗೆ 'ಪ್ರಥಮಾ' ಎಂಬ ಒಂದು ವಿಭಕ್ತಿ ಪ್ರತ್ಯಯದ ಅವಶ್ಯಕತೆಯಿದೆ.

ಸಂಸ್ಕೃತದ ಷಷ್ಠೀ ವಿಭಕ್ತಿ ಎರಡು ನಾಮಪದಗಳ ನಡುವಿರುವ ಸಂಬಂಧವನ್ನು (ಪಶೋಃ ಪಾದಃ 'ಪ್ರಾಣಿಯ ಕಾಲು') ಸೂಚಿಸುವುದಲ್ಲದೆ, ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧಗಳನ್ನೂ ಸೂಚಿಸಬಲ್ಲುದು (೮.೭.೪ ನೋಡಿ). ಹಾಗಾಗಿ, ಸಂಸ್ಕೃತ ವ್ಯಾಕರಣಗಳಲ್ಲಿ ಷಷ್ಠೀ ಪ್ರತ್ಯಯವನ್ನೂ ಒಂದು ವಿಭಕ್ತಿ ಪ್ರತ್ಯಯವೆಂಬುದಾಗಿ ಪರಿಗಣಿಸಲಾಗಿದೆ.

ಹಳೆಗನ್ನಡದ ಅ ಪ್ರತ್ಯಯ (ಮದನನ ಪೂಗಣೆ) ಇದಕ್ಕಿಂತ ತೀರ ಭಿನ್ನವಾಗಿದ್ದು, ಅದು ಎರಡು ನಾಮಪದಗಳ ನಡುವಿರುವ ಸಂಬಂಧವನ್ನು ಮಾತ್ರ ಸೂಚಿಸಬಲ್ಲುದು; ಸಂಸ್ಕೃತದ ಹಾಗೆ ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧವನ್ನು ಅದು ಸೂಚಿಸಲಾರದು. ಹಾಗಾಗಿ, ಹಳೆಗನ್ನಡ ವ್ಯಾಕರಣದಲ್ಲಿ ಅದನ್ನು ವಿಭಕ್ತಿ ಪ್ರತ್ಯಯವೆಂದು ಕರೆಯಲು ಯಾವ ಆಧಾರವೂ ಇಲ್ಲ.

ಇದಲ್ಲದೆ, ಹಳೆಗನ್ನಡದ ನಾಮಪದಗಳಿಗಿರುವ ಈ ಅ ಪ್ರತ್ಯಯ ಸೇರಿದ ರೂಪಗಳು ಗುಣಪದಗಳ ಜಾಗದಲ್ಲಿ ಬರಬಲ್ಲುವಾದ ಕಾರಣ, ಹಲವು ವಿಷಯಗಳಲ್ಲಿ ಅವು ವಿಭಕ್ತಿ ರೂಪಗಳಿಗಿಂತ ಭಿನ್ನವಾಗಿವೆ (೮.೭.೪ ನೋಡಿ).

ಸಂಸ್ಕೃತದ ದ್ವಿತೀಯಾ ವಿಭಕ್ತಿ ಪ್ರತ್ಯಯ ಘಟನೆಯಿಂದ ಭಾಧಿತವಾದುದನ್ನು (ಕರ್ಮವನ್ನು) ಮಾತ್ರವಲ್ಲದೆ ಚಲನೆಯ ಕೊನೆಯನ್ನೂ ಸೂಚಿಸಬಲ್ಲುದು. ಚತುರ್ಥೀ ವಿಭಕ್ತಿಯನ್ನೂ ಈ ಅರ್ಥದಲ್ಲಿ ಬಳಸಲು ಸಾಧ್ಯವಿದ್ದರೂ, ಅವುಗಳ ನಡುವೆ ವ್ಯತ್ಯಾಸವಿದೆ:

(೧೦ಕ) ಗ್ರಾಮಾಯ ಗಚ್ಛತಿ
'ಮನೆಗೆ ಹೋಗುತ್ತಾನೆ'

(೧೦ಖ) ಗ್ರಾಮಂ ಗಚ್ಛತಿ
'ಮನೆಗೆ ಹೋಗುತ್ತಾನೆ'

ಮೇಲಿನ ಎರಡು ವಾಕ್ಯಗಳಿಗೂ 'ಮನೆಗೆ ಹೋಗುತ್ತಾನೆ' ಎಂಬ ಒಂದೇ ಅರ್ಥವಿದೆ; ಆದರೆ, (೧೦ಕ)ದಲ್ಲಿ ಚತುರ್ಥೀ ವಿಭಕ್ತಿಯ ಬಳಕೆಯಾಗಿದ್ದು, ಅದು ಹೋಗುವಿಕೆಯ ಉದ್ದೇಶವನ್ನು

ಮಾತ್ರ ಸೂಚಿಸುತ್ತದೆ; ಮತ್ತು (೧೦ಖ)ದಲ್ಲಿ ದ್ವಿತೀಯೆಯ ಬಳಕೆಯಾಗಿದ್ದು, ಅದು ಆ ಉದ್ದೇಶ ಸಿದ್ಧಿಸಿದೆಯೆಂಬುದನ್ನೂ ಸೂಚಿಸುತ್ತದೆ.

ಈ ರೀತಿ, ಚಲನೆಯ ಮೂಲಕ ಒಂದು ಜಾಗವನ್ನು ತಲಪಲಾಗಿದೆ ಎಂಬರ್ಥವಿರುವಲ್ಲಿ (ಉದ್ದೇಶದ ಸಿದ್ಧಿಯಾಗಿರುವಲ್ಲಿ) ದ್ವಿತೀಯೆಯನ್ನು ಬಳಸಲು ಸಾಧ್ಯವಿದೆಯಲ್ಲದೆ ಚತುರ್ಥಿಯನ್ನು ಬಳಸಲು ಸಾಧ್ಯವಾಗದು (ತಾರಾಪೊರೆವಾಲಾ ೧೯೬೭:೪೦ ನೋಡಿ).

ಚತುರ್ಥಿಗೆ ಇದಕ್ಕಿಂತಲೂ, ಒಂದು ಘಟನೆಯನ್ನು ಯಾರಿಗಾಗಿ ನಡೆಸಲಾಗಿದೆ ಎಂಬುದನ್ನು ಸೂಚಿಸುವ ಅರ್ಥವೇ ಹೆಚ್ಚು ಮುಖ್ಯವಾದುದು. ಹಾಗಾಗಿ, ಅದು ಸಾಮಾನ್ಯವಾಗಿ ಸಂಪ್ರದಾನ ಕಾರಕವನ್ನು ಸೂಚಿಸುತ್ತದೆ. ಕೆಳಗೆ ಕೊಟ್ಟಿರುವ (೧೧)ನೇ ವಾಕ್ಯದಲ್ಲಿ ದನವನ್ನು ಪಡೆಯುವ ವ್ಯಕ್ತಿಯನ್ನು ಸೂಚಿಸುವ ಉಪಾಧ್ಯಾಯ ಪದ ಚತುರ್ಥಿಯಲ್ಲಿ ಬಂದಿದೆ.

(೧೧) ಶಿಷ್ಯಃ ಉಪಾಧ್ಯಾಯಾಯ ಗಾಂ ದದಾತಿ
‘ಶಿಷ್ಯನು ಉಪಾಧ್ಯಾಯನಿಗೆ ದನವನ್ನು ಕೊಡುತ್ತಾನೆ’

ಸಹಯೋಗಾರ್ಥವೇ ತೃತೀಯಾ ವಿಭಕ್ತಿಯ ಮುಖ್ಯ ಅರ್ಥ (ತಾರಾಪೊರೆವಾಲಾ ೧೯೬೭). ಕೆಳಗೆ ಕೊಟ್ಟಿರುವ (೧೨ಕ) ವಾಕ್ಯದಲ್ಲಿ ಈ ಬಳಕೆಯನ್ನು ಕಾಣಬಹುದು. ಘಟನೆಯೊಂದನ್ನು ನಡೆಸುವಲ್ಲಿ ಸಾಧನವಾಗಿ ಬಳಕೆಯಾಗುವ ಕರಣವೂ ಈ ರೀತಿ ಮಾಡುಗನ ಸಹಯೋಗಿಯಾಗಿರುವ ಕಾರಣ, ಅದನ್ನೂ ತೃತೀಯಾ ವಿಭಕ್ತಿ ಸೂಚಿಸಬಲ್ಲುದು ಎಂಬುದನ್ನು (೧೨ಖ)ದಲ್ಲಿ ಕಾಣಿಸಲಾಗಿದೆ.

(೧೨ಕ) ದೇವೋ ದೇವೇಭಿರಾಗಮತ್
‘ದೇವನು ದೇವತೆಗಳೊಂದಿಗೆ ಬಂದ’
(೧೨ಖ) ರಾಮಃ ಕಾಷ್ಠೈಃ ಓದನಂ ಪಚತಿ
‘ರಾಮನು ಕಟ್ಟಿಗೆಯನ್ನು ಬಳಸಿ ಅನ್ನವನ್ನು ಬೇಯಿಸುತ್ತಾನೆ’

ಇದಕ್ಕೆ ವಿರುದ್ಧವಾದ ವಿಯೋಗಾರ್ಥ ಪಂಚಮೀ ವಿಭಕ್ತಿಗಿದೆ. ಕೆಳಗೆ ಕೊಟ್ಟಿರುವ (೧೩ಕ-ಖ) ವಾಕ್ಯಗಳಲ್ಲಿ ಒಂದು ಜಾಗವನ್ನು ಬಿಟ್ಟು ಹೋಗುವ ಈ ಅರ್ಥದಿಂದಲೇ ಚಲನೆಯ ಸುರು ಎಂಬ ಅರ್ಥವೂ ಈ ಪ್ರತ್ಯಯಕ್ಕೆ ಬರುತ್ತದೆ.

(೧೩ಕ) ವಿಹಗಃ ಆಕಾಶಾತ್ ಅಪತತ್
‘ಹಕ್ಕಿ ಆಕಾಶದಿಂದ (ಕೆಳಗೆ) ಬಿತ್ತು’
(೧೩ಖ) ಮುನಿಃ ಪರ್ವತಾದವರೋಹತಿ
‘ಮುನಿಯು ಪರ್ವತದಿಂದ ಇಳಿಯುತ್ತಾನೆ’

ಸಂಸ್ಕೃತದ ಸಪ್ತಮೀ ವಿಭಕ್ತಿ ಒಂದು ಘಟನೆಯ ಜಾಗವನ್ನು ಮಾತ್ರವಲ್ಲದೆ, ಚಲನೆಯ ಕೊನೆಯನ್ನೂ ಸೂಚಿಸಬಲ್ಲುದು. ಉದಾಹರಣೆಗಾಗಿ, ಕೆಳಗೆ (೧೪ಕ)ದಲ್ಲಿ ಬೇಯುವ ಘಟನೆಯ ಜಾಗವಾಗಿರುವ ಸ್ಥಾಲೀ ‘ಪಾತ್ರೆ’ ಎಂಬುದನ್ನು ಸಪ್ತಮಿಯಲ್ಲಿರಿಸಲಾಗಿದೆ, ಮತ್ತು (೧೪ಖ)ದಲ್ಲಿ ಬೀಳುವ ಘಟನೆಯ ಕೊನೆಯಾಗಿರುವ ಚರಣ ‘ಕಾಲು’ ಪದವನ್ನೂ ಸಪ್ತಮಿಯಲ್ಲಿರಿಸಲಾಗಿದೆ.

(೧೪ಕ) ಓದನಂ ಸ್ಥಾಲ್ಯಾಂ ಪಚತಿ
'ಅನ್ನ ಪಾತ್ರೆಯಲ್ಲಿ ಬೇಯುತ್ತದೆ'

(೧೪ಖ) ಚರಣಯೋಃ ನಿಪೇತತುಃ
'(ಅವರಿಬ್ಬರು ಆತನ) ಕಾಲುಗಳಿಗೆ ಬಿದ್ದರು'

**೮.೫ ವಿಸ್ತೃತ ಬಳಕೆಗಳು**

ಹಳೆಗನ್ನಡ ವಿಭಕ್ತಿ ಪ್ರತ್ಯಯಗಳ ಬಳಕೆಗೂ ಸಂಸ್ಕೃತ ವಿಭಕ್ತಿ ಪ್ರತ್ಯಯಗಳ ಬಳಕೆಗೂ ನಡುವಿರುವ ಒಂದು ಮುಖ್ಯವಾದ ವ್ಯತ್ಯಾಸವೇನೆಂದರೆ, ಮೇಲೆ ಸೂಚಿಸಿದ ಹಾಗೆ, ಹಳೆಗನ್ನಡದ ವಿಭಕ್ತಿ ಪ್ರತ್ಯಯಗಳಿಗೆ ಸ್ಪಷ್ಟವಾದ ಅರ್ಥಗಳನ್ನು ಕೊಡಲು ಸಾಧ್ಯವಿದೆ; ಅವಕ್ಕೆ ಕೆಲವು ವಿಸ್ತೃತ ಬಳಕೆಗಳಿರುವುದು ನಿಜವಾದರೂ ಇಂತಹ ಬಳಕೆಗಳಲ್ಲಿ ಕಾಣಿಸುವ ಅರ್ಥಗಳಲ್ಲಿ ಹೆಚ್ಚಿನವನ್ನೂ ಅವುಗಳ ಮೂಲ ಅರ್ಥದಿಂದಲೇನೇ ಸಾಧಿಸಲು ಸಾಧ್ಯವಿದೆ.

ಉದಾಹರಣೆಗಾಗಿ, ಹಳೆಗನ್ನಡದ ಗೆ ಪ್ರತ್ಯಯಕ್ಕೆ ಚಲನೆಯ ಕೊನೆಯನ್ನು ಸೂಚಿಸುವ ಮೂಲಾರ್ಥ (೭ಖ ನೋಡಿ) ಮಾತ್ರವಲ್ಲದೆ, ಬೇರೆ ಹಲವು ವಿಸ್ತೃತ ಬಳಕೆಗಳೂ ಇವೆ. ಆದರೆ, ಈ ಎಲ್ಲಾ ವಿಸ್ತೃತ ಬಳಕೆಗಳನ್ನೂ ಆ ಮೂಲಾರ್ಥದಿಂದಲೇನೇ ಸಾಧಿಸಲು ಸಾಧ್ಯವಿದೆ.

(೧೫ಕ) ಅವರ್ಗೆ ನಕುಲ ಸಹದೇವರೆಂದು ಪೆಸರನಿಟ್ಟು
'ಅವರಿಗೆ ನಕುಲ ಸಹದೇವರೆಂದು ಹೆಸರನ್ನಿಟ್ಟು'

(೧೫ಖ) ದ್ರೋಣಂ ಗಡಮಿಷುವಿದ್ಯೆಗೆ ಜಾಣಂ ಗಡ
'ದ್ರೋಣನಲ್ಲವೆ! ಬಾಣವಿದ್ಯೆಯಲ್ಲಿ ಜಾಣನಲ್ಲವೆ!'

(೧೫ಗ) ಎನ್ನರಸಂಗೆ ಎನ್ನದಟುಮನ್ ತೋಱುವೆಂ
'ನನ್ನ ಪರಾಕ್ರಮವನ್ನು ನನ್ನ ಸ್ವಾಮಿಗೆ ತೋರಿಸುತ್ತೇನೆ'

(೧೫ಘ) ನೊಳವಿಂಗೆ ಕುಪ್ಪೆ ವರಂ
'ನೊಣಕ್ಕೆ ಕಸವೇ ಶ್ರೇಷ್ಠವಾದುದು'

(೧೫ಕ)ದಲ್ಲಿ ಯಾರಿಗೆ ಹೆಸರನ್ನಿರಿಸಲಾಗಿದೆಯೋ ಆ ವ್ಯಕ್ತಿಗಳನ್ನು ಸೂಚಿಸುವ ಅವರ್ ಪದದೊಂದಿಗೆ ಗೆ ಪ್ರತ್ಯಯ ಬಂದಿದೆ. ಇಲ್ಲಿ ಹೆಸರಿನ 'ಚಲನೆ' ಯಾಗಿಲ್ಲದಿದ್ದರೂ, ಕೊಡುವಿಕೆಯ ಅರ್ಥವಿದೆಯಾದ ಕಾರಣ, ಇದನ್ನು ಚಲನೆಯ ಕೊನೆಯೆಂಬ ಅರ್ಥಕ್ಕೆ ಸಂಬಂಧಿಸಿದುದೆಂದು ಹೇಳಲು ಸಾಧ್ಯವಿದೆ. (೧೫ಖ)ದಲ್ಲಿ ಜಾಣನಾಗಿರುವ ಗುಣಧರ್ಮಕ್ಕಿರುವ ವ್ಯಾಪ್ತಿಯನ್ನು ಇಷುವಿದ್ಯೆ ತಿಳಿಸುವುದಾದ ಕಾರಣ, ಅದು ಚಲನೆಯ ಕೊನೆಯೆಂಬ ಅರ್ಥಕ್ಕೆ ಸಂಬಂಧಿಸಿದುದೆಂದು ಹೇಳಬಹುದು. ಗೆ ಪ್ರತ್ಯಯಕ್ಕಿರುವ ಇತರ ಬಳಕೆಗಳನ್ನೂ, ಇದೇ ರೀತಿಯಲ್ಲಿ, ಚಲನೆಯ ಕೊನೆ ಎಂಬ ಮೂಲಾರ್ಥದ ಬೇರೆ ಬೇರೆ ವಿಸ್ತೃತ ಬಳಕೆಗಳೆಂದು ಪರಿಗಣಿಸಲು ಸಾಧ್ಯವಿದೆ.

ಆದರೆ, ಸಂಸ್ಕೃತದ ವಿಭಕ್ತಿ ಪ್ರತ್ಯಯಗಳಿಗೆ ಈ ರೀತಿ ಅವುಗಳ ಎಲ್ಲಾ ಬಳಕೆಗಳಿಗೂ ಸರಿಹೊಂದುವಂತೆ ಅರ್ಥವನ್ನು ಹೇಳುವುದು ಬಹಳ ಕಷ್ಟ. ಇದಕ್ಕೆ ಮುಖ್ಯ ಕಾರಣವೇನೆಂದರೆ, ಸಂಸ್ಕೃತದ ಕ್ರಿಯಾಪದಗಳೊಂದಿಗೆ ಹಲವು ಉಪಸರ್ಗಗಳು ಬರಲು ಸಾಧ್ಯವಿದ್ದು, ಇವನ್ನನುಸರಿಸಿ, ನಾಮಪದಗಳೊಂದಿಗೆ ಬೇರೆ ಬೇರೆ ವಿಭಕ್ತಿ ಪ್ರತ್ಯಯಗಳು ಬರಬೇಕಾಗುತ್ತದೆ. ಇಂತಹ ಬಳಕೆಗಳಿಗೆ ಉಪಸರ್ಗಗಳ ಅರ್ಥವೇ ಮೊದಲಿಗೆ ಆಧಾರವಾಗಿದ್ದಿರಲು ಸಾಧ್ಯವಿದೆ. ಆದರೆ, ಕಾವ್ಯಗಳ

ಕಾಲದ ಸಂಸ್ಕೃತದಲ್ಲಿ ಈ ಉಪಸರ್ಗಗಳು ತಮ್ಮ ಮೊದಲಿನ ಅರ್ಥಗಳನ್ನು ಬಹಳ ಮಟ್ಟಿಗೆ ಕಳೆದುಕೊಂಡಿವೆಯಾದ ಕಾರಣ, ಈ ಆಧಾರ ಇಲ್ಲವಾಗಿದೆ.

ಉದಾಹರಣೆಗಾಗಿ ಕೆಳಗಿನ ವಾಕ್ಯಗಳನ್ನು ಗಮನಿಸಬಹುದು.

(೧೬ಕ) ಪರ್ವತೇ ಆಸ್ತೇ
'ಗುಡ್ಡದಲ್ಲಿ ಕುಳಿತಿದ್ದಾನೆ'
(೧೬ಖ) ಪರ್ವತಂ ಅಧ್ಯಾಸ್ತೇ
'ಗುಡ್ಡದಲ್ಲಿ ಕುಳಿತಿದ್ದಾನೆ'

ಕುಳಿತುಕೊಂಡಿರುವ ಜಾಗವನ್ನು ಸೂಚಿಸುವುದಕ್ಕಾಗಿ (೧೬ಕ)ದಲ್ಲಿ ಸಪ್ತಮಿಯನ್ನು ಬಳಸಲಾಗಿದೆ, ಮತ್ತು (೧೬ಖ)ದಲ್ಲಿ ದ್ವಿತೀಯೆಯನ್ನು ಬಳಸಲಾಗಿದೆ; (೧೬ಖ)ದಲ್ಲಿ ಕ್ರಿಯಾಪದದೊಂದಿಗೆ ಅಧಿ ಉಪಸರ್ಗವನ್ನು ಬಳಸಿರುವುದೇ ಈ ರೀತಿ ಸಪ್ತಮಿಯ ಬದಲು ದ್ವಿತೀಯೆಯನ್ನು ಬಳಸಲು ಕಾರಣ. ಆದರೆ, ಈ ಬದಲಾವಣೆಗೆ ಅರ್ಥದ ಆಧಾರವಿಲ್ಲ.

ಇದಲ್ಲದೆ, ಸಂಸ್ಕೃತದಲ್ಲಿ ಆರು ಕಾರಕಗಳನ್ನು ಸೂಚಿಸುವುದಕ್ಕಾಗಿ ಏಳು ವಿಭಕ್ತಿ ಪ್ರತ್ಯಯಗಳ ಬಳಕೆಯಾಗುತ್ತದೆಯೆಂಬುದೂ ವಿಭಕ್ತಿ ಪ್ರತ್ಯಯ ಮತ್ತು ನಾಮ–ಕ್ರಿಯಾ ಸಂಬಂಧ ಇವೆರಡರ ನಡುವೆ ನೇರವಾದ ಹೊಂದಾಣಿಕೆಯಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ. ನಿಜಕ್ಕೂ ಆರು ಕಾರಕಗಳಿಗೆ ಐದು ವಿಭಕ್ತಿ ಪ್ರತ್ಯಯಗಳಿದ್ದರೆ ಸಾಕು. ಕನ್ನಡದಲ್ಲಿ ಐದು ಸಂಬಂಧಗಳನ್ನು ನಾಲ್ಕು ವಿಭಕ್ತಿ ಪ್ರತ್ಯಯಗಳು ಸೂಚಿಸುತ್ತವೆ ತಾನೇ.

## ೮.೬ ವಿಭಕ್ತಿ ಪ್ರತ್ಯಯಗಳು ಮತ್ತು ಕಾರಕಗಳು

ವಿಭಕ್ತಿ ಪ್ರತ್ಯಯಗಳ ಮೂಲಕ ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧಗಳನ್ನು ಸೂಚಿಸುವಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಎಂತಹ ವ್ಯತ್ಯಾಸವಿದೆ ಎಂಬುದನ್ನು ನಾವು ಮೇಲಿನ ಎರಡು ವಿಭಾಗಗಳಲ್ಲಿ (೮.೪–೫ರಲ್ಲಿ) ನೋಡಿರುವೆವು. ಹಳೆಗನ್ನಡದಲ್ಲಿ ಈ ಸಂಬಂಧಗಳು ವಿಭಕ್ತಿ ಪ್ರತ್ಯಯಗಳ ಮೂಲಕ ನೇರವಾಗಿ ಸೂಚಿತವಾಗುತ್ತವೆ; ಆದರೆ, ಸಂಸ್ಕೃತದಲ್ಲಿ ಈ ರೀತಿ ನೇರವಾಗಿ ಸೂಚಿತವಾಗುವುದಿಲ್ಲ.

ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯಗಳಿಗೆ ಇಂತಹ ಸಂಬಂಧಗಳನ್ನು ಸೂಚಿಸುವ ಕೆಲಸ ಮಾತ್ರವಲ್ಲದೆ ಬೇರೆಯೂ ಕೆಲವು ಕೆಲಸಗಳಿರುವುದೇ ಇದಕ್ಕೆ ಮುಖ್ಯ ಕಾರಣ. ಉದಾಹರಣೆಗಾಗಿ, ಈ ಪ್ರತ್ಯಯಗಳು ಇಂತಹ ಸಂಬಂಧಗಳನ್ನು ಮಾತ್ರವಲ್ಲದೆ ನಾಮಪದಗಳ ವಚನವನ್ನೂ ಸೂಚಿಸಬೇಕಾಗುತ್ತದೆ; ಇವುಗಳ ಬಳಕೆ ಕ್ರಿಯಾಪದದೊಂದಿಗೆ ಬರುವ ಉಪಸರ್ಗಗಳ ಮೇಲೂ ಅವಲಂಬಿಸಿರಬೇಕಾಗುತ್ತದೆ; ಮತ್ತು ಇತರ ವಿಭಕ್ತಿ ಪ್ರತ್ಯಯಗಳು ನಡೆಸುವ ಕೆಲಸವನ್ನೇ ಹಲವು ಸಂದರ್ಭಗಳಲ್ಲಿ ಷಷ್ಠೀ ವಿಭಕ್ತಿ ಪ್ರತ್ಯಯ ನಡೆಸಬಲ್ಲುದು.

ಈ ಕಾರಣಕ್ಕಾಗಿ, ಸಂಸ್ಕೃತದ ವೈಯಾಕರಣಿಗಳು 'ಕಾರಕ'ವೆಂಬ ಬೇರೆಯೇ ಒಂದು ವ್ಯಾಕರಣ ತತ್ವವನ್ನು ಕಲ್ಪಿಸಿಕೊಂಡು, ಅದರ ಮೂಲಕ ನಾಮಪದ ಮತ್ತು ಕ್ರಿಯಾಪದಗಳ ನಡುವಿನ ಸಂಬಂಧವನ್ನು ಆ ಭಾಷೆಯಲ್ಲಿ ಹೇಗೆ ವಿಂಗಡಿಸಲಾಗುತ್ತದೆ ಎಂಬುದನ್ನು ವಿವರಿಸಬೇಕಾಗಿದೆ. ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ ಮತ್ತು ಅಧಿಕರಣಗಳೆಂಬ ಇಂತಹ ಆರು ಕಾರಕಗಳಲ್ಲಿ ಈ ಸಂಬಂಧಗಳು ವಿಂಗಡಣೆಯಾಗುತ್ತವೆಯೆಂದು ಅವರು ಪ್ರತಿಪಾದಿಸಿದ್ದಾರೆ.

ಮೇಲೆ ಸೂಚಿಸಿದ ಹಾಗೆ, ನಾಮಪದ ಮತ್ತು ಕ್ರಿಯಾಪದಗಳ ನಡುವಿನ ಸಂಬಂಧಗಳನ್ನು ಹಳೆಗನ್ನಡದಲ್ಲಿ ವಿಂಗಡಿಸಿರುವ ರೀತಿ ಇದಕ್ಕಿಂತ ತೀರ ಭಿನ್ನವಾದುದು. ಸಂಸ್ಕೃತದ ಕರ್ತೃ ಕಾರಕದಲ್ಲಿ ಒಟ್ಟು ಸೇರುವ ಸಂಬಂಧಗಳಲ್ಲಿ ಕೆಲವು ಹಳೆಗನ್ನಡದ ಆಗುಗ ಗುಂಪಿನಲ್ಲೂ, ಇನ್ನು ಕೆಲವು ಮಾಡುಗ ಗುಂಪಿನಲ್ಲೂ ಹಂಚಿಹೋಗುತ್ತವೆ. ಇದಲ್ಲದೆ, ಬೇರೆ ಕೆಲವು ಕೊನೆ ಗುಂಪಿನಲ್ಲಿ ಸೇರುತ್ತವೆ. ಸಂಪ್ರದಾನ ಕಾರಕದಲ್ಲಿ ಬರುವ ಸಂಬಂಧಗಳು, ಮತ್ತು ಕರ್ಮ ಕಾರಕದಲ್ಲಿ ಬರುವ ಕೆಲವು ಸಂಬಂಧಗಳೂ ಇದೇ ಕೊನೆ ಗುಂಪಿನಲ್ಲಿ ಬರುತ್ತವೆ. ಇದಲ್ಲದೆ, ಕರಣ ಕಾರಕದಲ್ಲಿ ಬರುವ ಸಂಬಂಧಗಳಲ್ಲಿ ಹೆಚ್ಚಿನವೂ ಜಾಗ ಗುಂಪಿನಲ್ಲಿ ಬರುತ್ತವೆ.

ನಿಜಕ್ಕೂ ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧಗಳನ್ನು ಹಳೆಗನ್ನಡದಲ್ಲಿ ಹೇಗೆ ಸೂಚಿಸಲಾಗುತ್ತದೆ ಎಂಬುದನ್ನು ವಿವರಿಸಲು ಕಾರಕಗಳೆಂಬ ವ್ಯಾಕರಣ ತತ್ವದ ಅವಶ್ಯಕತೆಯೇ ಇಲ್ಲ (ಜಾಸ್ತಿ ವಿವರಗಳಿಗೆ ಭಟ್ ೧೯೯೧ ನೋಡಿ). ಹಳೆಗನ್ನಡದಲ್ಲಿ ಬಳಕೆಯಾಗುವ ವಿಭಕ್ತಿ ಪ್ರತ್ಯಯಗಳಿಗೆ ಕೊಡಬಹುದಾದ ಅರ್ಥಗಳೇ ಈ ವಿಷಯವನ್ನು ನೇರವಾಗಿ ತಿಳಿಸುತ್ತವೆ. ಇದಕ್ಕೆ ಅಪವಾದಗಳಾಗಿ ಬರುವ ಬಳಕೆಗಳೆಲ್ಲ ಸ್ಪಷ್ಟವಾಗಿ ಈ ಪ್ರತ್ಯಯಗಳ ವಿಸ್ತೃತ ಬಳಕೆಗಳಾಗಿವೆ.

ನಾಮಪದಗಳ ಲಿಂಗವನ್ನು ನಿರ್ಧರಿಸುವಲ್ಲಿ ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವಿರುವಂತಹ ವ್ಯತ್ಯಾಸವೇ ವಿಭಕ್ತಿಗಳ ಅರ್ಥವನ್ನು ನಿರ್ಧರಿಸುವಲ್ಲೂ ಈ ಎರಡು ಭಾಷೆಗಳ ನಡುವೆ ಕಾಣಿಸುತ್ತದೆಯೆಂದು ಹೇಳಬಹುದು. ಹಳೆಗನ್ನಡದಲ್ಲಿ ನಾಮಪದಗಳ ಲಿಂಗವನ್ನು ನೇರವಾಗಿ ಅವುಗಳ ಅರ್ಥದ ಆಧಾರದ ಮೇಲೆ ನಿರ್ಧರಿಸಲು ಸಾಧ್ಯವಿದೆ. ಇದಕ್ಕೆ ಕೆಲವೇ ಕೆಲವು ಅಪವಾದಗಳು ಮಾತ್ರ ಇವೆ.

ಆದರೆ, ಸಂಸ್ಕೃತದಲ್ಲಿ ಪ್ರತಿಯೊಂದು ನಾಮಪದದ ಲಿಂಗವನ್ನೂ ವಾಕ್ಯಗಳಲ್ಲಿ ಆ ನಾಮಪದದ ಬಳಕೆಯೆಂತಹದು ಎಂಬುದನ್ನು ಪರಿಶೀಲಿಸುವುದರ ಮೂಲಕ ನಿರ್ಧರಿಸಬೇಕಾಗುತ್ತದೆ (ಇದಕ್ಕೆ ಅಪವಾದವಾಗಿ, ಅರ್ಥವೇ ಅಧಾರವಾಗಬಹುದಾದಂತಹ ಸಂದರ್ಭಗಳು ಸಂಸ್ಕೃತದಲ್ಲಿ ಬಹಳ ಕಡಿಮೆ). ಹಾಗಾಗಿ, ಸಂಸ್ಕೃತ ವ್ಯಾಕರಣದಲ್ಲಿ ಲಿಂಗವಿಭಜನೆಯೆಂಬುದು ಒಂದು ಬಹಳ ಕ್ಲಿಷ್ಟವಾದ ವಿಷಯವಾಗಿದೆ (೭.೨.೨ ನೋಡಿ).

ಇದೇ ರೀತಿಯಲ್ಲಿ, ನಾಮಪದ ಮತ್ತು ಕ್ರಿಯಾಪದಗಳ ನಡುವಿನ ಸಂಬಂಧಗಳ ವಿಭಜನೆಯೂ ಸಂಸ್ಕೃತ ವ್ಯಾಕರಣದಲ್ಲಿ ಒಂದು ಬಹಳ ಕ್ಲಿಷ್ಟವಾದ ವಿಷಯವಾಗಿದೆ. ವಿಭಕ್ತಿ ಪ್ರತ್ಯಯಗಳ ಬಳಕೆಗೆ ಅರ್ಥವ್ಯತ್ಯಾಸ ನೇರವಾದ ಆಧಾರವಾಗಿಲ್ಲದಿರುವುದೇ ಇದಕ್ಕೆ ಮುಖ್ಯ ಕಾರಣ.

ಹಳೆಗನ್ನಡದಲ್ಲಿ ವಿಭಕ್ತಿ ಪ್ರತ್ಯಯಗಳನ್ನು ನೇರವಾಗಿ ಅವುಗಳ ಅರ್ಥದೊಂದಿಗೆ ಸಂಬಂಧಿಸಲು ಸಾಧ್ಯವಿದೆಯಾದ ಕಾರಣ, ಅದರ ವಿಭಕ್ತಿ ಪ್ರತ್ಯಯಗಳನ್ನು ಸಂಸ್ಕೃತದ ಹಾಗೆ ಪ್ರಥಮಾ (ಮೊದಲನೆಯದು), ದ್ವಿತೀಯಾ (ಎರಡನೆಯದು), ತೃತೀಯಾ (ಮೂರನೆಯದು) ಇತ್ಯಾದಿಯಾಗಿ ಹೆಸರಿಸುವ ಬದಲು, ಆ ಪ್ರತ್ಯಯಗಳ ಅರ್ಥವನ್ನು ಸ್ಪಷ್ಟಪಡಿಸುವ ಹಾಗೆ ಬಾಧಿತ (ಅನ್), ಸುರು (ಇನ್), ಕೊನೆ (ಗೆ) ಮತ್ತು ಜಾಗ (ಒಳ್) ಎಂಬುದಾಗಿ ಹೆಸರಿಸುವುದೇ ಒಳ್ಳೆಯದು.

## ೮.೭ ಹಳೆಗನ್ನಡ ವೈಯಾಕರಣಿಗಳ ಸಮಸ್ಯೆಗಳು

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ವಿಭಕ್ತಿ ಪ್ರತ್ಯಯಗಳ ಬಳಕೆಯಲ್ಲಿ, ಮೇಲೆ ಸೂಚಿಸಿದ ಹಾಗೆ, ಹಲವು ಮೂಲಭೂತವಾದ ವ್ಯತ್ಯಾಸಗಳಿವೆ. ಹಾಗಾಗಿ, ಸಂಸ್ಕೃತ ವಿಭಕ್ತಿಗಳ ಬಳಕೆಯಲ್ಲಿ ಕಾಣಿಸುವ ವ್ಯಾಕರಣ ನಿಯಮಗಳನ್ನು ಹಾಗೆಯೇ ಹಳೆಗನ್ನಡಕ್ಕೆ

ಅಳವಡಿಸಿಕೊಳ್ಳಲು ಸಾಧ್ಯವಾಗದು. ಹೀಗೆ ಮಾಡಲು ಪ್ರಯತ್ನಿಸಿದುದರಿಂದಾಗಿ, ಹಳೆಗನ್ನಡ ವೈಯಾಕರಣಿಗಳು ಹಲವು ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಗಿದೆ, ಮತ್ತು ಅವರು ರಚಿಸಿದ ವ್ಯಾಕರಣಗಳು ಅನವಶ್ಯಕವಾಗಿ ಬಹಳ ಕ್ಲಿಷ್ಟವಾಗಿವೆ.

ಸಂಸ್ಕೃತದ ಹಾಗೆ ಹಳೆಗನ್ನಡದಲ್ಲೂ ಏಳು ವಿಭಕ್ತಿಗಳನ್ನು ಕಾಣಲು ಇವರು ನಡೆಸಿದ ಪ್ರಯತ್ನ ಹೇಗೆ ಅಸಫಲವಾಗಿದೆಯೆಂಬುದನ್ನು ಈಗಾಗಲೇ ಹಲವರು ವಿದ್ವಾಂಸರು ವಿವರಿಸಿದ್ದಾರೆ (ಕನ್ನಡ ಕೈಪಿಡಿ ೧೯೭೧:೩೮, ಕೃಷ್ಣಭಟ್ಟ ೧೯೯೨: ೧೬೪, ಸೀತಾರಾಮಯ್ಯ ೧೯೭೮:೧೪೭). ಇಲ್ಲೂ ವ್ಯಾಕರಣದ ಮೂಲತತ್ವಗಳ ಮಟ್ಟಿಗೆ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವಿರುವ ವ್ಯತ್ಯಾಸಗಳನ್ನು ಗಮನಿಸದಿರುವುದೇ ಈ ಸಮಸ್ಯೆಗಳಿಗೆ ಮುಖ್ಯ ಕಾರಣ ಎಂಬುದನ್ನು ಕೆಳಗಿನ ಪರಿಶೀಲನೆ ಸ್ಪಷ್ಟಪಡಿಸುತ್ತದೆ.

### ೮.೭.೧ ಪ್ರಥಮಾ ವಿಭಕ್ತಿ

ಸಂಸ್ಕೃತದ ಹಾಗೆ ಹಳೆಗನ್ನಡಕ್ಕೆ ಪ್ರಥಮಾ ವಿಭಕ್ತಿಯ ಅವಶ್ಯಕತೆ ಯಾಕೆ ಇಲ್ಲ ಎಂಬುದನ್ನು ಮೇಲೆ (೮.೨)ರಲ್ಲಿ ವಿವರಿಸಲಾಗಿದೆ. ಹಳೆಗನ್ನಡದ ವೈಯಾಕರಣಿಗಳು ಸಂಸ್ಕೃತದ ಹಾಗೆ ಹಳೆಗನ್ನಡಕ್ಕೂ ಪ್ರಥಮಾ ವಿಭಕ್ತಿ ಬೇಕಾಗಬಹುದು ಎಂದು ಭಾವಿಸಿ, ಅದಕ್ಕಾಗಿ ಮ್ ಎಂಬ ಪ್ರತ್ಯಯವೊಂದನ್ನು ಕಲ್ಪಿಸಿಕೊಂಡಿದ್ದಾರೆ.

ಆದರೆ, ಈ ಕಲ್ಪನೆಯನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಅವರು ಹಲವು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಅಕಾರಾಂತವಲ್ಲದ ಪುಲ್, ಬಳ್ಳಿ, ಎರಲೆ ಮೊದಲಾದ ನಾಮಪದಗಳೊಂದಿಗೆ ಮಕಾರ ಬಾರದಿರುವುದು ಒಂದು ಸಮಸ್ಯೆಯಾದರೆ, ಅಕಾರಾಂತ ಪದಗಳ ಮಕಾರ ದ್ವಿತೀಯಾ ವಿಭಕ್ತಿಯಲ್ಲೂ ಉಳಿದುಕೊಳ್ಳುವುದು (ಬೆಟ್ಟಮಂ, ಆಟಮಂ) ಇನ್ನೊಂದು ಸಮಸ್ಯೆ.

ಅಕಾರಾಂತ ಪುಲ್ಲಿಂಗ ಪದಗಳಿಗೆ (ಮತ್ತು ಮರ, ಅಕ್ಕ, ಪೊಲ, ನೆಲ ಮೊದಲಾದ ಬೇರೆ ಕೆಲವು ಅಕಾರಾಂತ ಪದಗಳಿಗೆ) ಸ್ವರ ಪರವಾದಾಗ ಈ ಮಕಾರ ನಕಾರವಾಗುವುದು (ರಾಮನುಂ, ಅಕ್ಕನುಂ, ನೆಲನುಂ), ಮತ್ತು ಈ ನಕಾರ ಇತರ ಸ್ವರದಲ್ಲಿ ಸುರುವಾಗುವ ವಿಭಕ್ತಿ ಪ್ರತ್ಯಯಗಳು ಸೇರಿದಾಗಲೂ ಹಾಗೆಯೇ ಉಳಿಯುವುದು (ಮರನಂ, ರಾಮನಿಂ, ರಾಮನೊಳ್) ಮತ್ತೊಂದು ಸಮಸ್ಯೆ. ಇಂತಹ ಹಲವು ಸಮಸ್ಯೆಗಳು ಅನವಶ್ಯಕವಾದ ಈ ಕಲ್ಪನೆಯಿಂದಾಗಿ ಅವರ ವ್ಯಾಕರಣಗಳಲ್ಲಿ ಉದ್ಭವಿಸಿವೆ (೭.೩.೨ ನೋಡಿ).

### ೮.೭.೨ ತೃತೀಯೆ ಮತ್ತು ಚತುರ್ಥಿ

ತೃತೀಯೆಯೇ ಮೊದಲಾದ ಸಂಸ್ಕೃತದ ಇತರ ವಿಭಕ್ತಿಗಳಿಗೆ ಸಮನಾದ ವಿಭಕ್ತಿಗಳನ್ನು ಹಳೆಗನ್ನಡದಲ್ಲಿ ಕಾಣಲು ಇವರು ನಡೆಸಿದ ಪ್ರಯತ್ನಗಳೂ ಇಂತಹವೇ ಸಮಸ್ಯೆಗಳಿಗೆ ಕಾರಣಗಳಾಗಿವೆ.

ಉದಾಹರಣೆಗಾಗಿ, ಹಳೆಗನ್ನಡದ ಇಂ ಪ್ರತ್ಯಯ ಸಂಸ್ಕೃತದ ತೃತೀಯೆಗೆ ಸಮನಾದುದೆಂದು ಈ ವೈಯಾಕರಣಿಗಳು ಭಾವಿಸಿದ್ದಾರೆ. ಆದರೆ, ನಿಜಕ್ಕೂ ಈ ಪ್ರತ್ಯಯ ಸಂಸ್ಕೃತದ ತೃತೀಯೆಗಿಂತಲೂ ಪಂಚಮಿಗೆ ಹತ್ತಿರವಾಗಿದೆ (ಕೃಷ್ಣಭಟ್ಟ ೧೯೯೨:೧೬೪ ನೋಡಿ).

ಸಂಸ್ಕೃತದ ತೃತೀಯಾ ವಿಭಕ್ತಿಗೆ ಸಹಯೋಗವೇ ಪ್ರಾಮುಖ್ಯವಾದ ಅರ್ಥ. ಇದಕ್ಕೆ ವಿರುದ್ಧವಾದ ವಿಯೋಗಾರ್ಥವನ್ನು ಪಂಚಮೀ ವಿಭಕ್ತಿ ಸೂಚಿಸುತ್ತದೆ. ಈ ವ್ಯತ್ಯಾಸವನ್ನು ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು.

(೧೭ಕ) ರಾಮೋ ದೇವೇಭಿರಾಗಮತ್
'ರಾಮನು ದೇವತೆಗಳೊಂದಿಗೆ ಬಂದ'

(೧೭ಖ) ಗ್ರಾಮಾದಾಗಚ್ಛತಿ
'ಗ್ರಾಮದಿಂದ ಬರುತ್ತಾನೆ'

(೧೭ಕ)ದಲ್ಲಿ ರಾಮನೊಂದಿಗೆ ದೇವತೆಗಳ ಸಹಯೋಗವಿದೆಯಾದ ಕಾರಣ (ಎಲ್ಲರೂ ಒಟ್ಟಿಗೆ ಬಂದಿರುವರಾದ ಕಾರಣ), ದೇವೇಭಿಃ ಎಂಬುದಾಗಿ ತೃತೀಯಾ ವಿಭಕ್ತಿರೂಪದ ಬಳಕೆಯಾಗಿದೆ; ಆದರೆ, (೧೭ಖ)ದಲ್ಲಿ ಬರುವ ವ್ಯಕ್ತಿಗೂ ಮತ್ತು ಗ್ರಾಮಕ್ಕೂ ನಡುವೆ ವಿಯೋಗವಾಗಿದೆಯಾದ ಕಾರಣ, ಗ್ರಾಮಾತ್ ಎಂಬುದಾಗಿ ಪಂಚಮೀ ವಿಭಕ್ತಿ ರೂಪದ ಬಳಕೆಯಾಗಿದೆ.

ಹಳೆಗನ್ನಡದ ಇಂ ಪ್ರತ್ಯಯ ಮುಖ್ಯವಾಗಿ ವಿಯೋಗವನ್ನು ಸೂಚಿಸುತ್ತದೆಯಲ್ಲದೆ ಸಹಯೋಗವನ್ನಲ್ಲ. ಅದು ಒಂದು ಚಲನೆಯ ಸುರುವನ್ನು ಸೂಚಿಸುವ ಕಾರಣ, ವಿಯೋಗವೇ ಅದರ ಪ್ರಾಮುಖ್ಯವಾದ ಅರ್ಥ. ಇದಕ್ಕೆ ವಿರುದ್ಧವಾದ ಸಹಯೋಗಾರ್ಥವನ್ನು ಹಳೆಗನ್ನಡದಲ್ಲಿ ಗೆ ಪ್ರತ್ಯಯ (ಇಲ್ಲವೇ ಜಾಗವನ್ನು ಸೂಚಿಸುವ ಒಳ್ ಪ್ರತ್ಯಯ) ಸೂಚಿಸುತ್ತದೆ. ಈ ಪ್ರತ್ಯಯಗಳ ವಿಸ್ತೃತ ಬಳಕೆಗಳಲ್ಲೂ ಈ ವ್ಯತ್ಯಾಸವನ್ನು ಕಾಣಲು ಸಾಧ್ಯವಿದೆ.

ಉದಾಹರಣೆಗಾಗಿ, ಹಳೆಗನ್ನಡದಲ್ಲಿ ಇಂ ಪ್ರತ್ಯಯ ಒಂದು ಘಟನೆಗೆ ಕಾರಣವನ್ನು ಸೂಚಿಸುವುದಾದರೆ, ಗೆ ಪ್ರತ್ಯಯ ಉದ್ದೇಶವನ್ನು ಸೂಚಿಸುತ್ತದೆ. ಕಾರಣದಿಂದ ಘಟನೆ ಸುರುವಾಗುತ್ತದೆ, ಮತ್ತು ಅನಂತರ ಉದ್ದೇಶವನ್ನು ತಲಪುತ್ತದೆ ಎಂಬುದಾಗಿ ಇಲ್ಲಿ ಚಲನೆಯ ಎರಡು ಅಂಶಗಳನ್ನು ಕಾಣಲು ಸಾಧ್ಯವಿದೆ.

(೧೮ಕ) ಪುತ್ರಸ್ನೇಹದಿಂದೆ ಅತಿ ಪ್ರಳಾಪಂ ಗೆಯ್ವ ಅಂಬಾಲೆ
'ಮಗನ ಮೇಲಿನ ಪ್ರೀತಿಯಿಂದ ಬಹಳ ಗೋಳಾಡುತ್ತಿದ್ದ ಅಂಬಾಲೆ'

(೧೮ಖ) ಮದೀಯ ಪಿತನ್ ತಪಕ್ಕೆ ಪೋದನ್
'ನನ್ನ ತಂದೆ ತಪಸ್ಸಿಗೆ ಹೋದ'

(೧೮ಕ)ದಲ್ಲಿ ಗೋಳಾಡುವುದಕ್ಕೆ ಪುತ್ರಸ್ನೇಹ ಕಾರಣವಾದ ಕಾರಣ, ಆ ನಾಮಪದದೊಂದಿಗೆ ಇಂದೆ ಪ್ರತ್ಯಯ ಬಂದಿದೆ, ಮತ್ತು (೧೮ಖ)ದಲ್ಲಿ ಹೋಗುವ ಕೆಲಸಕ್ಕೆ ತಪಸ್ಸು ಉದ್ದೇಶವಾದ ಕಾರಣ, ಆ ನಾಮಪದದೊಂದಿಗೆ ಗೆ (ಕ್ಕೆ) ಪ್ರತ್ಯಯ ಬಂದಿದೆ.

ಸಂಸ್ಕೃತದಲ್ಲಿ ಕರಣವನ್ನು ಸಹಯೋಗಾರ್ಥದ ವಿಸ್ತೃತ ಅರ್ಥವೆಂಬುದಾಗಿ ಪರಿಗಣಿಸಲಾಗಿದ್ದು, ಅದಕ್ಕಾಗಿ ತೃತೀಯಾ ವಿಭಕ್ತಿಯನ್ನು ಬಳಸಲಾಗುತ್ತದೆ. ಉದಾಹರಣೆಗಾಗಿ, ಕೆಳಗೆ (೧೯)ನೇ ವಾಕ್ಯದಲ್ಲಿ ಜಿಂಕೆಯನ್ನು ಹೊಡೆಯುವ ರಾಜನು ಅದಕ್ಕಾಗಿ ಬಾಣವನ್ನು ಬಳಸಿರುವನಾದ ಕಾರಣ, ಅಲ್ಲಿ ಆತನೊಂದಿಗೆ ಬಾಣದ ಸಹಯೋಗವಿದೆ.

(೧೯) ನರೇಶ್ವರಃ ಶರೇಣ ಮೃಗಂ ಅವಿಧ್ಯತ್
'ರಾಜನು ಬಾಣದಿಂದ ಜಿಂಕೆಯನ್ನು ಹೊಡೆದನು'

ಹಳೆಗನ್ನಡದಲ್ಲಿ ಕರಣವನ್ನು ಸೂಚಿಸಲು ಇಂ ಪ್ರತ್ಯಯ ಬಳಕೆಯಾಗುವುದೇನೋ ನಿಜ; ಆದರೆ ಇಲ್ಲಿ ಕರಣವನ್ನು ವಿಯೋಗದ ವಿಸ್ತೃತ ಅರ್ಥವೆಂಬುದಾಗಿ ಪರಿಗಣಿಸಿರುವ ಹಾಗೆ

ಕಾಣಿಸುತ್ತದೆ. ಕಡಿಯುವ ಘಟನೆ ಕೊಡಲಿಯಿಂದ ಸುರುವಾಗುತ್ತದೆ ಎಂಬ ವಿಷಯ ಈ ವಿಸ್ತೃತ ಬಳಕೆಗೆ ಆಧಾರವಿರಬೇಕು.

ಹಳೆಗನ್ನಡದಲ್ಲಿ ಇಂ ಪ್ರತ್ಯಯವನ್ನು ಮಾತ್ರವಲ್ಲದೆ ಒಳ್ ಪ್ರತ್ಯಯವನ್ನೂ ಕರಣವನ್ನು ಸೂಚಿಸುವುದಕ್ಕಾಗಿ ಬಳಸಲಾಗುತ್ತದೆ. ಇಲ್ಲಿ ಕರಣವನ್ನು ಘಟನೆ ಸುರುವಾಗುವ ಜಾಗ (ವಿಯೋಗ ಸಂಬಂಧ) ಎಂಬುದಕ್ಕಿಂತಲೂ ಬರೀ ಜಾಗ (ಅಧಿಕರಣ ಸಂಬಂಧ) ಎಂಬುದಾಗಿ ಪರಿಗಣಿಸಿರುವ ಹಾಗೆ ಕಾಣಿಸುತ್ತದೆ. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ವಾಕ್ಯಗಳನ್ನು ಗಮನಿಸಬಹುದು:

(೨೦ಕ) ಅರಲಂಬುಗಳಿಂದೆ ಮರುಳ್ಚಿ (೨.೪೦)
'ಪುಷ್ಪಬಾಣಗಳಿಂದ ಮೋಹಗೊಳಿಸಿ'

(೨೦ಖ) ಪಿಡಿದ ನೆಯ್ದಿಲೊಳ್ ತುಂಬಿಯನ್ ಒಯ್ಯನೆ ಸೋವುತುಂ (೨.೧೭)
'(ಕೈಯಲ್ಲಿ) ಹಿಡಿದ ನೆಯ್ದಿಲೆ ಹೂವಿನಿಂದ ತುಂಬಿಯನ್ನು ಮೆಲ್ಲಗೆ ಓಡಿಸುತ್ತ'

(೨೦ಕ)ದಲ್ಲಿ ಮೋಹಗೊಳಿಸುವ ಕೆಲಸಕ್ಕಾಗಿ ಬಳಸಿದ ಕರಣವನ್ನು (ಅರಲಂಬುಗಳ್ ಎಂಬುದನ್ನು) ಇಂ(ದೆ) ಪ್ರತ್ಯಯದ ಮೂಲಕ ಸೂಚಿಸಲಾಗಿದೆ, ಮತ್ತು (೨೦ಖ)ದಲ್ಲಿ ಓಡಿಸುವ ಕೆಲಸಕ್ಕಾಗಿ ಬಳಸಿದ ಕರಣವನ್ನು (ನೆಯ್ದಿಲ ಎಂಬುದನ್ನು) ಒಳ್ ಪ್ರತ್ಯಯದ ಮೂಲಕ ಸೂಚಿಸಲಾಗಿದೆ.

### ೮.೭.೩ ಪಂಚಮೀ ವಿಭಕ್ತಿ

ಹಳೆಗನ್ನಡದ ಇಂ ಪ್ರತ್ಯಯವನ್ನು ತೃತೀಯಾ ಎಂದು ಪರಿಗಣಿಸಿದ ಕಾರಣ, ಪಂಚಮೀ ವಿಭಕ್ತಿ ಇಲ್ಲವಾಗಿದೆ. ಈ ಜಾಗವನ್ನು ತುಂಬಿಸಲು ಕೇಶಿರಾಜನು ಅತ್ ಎಂಬುದನ್ನು ಕಲ್ಪಿಸಿಕೊಂಡಿದ್ದಾನೆ (ಸೂ. ೧೦೩). ಆದರೆ, ವೆಂಕಟಾಚಲ ಶಾಸ್ತ್ರಿಗಳು (೧೯೯೪:೫೫) ವಿವರಿಸಿದ ಹಾಗೆ, ಈ ಪ್ರತ್ಯಯವನ್ನು ಬಳಸಬೇಕಿದ್ದಲ್ಲಿ, ಅದರೊಂದಿಗೆ ದಿಕ್ಕನ್ನು ಸೂಚಿಸುವ ಅಣ್ ಎಂಬುದನ್ನು ಮತ್ತು ತೃತೀಯಾ ವಿಭಕ್ತಿಯ ಇಂ ಪ್ರತ್ಯಯವನ್ನೂ ಬಳಸಬೇಕಾಗುತ್ತದೆ. ಇದಲ್ಲದೆ, ಈ ಅತ್ತಣಿಂ ಬರುವಲ್ಲೆಲ್ಲ ಬರೇ ಇಂ ಎಂಬುದನ್ನೂ ಬಳಸಲು ಸಾಧ್ಯವಿದೆ.

ಹಳೆಗನ್ನಡ ವೈಯಾಕರಣಿಗಳು ಸಂಸ್ಕೃತದ ಮಾದರಿಯನ್ನು ಉಳಿಸಿಕೊಳ್ಳುವುದಕ್ಕಾಗಿ ಹಳೆಗನ್ನಡಕ್ಕೆ ಕಲ್ಪಿಸಿಕೊಂಡಿರುವ ಈ ಪಂಚಮೀ ವಿಭಕ್ತಿ ಪ್ರತ್ಯಯ ಎಂತಹ ಸಮಸ್ಯೆಗಳಿಗೆಲ್ಲ ಕಾರಣವಾಗಿದೆ ಎಂಬುದನ್ನು ಈಗಾಗಲೇ ಹಲವರು ವಿದ್ವಾಂಸರು ವಿವರಿಸಿದ್ದಾರೆ (ಕನ್ನಡ ಕೈಪಿಡಿ ೧೯೭೧:೩೯, ಕೃಷ್ಣ ಭಟ್ಟ ೧೯೯೨:೧೬೪, ಇತ್ಯಾದಿ).

ಹಳೆಗನ್ನಡದ ಇಂ ಪ್ರತ್ಯಯ ನಿಜಕ್ಕೂ ಒಂದೇ ರೂಪದ ತೃತೀಯಾ ಮತ್ತು ಪಂಚಮಿಗಳೆಂಬ ಎರಡು ಬೇರೆ ಬೇರೆ ಪ್ರತ್ಯಯಗಳು ಎಂಬುದಾಗಿ ಇತ್ತೀಚೆಗೆ ರಂಗನಾಥ ಶರ್ಮರು (೨೦೦೨:೧೧೩) ವಾದಿಸಿದ್ದಾರೆ. ಇದಕ್ಕೆ ಆಧಾರವಾಗಿ ಅವರು ಕೆಳಗೆ ಕೊಟ್ಟಿರುವ ಕವಿರಾಜಮಾರ್ಗದ ವಾಕ್ಯವನ್ನು ಉದಾಹರಿಸಿದ್ದಾರೆ:

(೨೧) ತನ್ನರೇಂದ್ರನಿಂ ಧರಣಿ ಸನಾಥೆ

ಈ ವಾಕ್ಯ ಕರ್ಮಣಿ ಪ್ರಯೋಗದಲ್ಲಿದೆಯೆಂದು, ಮತ್ತು ಆದಳ್ ಕ್ರಿಯಾಪದವನ್ನು ಈ ವಾಕ್ಯದಲ್ಲಿ ಅಧ್ಯಾಹರಿಸಿಕೊಳ್ಳಬೇಕೆಂದೂ ಅವರು ಸೂಚಿಸಿದ್ದಾರೆ. ಈ ಸೂಚನೆಯ ಆಧಾರದ ಮೇಲೆ, ಅವರು ಈ ವಾಕ್ಯದಲ್ಲಿ ನರೇಂದ್ರ ಪದ ಕರ್ತೃ ಎಂಬುದಾಗಿಯೂ, ಮತ್ತು ಅದು ಇಂ

ಪ್ರತ್ಯಯದೊಂದಿಗೆ ಬಂದಿದೆಯಾದ ಕಾರಣ, ಇಂ ಎಂಬುದು ಕರ್ತೃವನ್ನು ಸೂಚಿಸುವ ತೃತೀಯಾ ವಿಭಕ್ತಿ ಪ್ರತ್ಯಯ ಎಂಬುದಾಗಿಯೂ ವಾದಿಸಿದ್ದಾರೆ.

ಆದರೆ, (೨೧)ರಲ್ಲಿ ಕರ್ಮಣಿಯ ಅಲ್ಪಡು ಬಂದಿಲ್ಲ. ಆದಳ್ ಕ್ರಿಯಾಪದಕ್ಕೆ ಅದರ ಅಳ್ ಪ್ರತ್ಯಯ ಸೂಚಿಸುವ ಧರಣಿ ಪದ ಕರ್ತೃವಾಗಬಲ್ಲುದಲ್ಲದೆ, ನರೇಂದ್ರ ಪದ ಕರ್ತೃವಾಗುವುದು ಕಷ್ಟ. ಅದನ್ನು ಕರ್ತೃವಾಗಿ ಮಾಡಬೇಕಾದಲ್ಲಿ, ಬೇರೆ ಯಾವುದಾದರೂ ಕ್ರಿಯಾಪದವನ್ನು ಊಹಿಸಿಕೊಳ್ಳಬೇಕಾಗುತ್ತದೆ. ಆದರೆ ಈ ರೀತಿ ಸಾಧಿಸಿದ 'ವಿಭಕ್ತಿ ಪ್ರತ್ಯಯ' ಹಳೆಗನ್ನಡದ ವಾಕ್ಯರಚನೆಯ ಮೇಲೆ ಅವಲಂಬಿಸಿರುವ ವಿಭಕ್ತಿ ಪ್ರತ್ಯಯವಾಗಲಾರದು.

### ೮.೭.೪ ಷಷ್ಠೀ ವಿಭಕ್ತಿ

ಸಂಸ್ಕೃತದ ಮಾದರಿಯನ್ನನುಸರಿಸಿ, ಹಳೆಗನ್ನಡದಲ್ಲೂ ಷಷ್ಠೀ ವಿಭಕ್ತಿಯಿದೆ ಎಂಬುದಾಗಿ ಹಳೆಗನ್ನಡದ ವೈಯಾಕರಣಿಗಳು ಹೇಳಿದ್ದಾರೆ (ಕೇಶಿರಾಜ ಸೂ. ೧೦೩). ಆದರೆ ಕೇಶಿರಾಜನು ಈ ಪ್ರತ್ಯಯಕ್ಕೆ ಕೊಟ್ಟಿರುವ ಅದು ಮರದ ಪಣ್ ಎಂಬ ಉದಾಹರಣೆ, ಮತ್ತು ೧೪೩ನೇ ಸೂತ್ರದ ಕೆಳಗೆ ಕೊಟ್ಟಿರುವ ಬೇರೆ ಹಲವು ಉದಾಹರಣೆಗಳು ಎರಡು ನಾಮಪದಗಳ ನಡುವಿನ ಸಂಬಂಧವನ್ನು ಮಾತ್ರವೇ ಸೂಚಿಸುತ್ತವೆಯಲ್ಲದೆ, ಕ್ರಿಯಾಪದ ಮತ್ತು ನಾಮಪದಗಳ ನಡುವಿರುವ ಸಂಬಂಧವನ್ನು ಸೂಚಿಸುವುದಿಲ್ಲ. ಹಾಗಾಗಿ, ಇದನ್ನು ವಿಭಕ್ತಿ ಪ್ರತ್ಯಯವೆಂದು ಕರೆಯುವುದು ಸರಿಯಲ್ಲ.

ಸಂಸ್ಕೃತದಲ್ಲಿ ಎರಡು ನಾಮಪದಗಳ ನಡುವಿನ ಸಂಬಂಧವನ್ನು ಸೂಚಿಸುವುದಕ್ಕಾಗಿ ಬಳಕೆಯಾಗುವ ಅಸ್, ಓಸ್, ಮತ್ತು ಆಮ್ ಎಂಬ (ಮೂರು ವಚನಗಳಲ್ಲಿ ಬರುವ) ಪ್ರತ್ಯಯಗಳನ್ನು ವಿಭಕ್ತಿ ಪ್ರತ್ಯಯಗಳ ಜಾಗದಲ್ಲೂ (ಮುಖ್ಯವಾಗಿ ಚತುರ್ಥೀ ವಿಭಕ್ತಿ ಪ್ರತ್ಯಯದ ಜಾಗದಲ್ಲಿ) ಬಳಸಲು ಸಾಧ್ಯವಿದೆ. ಹಾಗಾಗಿ, ಸಂಸ್ಕೃತ ವ್ಯಾಕರಣಗಳಲ್ಲಿ ಇವನ್ನು ವಿಭಕ್ತಿ ಪ್ರತ್ಯಯಗಳೆಂದು ಕರೆದಿರುವುದರಲ್ಲಿ ಔಚಿತ್ಯವಿದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಸಂಸ್ಕೃತ ವಾಕ್ಯಗಳನ್ನು ಗಮನಿಸಬಹುದು:

(೨೨ಕ) ಮಾತುಃ ಸ್ಮರತಿ
'(ಆತ) ತಾಯನ್ನು ನೆನೆಯುತ್ತಾನೆ'

(೨೨ಖ) ಭೀಮಸ್ಯ ಅನುಕರಿಷ್ಯಾಮಿ
'(ನಾನು) ಭೀಮನನ್ನು ಅನುಕರಿಸುತ್ತೇನೆ'

(೨೨ಗ) ಮಮ ಪ್ರೀತಿಃ ಸಂಜಾತಃ
'ನನಗೆ (ಅವಳಲ್ಲಿ) ಪ್ರೀತಿಯುಂಟಾಯಿತು'

(೨೨ಘ) ಕಿಮಸ್ಯ ಭಿಕ್ಷೋಃ ಕ್ರಿಯತಾಂ
'ಈ ಬಿಕ್ಷುಕನಿಗೆ ಏನು ಮಾಡೋಣ?'

(೨೨ಕ)ದಲ್ಲಿ ಯಾವ ವ್ಯಕ್ತಿಯನ್ನು ನೆನೆಯಲಾಗುತ್ತಿದೆಯೋ ಆ ವ್ಯಕ್ತಿಯನ್ನು, ಮತ್ತು (೨೨ಖ)ದಲ್ಲಿ ಯಾವ ವ್ಯಕ್ತಿಯನ್ನು ಅನುಕರಿಸಲಾಗುತ್ತಿದೆಯೋ ಆ ವ್ಯಕ್ತಿಯನ್ನು, ಷಷ್ಠೀ ವಿಭಕ್ತಿಯ ಮೂಲಕ ಸೂಚಿಸಲಾಗಿದೆ; (೨೨ಗ)ದಲ್ಲಿ ಆಡುಗನಿಗೆ ಯಾರಲ್ಲಿ ಪ್ರೀತಿಯುಂಟಾಗಿದೆಯೋ ಆ ವ್ಯಕ್ತಿಯನ್ನೂ ಷಷ್ಠಿಯಿಂದಲೇ ಸೂಚಿಸಲಾಗಿದೆ.

ಆದರೆ, ಹಳೆಗನ್ನಡದಲ್ಲಿ ಅನ್ ಮತ್ತು ಗೆ ಪ್ರತ್ಯಯಗಳೇ ಇಂತಹ ಸಂದರ್ಭಗಳಲ್ಲಿ ಬಳಕೆಯಾಗುತ್ತವೆಯಲ್ಲದೆ ಷಷ್ಠೀ ವಿಭಕ್ತಿ ಪ್ರತ್ಯಯ ಬಳಕೆಯಾಗುವುದಿಲ್ಲ.

ಇದಲ್ಲದೆ, ಹಳೆಗನ್ನಡದಲ್ಲಿ ಎರಡು ನಾಮಪದಗಳ ನಡುವಿನ ಸಂಬಂಧವನ್ನು ಸೂಚಿಸುವ ಅ ಪ್ರತ್ಯಯ ಸಂಸ್ಕೃತದ ಅಸ್, ಓಸ್, ಮತ್ತು ಆಮ್ ಎಂಬ ಷಷ್ಠೀ ವಿಭಕ್ತಿ ಪ್ರತ್ಯಯಗಳಿಂದ, ಕೆಳಗೆ ಸೂಚಿಸಿದ ಹಾಗೆ, ಬೇರೆ ಕೆಲವು ವಿಷಯಗಳಲ್ಲೂ ಭಿನ್ನವಾಗಿದೆ.

(೧) ಹಳೆಗನ್ನಡದಲ್ಲಿ ನಾಮಪದ ಮತ್ತು ಗುಣಪದಗಳೆಂಬುದಾಗಿ ಎರಡು ತೀರ ಭಿನ್ನವಾದ ಪದವರ್ಗಗಳಿವೆ ಎಂಬುದನ್ನು ನಾವು (ಳ.೨)ರಲ್ಲಿ ನೋಡಿರುವೆವು. ಈ ಕಾರಣಕ್ಕಾಗಿ, ಹಳೆಗನ್ನಡದಲ್ಲಿ ಒಂದು ನಾಮಪದವನ್ನು ಇಲ್ಲವೇ ಕ್ರಿಯಾಪದವನ್ನು ಇನ್ನೊಂದು ನಾಮಪದದೊಂದಿಗೆ ಸಂಬಂಧಿಸಬೇಕಿದ್ದಲ್ಲಿ (ಗುಣಪದದ ಜಾಗದಲ್ಲಿ ಬಳಸಬೇಕಿದ್ದಲ್ಲಿ), ಅವನ್ನು ಗುಣರೂಪಕ್ಕೆ ಬದಲಾಯಿಸಿಕೊಳ್ಳಬೇಕಾಗುತ್ತದೆ.

ಹಳೆಗನ್ನಡದಲ್ಲಿ ಮಕ್ಕಳ, ಅರಸನ, ಮನೆಯ, ಮರದ, ಮೊದಲಾದವುಗಳು ಇಂತಹ ನಾಮಪದಗಳ ಗುಣರೂಪಗಳಲ್ಲದೆ ವಿಭಕ್ತಿರೂಪಗಳಲ್ಲ. ಅವನ್ನು ಗುಣಪದಗಳ ಹಾಗೆ ನಾಮಪದಗಳೊಂದಿಗೆ ನಾಮಪದಕಂತೆಗಳಲ್ಲಿ ಬಳಸಲು ಸಾಧ್ಯವಿದೆಯಲ್ಲದೆ, ನೇರವಾಗಿ ಕ್ರಿಯಾಪದಗಳೊಂದಿಗೆ ಬಳಸಲು ಸಾಧ್ಯವಾಗದು. ಈ ವಿಷಯದಲ್ಲಿ ಅವು ಕ್ರಿಯಾಪದಗಳ ಗುಣರೂಪಗಳನ್ನು (ಕೃದಂತಗಳನ್ನು) ಹೋಲುತ್ತವೆ.

| ಕೃದಂತರೂಪಗಳು | ಸಂಬಂಧಿಸುವ ರೂಪಗಳು |
|---|---|
| ಕುಕಿಲ್ವ ಕೋಗಿಲೆ | ತುಪ್ಪದ ಕಂಪು |
| ನಿಮಿರ್ದ ಕುರುಳ್ಗಳ್ | ಮಕ್ಕಳ ಮೆಯ್ |
| ಕೆಂಪೇಱಿದ ಕಣ್ಗಳ್ | ಅರಸನ ಅಮ್ಬು |
| ಪಳಂಚಿದ ಬಣ್ಣಂಗಳ್ | ಕೋಂಟೆಯ ಚೆಲ್ವು |

ಆದರೆ ಸಂಸ್ಕೃತದಲ್ಲಿ ಗುಣಪದಗಳು ಮತ್ತು ನಾಮಪದಗಳು ಒಂದೇ ಪದವರ್ಗದಲ್ಲಿ ಬರುತ್ತವೆ. ಹಾಗಾಗಿ, ಅದರ ನಾಮಪದ ಮತ್ತು ಕ್ರಿಯಾಪದಗಳಿಗೆ ಹಳೆಗನ್ನಡದಲ್ಲಿರುವ ಹಾಗೆ ವಿಶಿಷ್ಟವಾದ ಗುಣರೂಪಗಳಿಲ್ಲ. ಸಂಸ್ಕೃತದ ಕೃದಂತಗಳು ನಾಮಪದಗಳೇ; ಇದಲ್ಲದೆ, ಅದರ ನಾಮಪದಗಳ ಸಂಬಂಧಿಸುವ (ಷಷ್ಠೀ ವಿಭಕ್ತಿಯ) ರೂಪಗಳನ್ನು ಬೇರೆ ನಾಮಪದಗಳೊಂದಿಗೆ ಮಾತ್ರವಲ್ಲದೆ, ನೇರವಾಗಿ ಕ್ರಿಯಾಪದಗಳೊಂದಿಗೂ ಸಂಬಂಧಿಸಲು ಸಾಧ್ಯವಿದೆ (ಅ.೭.೪ ನೋಡಿ).

(೨) ಹಳೆಗನ್ನಡದಲ್ಲಿ ಗುಣಪದಗಳ ಹಾಗೆ, ಮತ್ತು ಕ್ರಿಯಾಪದಗಳ ಗುಣರೂಪಗಳ ಹಾಗೆ, ನಾಮಪದಗಳ ಗುಣರೂಪಗಳನ್ನೂ ವಿಭಕ್ತಿ ಪ್ರತ್ಯಯಗಳೊಂದಿಗೆ ಬಳಸಲು ಸಾಧ್ಯವಿದೆ; ಆದರೆ, ಇದಕ್ಕಾಗಿ ಗುಣಪದಗಳ ಹಾಗೆ, ಮತ್ತು ಕ್ರಿಯಾಪದಗಳ ಗುಣರೂಪಗಳ ಹಾಗೆ, ನಾಮಪದಗಳ ಗುಣರೂಪಗಳಿಗೂ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸಿ ಅವನ್ನು ನಾಮರೂಪಕ್ಕೆ ಬದಲಾಯಿಸಿಕೊಳ್ಳುವ ಅವಶ್ಯಕತೆಯಿದೆ.

| ಕ್ರಿಯಾಪದ | ನಾಮಪದ |
|---|---|
| ನಗುವರನ್ ಅಱಿದಳ್ | ಬರ್ದಿನಂಗೆ ಸೆಜ್ಜೆಪು ಗೆಯ್ದರ್ |
| ಎಂದಳ್ಗೆ ಕರ್ಣನಿಂತೆಂದಂ | ರಥದನ್ ಅಶ್ವತ್ಥಾಮನ್ |
| ಕೂರದರ್ ಪೋದರ್ | ಮನೆಯನ್ ಬಂದನ್ |

ಮೊದಲನೆಯ ಕಾಲಂನಲ್ಲಿ ಕ್ರಿಯಾಪದಗಳ ಗುಣರೂಪಗಳನ್ನು ಮತ್ತು ಎರಡನೆಯ ಕಾಲಂನಲ್ಲಿ ನಾಮಪದಗಳ ಗುಣರೂಪ(ಷಷ್ಠೀರೂಪ)ಗಳನ್ನು ನಾಮರೂಪಕ್ಕೆ ಬದಲಾಯಿಸಿ, ಅನಂತರ ಅವನ್ನು ನಾಮಪದಗಳ ಜಾಗದಲ್ಲಿ ಬಳಸಲಾಗಿದೆ. ಉದಾಹರಣೆಗಾಗಿ, ಎಂದಳ್ಗೆ ಎಂಬುದರಲ್ಲಿ ಎನ್ ಕ್ರಿಯಾಪದದ ಗುಣರೂಪವಾದ ಎಂದ ಎಂಬುದಕ್ಕೆ ಅಳ್ ಲಿಂಗ-ವಚನ ಪ್ರತ್ಯಯವನ್ನು ಸೇರಿಸಿ ನಾಮರೂಪಕ್ಕೆ ಬದಲಾಯಿಸಲಾಗಿದೆ (ಎಂದಳ್ 'ಹೇಳಿದವಳು'), ಮತ್ತು ಅನಂತರ ಅದಕ್ಕೆ ಗೆ ವಿಭಕ್ತಿ ಪ್ರತ್ಯಯವನ್ನು ಸೇರಿಸಲಾಗಿದೆ.

ಇದೇ ರೀತಿಯಲ್ಲಿ ಬಿರ್ದಿನಂಗೆ ಎಂಬುದರಲ್ಲಿ ಬಿರ್ದು 'ಆತಿಥ್ಯ' ನಾಮಪದದ ಗುಣರೂಪವಾದ ಬಿರ್ದಿನ ಎಂಬುದಕ್ಕೆ ಅನ್ ಲಿಂಗ-ವಚನ ಪ್ರತ್ಯಯವನ್ನು ಸೇರಿಸಿ ನಾಮರೂಪಕ್ಕೆ ಬದಲಾಯಿಸಲಾಗಿದೆ (ಬಿರ್ದಿನನ್ 'ಆತಿಥ್ಯದವನು, ಅತಿಥಿ') ಮತ್ತು ಅನಂತರ ಅದಕ್ಕೆ ಗೆ ವಿಭಕ್ತಿ ಪ್ರತ್ಯಯವನ್ನು ಸೇರಿಸಲಾಗಿದೆ.

ಸಂಸ್ಕೃತದ ಷಷ್ಠೀ ವಿಭಕ್ತಿ ಪ್ರತ್ಯಯಕ್ಕೂ, ಹಳೆಗನ್ನಡದ ಅ ಪ್ರತ್ಯಯಕ್ಕೂ ನಡುವೆ ಇಂತಹ ಮೂಲಭೂತ ವ್ಯತ್ಯಾಸಗಳಿವೆಯಾದ ಕಾರಣ, ಸಂಸ್ಕೃತದ ಷಷ್ಠೀ ವಿಭಕ್ತಿ ಪ್ರತ್ಯಯದ ಹಾಗೆ ಹಳೆಗನ್ನಡದ ಅ ಪ್ರತ್ಯಯವನ್ನು ವಿಭಕ್ತಿ ಪ್ರತ್ಯಯವೆಂದು ಕರೆಯುವುದು ಸರಿಯಲ್ಲ.

ಇದಲ್ಲದೆ, ಹಳೆಗನ್ನಡದಲ್ಲೇನೇ ನಾಮಪದವನ್ನು ಕ್ರಿಯಾಪದದೊಂದಿಗೆ ಸಂಬಂಧಿಸುವ ಅನ್, ಇನ್, ಗೆ, ಮತ್ತು ಒಳ್ ಎಂಬ ವಿಭಕ್ತಿ ಪ್ರತ್ಯಯಗಳಿಗೂ, ನಾಮಪದವನ್ನು ಇನ್ನೊಂದು ನಾಮಪದದೊಂದಿಗೆ ಸಂಬಂಧಿಸುವ ಅ ಪ್ರತ್ಯಯಕ್ಕೂ ನಡುವೆ ಹಲವು ವ್ಯತ್ಯಾಸಗಳಿವೆ.

ಉದಾಹರಣೆಗಾಗಿ, ವಿಭಕ್ತಿ ಪ್ರತ್ಯಯಗಳೊಂದಿಗೆ ಬರುವ ನಾಮಪದಗಳಿಗೆ ಉಂ (ಅಂ) 'ಮತ್ತು' ಪ್ರತ್ಯಯವನ್ನು ಸೇರಿಸಿ ಹೇಳಲು ಸಾಧ್ಯವಿದೆ.

(೨೨ಕ) ಮೆಯ್ಯೊಳುಡಿದ ಅಂಬುಗಳುಮಂ
'ಶರೀರದೊಳಗೆ ಮುರಿದು ಹೋಗಿದ್ದ ಬಾಣಗಳನ್ನೂ'

(೨೨ಖ) ಕಾಲಿಂದೆಯುಂ ಕೈಯಿಂದೆಯುಂ ಘಟ್ಟಿಸಿದಂ
'ಕಾಲಿನಿಂದಲೂ ಕೈಯಿಂದಲೂ ಹೊಡೆದನು'

(೨೨ಗ) ಅರಸಂಗಂ ಅರಸಿಗಂ ಪುಟ್ಟಿದನೇ
'ಅರಸನಿಗೂ ಅರಸಿಗೂ ಹುಟ್ಟಿದನೇ?

(೨೨ಘ) ನೀರೊಳಂ ಕಿಚ್ಚಿನೊಳಂ ಪೊರಳ್ದು
'ನೀರಿನಲ್ಲೂ ಬೆಂಕಿಯಲ್ಲೂ ಹೊರಳಿ'

ಆದರೆ ಸಂಬಂಧಿಸುವ ಅ ಪ್ರತ್ಯಯದೊಂದಿಗೆ ಬರುವ ನಾಮಪದಗಳಿಗೆ ಈ ರೀತಿ ಉಂ (ಅಂ) ಪ್ರತ್ಯಯವನ್ನು ಸೇರಿಸಲು ಸಾಧ್ಯವಾಗದು (ಕೇಶಿರಾಜ ಸೂ. ೧೩೩ ನೋಡಿ). ಈ ವಿಷಯದಲ್ಲಿ ಸಂಬಂಧಿಸುವ ಅ ಪ್ರತ್ಯಯ ಕೃದಂತಗಳಲ್ಲಿ ಬರುವ ಅ ಪ್ರತ್ಯಯದ ಹಾಗೆ ವರ್ತಿಸುತ್ತದೆಯಲ್ಲದೆ, ವಿಭಕ್ತಿ ಪ್ರತ್ಯಯಗಳ ಹಾಗೆ ವರ್ತಿಸುವುದಿಲ್ಲ. ಗೆಲ್ದ, ಪಾಡುವ, ಅಜಿಯದ ಮೊದಲಾದ ಕೃದಂತ (ಗುಣರೂಪ)ಗಳೊಂದಿಗೂ ಉಂ ಪ್ರತ್ಯಯ ಬರಲಾರದು.

ಇವೆರಡಕ್ಕೂ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸಿ, ಅವನ್ನು ನಾಮರೂಪಕ್ಕೆ ಬದಲಾಯಿಸಿದಲ್ಲಿ ಮಾತ್ರ, ಅವುಗಳೊಂದಿಗೆ ಉಂ ಪ್ರತ್ಯಯವನ್ನು ಬಳಸಲು ಸಾಧ್ಯವಿದೆ ಎಂಬುದನ್ನು ಮೇಲೆ ನೋಡಿರುವೆವು.

ಇಲ್ಲಿ ನಾವು ಗಮನಿಸಬೇಕಾಗಿರುವ ಮುಖ್ಯವಾದ ವಿಷಯವೇನೆಂದರೆ, ಹಳೆಗನ್ನಡದಲ್ಲಿ ಕ್ರಿಯಾಪದಗಳ ಕೃದಂತರೂಪಗಳು ಮತ್ತು ನಾಮಪದಗಳ ಸಂಬಂಧಿಸುವ ರೂಪಗಳು ಪದಕಂತೆಗಳ ಅಂಗಗಳಾಗಿ ಬರಬಲ್ಲುವಲ್ಲದೆ, ನೇರವಾಗಿ ವಾಕ್ಯಗಳ ಅಂಗಗಳಾಗಿ ಬರಲಾರವು. ಅವು ನಾಮಪದಗಳಿಗಿಂತ ಮತ್ತು ಅವುಗಳ ವಿಭಕ್ತಿ ರೂಪಗಳಿಗಿಂತ ತೀರ ಭಿನ್ನವಾದ ಸ್ತರದಲ್ಲಿ ಬಳಕೆಯಾಗುತ್ತವೆ. ಅವನ್ನು ಬಳಸಿರುವ ಪದಕಂತೆಗಳನ್ನು ಮಾತ್ರ ವಾಕ್ಯಗಳ ಅಂಗಗಳಾಗಿ ಬಳಸಲು ಸಾಧ್ಯವಿದೆ.

(೨೩ಕ) ಬಂದ ಕುಂಭಸಂಭವಂ
(೨೩ಖ) ಬಂದ ಕುಂಭಸಂಭವನಂ ಕಂಡಂ

(೨೪ಕ) ನಿನ್ನ ಯಶಂ
(೨೪ಖ) ನಿನ್ನ ಯಶಮಂ ಕರಿದು ಮಾಡಿದೆಂ

(೨೩ಕ)ದಲ್ಲಿ ಬರ್ ಕ್ರಿಯಾಪದದ ಕೃದಂತರೂಪವನ್ನು (ಬಂದ ಎಂಬುದನ್ನು) ಒಂದು ಪದಕಂತೆಯ ಅಂಗವನ್ನಾಗಿ ಮಾಡಲಾಗಿದೆ, ಮತ್ತು (೨೩ಖ)ದಲ್ಲಿ ಆ ಪದಕಂತೆಯನ್ನು ಒಂದು ವಾಕ್ಯದ ಅಂಗವನ್ನಾಗಿ ಮಾಡಲಾಗಿದೆ. ಇದೇ ರೀತಿಯಲ್ಲಿ, (೨೪ಕ)ದಲ್ಲಿ ನೀನ್ ಎಂಬುದರ ಸಂಬಂಧಿಸುವ ರೂಪವನ್ನು ಒಂದು ಪದಕಂತೆಯ ಅಂಗವನ್ನಾಗಿ ಮಾಡಲಾಗಿದೆ, ಮತ್ತು (೨೪ಖ)ದಲ್ಲಿ ಆ ಪದಕಂತೆಯನ್ನು ಒಂದು ವಾಕ್ಯದ ಅಂಗವನ್ನಾಗಿ ಮಾಡಲಾಗಿದೆ.

ಪದಕಂತೆಯನ್ನು ಕೆಳಗಿನ ಸ್ತರವೆಂದು, ಮತ್ತು ವಾಕ್ಯವನ್ನು ಅದಕ್ಕಿಂತ ಮೇಲಿನ ಸ್ತರವೆಂದು ಪರಿಗಣಿಸಲು ಸಾಧ್ಯವಿದ್ದು, ಗುಣಪದಗಳು, ಕೃದಂತಗಳು, ಮತ್ತು ನಾಮಪದಗಳ ಸಂಬಂಧಿಸುವ ರೂಪಗಳು ಕೆಳಗಿನ ಸ್ತರದಲ್ಲಿ ಮಾತ್ರ ಬರಬಲ್ಲುವು.

### ೮.೭.೫ ವಿಭಕ್ತಿ ಪಲ್ಲಟ

ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯಗಳಿಗೂ, ಅವು ಸೂಚಿಸಬೇಕಾಗಿರುವ ಸಂಬಂಧ(ನಾಮ–ಕ್ರಿಯಾಸಂಬಂಧ)ಗಳಿಗೂ ನಡುವೆ ನೇರವಾದ ಹೊಂದಾಣಿಕೆಯಿಲ್ಲ. ಹಾಗಾಗಿ, ಒಂದೇ ಸಂಬಂಧವನ್ನು ಎರಡು ಅಥವಾ ಜಾಸ್ತಿ ವಿಭಕ್ತಿ ಪ್ರತ್ಯಯಗಳ ಮೂಲಕ ಸೂಚಿಸಲು ಸಾಧ್ಯವಿದೆ.

ಉದಾಹರಣೆಗಾಗಿ, ಸಂಸ್ಕೃತದಲ್ಲಿ ಕಾರಣವನ್ನು ಸೂಚಿಸಲು ತೃತೀಯೆಯನ್ನೂ ಬಳಸಬಹುದು, ಪಂಚಮಿಯನ್ನೂ ಬಳಸಬಹುದು (ಕಾರಣೇನ, ಕಾರಣಾತ್), ಯಾರೊಂದಿಗೆ ಮಾತನಾಡಿದ್ದು ಎಂಬುದನ್ನು ಸೂಚಿಸಲು ಚತುರ್ಥಿಯನ್ನೂ ಬಳಸಬಹುದು, ದ್ವಿತೀಯೆಯನ್ನೂ ಬಳಸಬಹುದು; ಯಾರಿಗೆ ಕೊಟ್ಟದ್ದು ಎಂಬುದನ್ನು ಸೂಚಿಸಲು ಚತುರ್ಥಿಯನ್ನೂ ಬಳಸಬಹುದು, ಷಷ್ಠಿ ಇಲ್ಲವೇ ಸಪ್ತಮಿಯನ್ನೂ ಬಳಸಬಹುದು; ಇತ್ಯಾದಿ (ಸ್ಪೀಜರ್ ೧೮೮೬ ನೋಡಿ).

ಇದಲ್ಲದೆ, ಮೇಲೆ ಸೂಚಿಸಿದ ಹಾಗೆ, ಕ್ರಿಯಾಪದದೊಂದಿಗೆ ಬರುವ ಉಪಸರ್ಗಗಳನ್ನನುಸರಿಸಿ ಬೇರೆ ಬೇರೆ ವಿಭಕ್ತಿ ಪ್ರತ್ಯಯಗಳನ್ನು (ಅರ್ಥದಲ್ಲಿ ವ್ಯತ್ಯಾಸವಿಲ್ಲದಿದ್ದರೂ) ಸಂಸ್ಕೃತದಲ್ಲಿ ಬಳಸಬೇಕಾಗುತ್ತದೆ, ಮತ್ತು ಕ್ರಿಯಾಪದವು ಕರ್ತರಿ ರೂಪದಲ್ಲಿದೆಯೇ ಅಥವಾ ಕರ್ಮಣಿ ರೂಪದಲ್ಲಿದೆಯೇ ಎಂಬುದನ್ನಾಧರಿಸಿಯೂ ಅದರೊಂದಿಗೆ ಬರುವ ನಾಮಪದಗಳ ವಿಭಕ್ತಿಯಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಇವೆಲ್ಲವೂ ಸಂಸ್ಕೃತದಲ್ಲಿ ಸಾಕಷ್ಟು 'ವಿಭಕ್ತಿಪಲ್ಲಟ'ಗಳು ಕಾಣಿಸಿಕೊಳ್ಳಲು ಕಾರಣಗಳಾಗಿವೆ.

ಹಳೆಗನ್ನಡದಲ್ಲಿ ಕಾಣಿಸುವ 'ವಿಭಕ್ತಿಪಲ್ಲಟ'ವೂ ಇಂತಹದೇ ಆಗಿರಬೇಕೆಂದು ಅದರ ವೈಯಾಕರಣಿಗಳು ನಿರ್ಧರಿಸಿರುವ ಹಾಗೆ ಕಾಣಿಸುತ್ತದೆ; ಕೇಶಿರಾಜನ ಅಭಿಪ್ರಾಯದಂತೆ, ಹಳೆಗನ್ನಡದ ವಿಭಕ್ತಿ ಪ್ರತ್ಯಯಗಳನ್ನು ಹೇಗೂ ಬಳಸಬಹುದು ('ಇಂತೀ ಪೇಳ್ದ ವಿಭಕ್ತಿಗಳೆಂತುಂ ಪಲ್ಲಟಿಸುಗುಂ ಯಥೇಷ್ಟಂ' (ಸೂ. ೧೪೫). ಆದರೆ, ನಿಜಕ್ಕೂ ಹಳೆಗನ್ನಡದಲ್ಲಿ ಸಂಸ್ಕೃತದಲ್ಲಿ ಕಾಣಿಸುವಂತಹ ವಿಭಕ್ತಿ ಪಲ್ಲಟವಿಲ್ಲ.

ವೈಯಾಕರಣಿಗಳು ಹಳೆಗನ್ನಡದಲ್ಲಿ ಬಳಕೆಯಲ್ಲಿವೆಯೆಂದು ಹೇಳುವ ವಿಭಕ್ತಿ ಪಲ್ಲಟಗಳನ್ನು ಕೆಳಗೆ ಸೂಚಿಸಿದ ಹಾಗೆ ವಿಂಗಡಿಸಲು ಸಾಧ್ಯವಿದ್ದು, ಅವು ಕಾಣಿಸಿಕೊಳ್ಳಲು ಬೇರೆ ಬೇರೆ ಕಾರಣಗಳಿವೆ:

(೧) ಹಲವು ಸಂದರ್ಭಗಳಲ್ಲಿ ಈ ರೀತಿ ಎರಡು ವಿಭಕ್ತಿ ಪ್ರತ್ಯಯಗಳ ಬಳಕೆಯಾಗಿರುವಲ್ಲೆಲ್ಲ ಅರ್ಥವ್ಯತ್ಯಾಸವೂ ಕಾಣಿಸಿಕೊಳ್ಳುತ್ತದೆ, ಮತ್ತು ಈ ಅರ್ಥವ್ಯತ್ಯಾಸವನ್ನು ವಿಭಕ್ತಿ ಪ್ರತ್ಯಯಗಳ ಮೂಲಾರ್ಥದಿಂದ ಸಾಧಿಸಲೂ ಸಾಧ್ಯವಾಗುತ್ತದೆ.

ಉದಾಹರಣೆಗಾಗಿ, ತಾವರೆಯೊಳ್ ಪುಟ್ಟಿದಂ ಮತ್ತು ತಾವರೆಗೆ ಪುಟ್ಟಿದಂ ಎಂಬವುಗಳ ನಡುವೆ ಒಳ್ ಮತ್ತು ಗೆ ಪ್ರತ್ಯಯಗಳ ನಡುವಿರುವಂತಹದೇ ಅರ್ಥವ್ಯತ್ಯಾಸವಿರುವ ಹಾಗೆ ಕಾಣಿಸುತ್ತದೆ. ಒಳ್ ಎಂಬುದು ಇಲ್ಲಿ ಹುಟ್ಟಿದ ಜಾಗವನ್ನು ಸೂಚಿಸುವುದಾದರೆ, ಗೆ ಎಂಬುದು ಸಂಬಂಧವನ್ನು ಸೂಚಿಸುತ್ತದೆ.

ಪೂವನರ್ಚಿಸಿದಂ ಮತ್ತು ಪೂವಿಂದರ್ಚಿಸಿದಂ ಎಂಬ ಎರಡು ಬಳಕೆಗಳ ನಡುವೆಯೂ ಅರ್ಥವ್ಯತ್ಯಾಸವಿದೆ. ಮೊದಲನೆಯ ಬಳಕೆಯಲ್ಲಿ ಅರ್ಚನೆಯಿಂದ ಬಾಧಿತವಾಗಿರುವ ವಸ್ತು ಹೂವು ಎಂಬುದನ್ನು ಸೂಚಿಸಲು ಅನ್ ಪ್ರತ್ಯಯವನ್ನು ಬಳಸಲಾಗಿದೆಯಾದರೆ, ಎರಡನೆಯದರಲ್ಲಿ ಅರ್ಚನೆಗೆ ಬಳಸಿದ ವಸ್ತು ಹೂವು ಎಂಬುದನ್ನು ಸೂಚಿಸಲು ಇಂದ ಪ್ರತ್ಯಯವನ್ನು ಬಳಸಲಾಗಿದೆ.

ಒಂದು ದಿನದೊಳ್ ಬಂದಂ ಎಂಬುದು ಅವಧಿಯನ್ನು ಸೂಚಿಸುವುದಾದರೆ, ಒಂದು ದಿನಂ ಬಂದಂ ಎಂಬುದು ಸಮಯವನ್ನಷ್ಟೇ ಸೂಚಿಸುತ್ತದೆ; ಬರಲು ಎಷ್ಟು ಸಮಯ ಹಿಡಿಯಿತು ಎಂಬುದನ್ನು ಈ ಎರಡನೆಯ ಬಳಕೆ ಸೂಚಿಸುವುದಿಲ್ಲ.

(೨) ಬೇರೆ ಕೆಲವು ಉದಾಹರಣೆಗಳಲ್ಲಿ ತೀರ ಭಿನ್ನವಾದ ರಚನೆಗಳು ಕಾಣಿಸುತ್ತಿದ್ದು, ನಿಜಕ್ಕೂ ಅವು ವಿಭಕ್ತಿ ಪಲ್ಲಟಕ್ಕೆ ಉದಾಹರಣೆಗಳಲ್ಲ. ರಸಿಕರ ಚಕ್ರವರ್ತಿ ಎಂಬುದೊಂದು ಪದಕಂತೆ, ರಸಿಕರೊಳ್ ಚಕ್ರವರ್ತಿ ಎಂಬುದು ಒಂದು ವಾಕ್ಯ; ಇದೇ ರೀತಿಯಲ್ಲಿ ಕೊಡೆಯೊಡೆಯಂ ಎಂಬುದು ಪದಕಂತೆ, ಕೊಡೆಗೊಡೆಯಂ ಎಂಬುದು ವಾಕ್ಯ.

(೩) ಇನ್ನು ದ್ವಿತೀಯಾರ್ಥದಲ್ಲಿ ಷಷ್ಠಿ ಬರುತ್ತದೆ ಎಂದು ಹೇಳಿರುವಲ್ಲಿ ದ್ವಿತೀಯೆಗಿರುವ ಎರಡು ರೂಪಗಳಲ್ಲಿ ಒಂದನ್ನು ಷಷ್ಠಿಯೆಂದು ಭ್ರಮಿಸಿರುವ ಹಾಗೆ ಕಾಣಿಸುತ್ತದೆ. ನಿಜಕ್ಕೂ ಹಳೆಗನ್ನಡದಲ್ಲಿ ದ್ವಿತೀಯೆಗೆ ಅನ್ ಮತ್ತು ಅ ಎಂಬುದಾಗಿ ಎರಡು ರೂಪಗಳಿವೆಯೆಂದು ಹೇಳುವ ಅವಶ್ಯಕತೆಯಿದೆ (ತೆಂಕನಾಡಂ ಮಱಿಯಲ್ಕೆ, ತೆಂಕನಾಡ ಮಱಿಯಲ್ಕೆ).

ಹಳೆಗನ್ನಡದ ಹಲವು ವೈಶಿಷ್ಟ್ಯಗಳನ್ನು ಉಳಿಸಿಕೊಂಡಿರುವ ಕರಾವಳಿಯ ಆಧುನಿಕ ಕನ್ನಡ ಪ್ರಭೇದಗಳಲ್ಲಿ ದ್ವಿತೀಯೆಯ ಅನ್ನು ಎಂಬುದರ ಬದಲು ಅ ಪ್ರತ್ಯಯವೇ ಬಳಕೆಯಲ್ಲಿದೆ. ಉದಾಹರಣೆಗಾಗಿ, ಹವ್ಯಕ ಕನ್ನಡದಲ್ಲಿ ಮರವ ಕಡುದವು 'ಮರವನ್ನು ಕಡಿದರು', ಅವನ ಬಿಟ್ಟವು 'ಅವನನ್ನು ಬಿಟ್ಟರು' ಎಂಬಂತಹ ಬಳಕೆಗಳಿದ್ದು, ಇವುಗಳಲ್ಲಿ ದ್ವಿತೀಯಾ ವಿಭಕ್ತಿಗೆ ಅ ರೂಪವಿದೆ.

ವೆಂಕಟಾಚಲ ಶಾಸ್ತ್ರಿಗಳು (೧೯೯೪:೬೦) ಹಳೆಗನ್ನಡದ ಈ ಅ ಪ್ರತ್ಯಯದ ಬಳಕೆಯಲ್ಲಿ ಅನ್ ಎಂಬುದರ ನಕಾರ 'ಸವೆದು'ಹೋಗಿರಬಹುದೆಂದು ಸೂಚಿಸಿದ್ದಾರೆ. ಹವ್ಯಕದಲ್ಲಿ ಈ ದ್ವಿತೀಯೆಯ ಅನಂತರ ಒತ್ತಿ ಹೇಳುವ ಉದೆ ಪ್ರತ್ಯಯವನ್ನು ಬಳಸಿದಾಗ ನಕಾರ ಕಾಣಿಸಿಕೊಳ್ಳುವುದಾದ ಕಾರಣ (ಮರವನ್ನುದೆ ಕಡುದವು 'ಮರವನ್ನೂ ಕಡಿದರು'), ಈ ಸೂಚನೆ ಸರಿಯಿರಬಹುದೇನೋ ಎಂದೆನಿಸುತ್ತದೆ.

ಆದರೆ, ಈ ಅ ಪ್ರತ್ಯಯವನ್ನು ಬಳಸಿದಾಗ ಇನ್ ಮತ್ತು ಅರ್ (ಅಱ್) ಆಗಮಗಳು ಬರುತ್ತವೆ, ಮತ್ತು ಅನ್ ಪ್ರತ್ಯಯವನ್ನು ಬಳಸಿದಾಗ ಈ ಆಗಮಗಳು ಬರುವುದಿಲ್ಲ ಎಂಬುದನ್ನು ಗಮನಿಸಿದಾಗ, ಇಲ್ಲಿ ಬೇರೇನೋ ನಡೆದಿರುವ ಹಾಗೆ ಅನಿಸುತ್ತದೆ. ಹವ್ಯಕದ ಕಾಡಿನ 'ಕಾಡನ್ನು', ಕಣ್ಣಿನ 'ಕಣ್ಣನ್ನು' ಅದರ 'ಅದನ್ನು', ಎರಡರ 'ಎರಡನ್ನು' ಎಂಬಂತಹ ದ್ವಿತೀಯಾರೂಪಗಳಲ್ಲಿ ಈ ಆಗಮಗಳು ಬಂದಿರುವುದನ್ನು ಕಾಣಬಹುದು.

ಇದಲ್ಲದೆ, ದಕ್ಷಿಣ ಕನ್ನಡ ಜಿಲ್ಲೆಯ ಗೌಡ ಕನ್ನಡದಲ್ಲೂ ದ್ವಿತೀಯಾ ವಿಭಕ್ತಿ ಪ್ರತ್ಯಯ ವ್ಯಂಜನಗಳ ಅನಂತರ ಅ ರೂಪದಲ್ಲಿ ಬರುತ್ತದೆ (ಮರಂಗಳ 'ಮರಗಳನ್ನು', ಅದರ 'ಅದನ್ನು', ಹಾರರ 'ಬ್ರಾಹ್ಮಣರನ್ನು'), ಮತ್ತು ಸ್ವರಗಳ ಅನಂತರ ನ ರೂಪದಲ್ಲಿ (ಅತ್ತೆನ 'ಅತ್ತೆಯನ್ನು', ಮರನ 'ಮರವನ್ನು') ಬರುತ್ತದೆ (ಕುಶಾಲಪ್ಪ ಗೌಡ ೧೯೭೦:೪೪).

ಹಳೆಗನ್ನಡದಲ್ಲೂ ಅದಱ ತಡೆವುದಧರ್ಮಂ ಎಂಬಲ್ಲಿ ಈ ಪ್ರತ್ಯಯದೊಂದಿಗೆ ಅಱಾಗಮ ಬಂದಿದೆ. ಇನಾಗಮವೂ ಬರುತ್ತದೆಯೋ ಎಂಬುದನ್ನು ಪರಿಶೀಲಿಸಬೇಕು.

ಆದರೆ, ಷಷ್ಠಿಯಲ್ಲಿ ಕಾಣಿಸುವ ಅದಾಗಮ ಈ ಪ್ರತ್ಯಯದ ಬಳಕೆಯಲ್ಲಿಲ್ಲ. ಹವ್ಯಕದ ಮರದ ಕಾಲು ಮತ್ತು ಮರವ ಕಡುದವು ಎಂಬೆರಡು ಬಳಕೆಗಳಲ್ಲಿ ಈ ವ್ಯತ್ಯಾಸವನ್ನು ಕಾಣಬಹುದು. ಗೌಡ ಕನ್ನಡದಲ್ಲೂ ಮರನ 'ಮರವನ್ನು' ಮತ್ತು ಮರದ 'ಮರದ' ಎಂಬುದಾಗಿ ಈ ಎರಡು ವಿಭಕ್ತಿ ರೂಪಗಳೊಳಗೆ ವ್ಯತ್ಯಾಸವಿದೆ (ಕುಶಾಲಪ್ಪ ಗೌಡ ೧೯೭೦: ೪೭)

ಹಳೆಗನ್ನಡದ ಗ್ರಂಥಗಳು ಮುಖ್ಯವಾಗಿ ಜೈನ ಲೇಖಕರಿಂದ ಸೃಷ್ಟಿಯಾಗಿದ್ದು, ಇವರ ಕೇಂದ್ರ ಸ್ಥಾನ ಕರಾವಳಿಯಲ್ಲಿದ್ದುದೇ ಹಳೆಗನ್ನಡದಲ್ಲಿ ಈ ರೀತಿ ಕರಾವಳಿಯ ಕನ್ನಡ ಪ್ರಭೇದದ ಹಲವು ವೈಶಿಷ್ಟ್ಯಗಳು ಕಾಣಿಸಿಕೊಳ್ಳಲು ಕಾರಣವಿರಬಹುದು.

(೪) ಅವಶ್ಯವಿಲ್ಲದಲ್ಲಿ ವಿಭಕ್ತಿ ಪ್ರತ್ಯಯವನ್ನು ಬಳಸದೆಯೂ ಇರಲು ಸಾಧ್ಯ ಎಂಬುದು ಹಳೆಗನ್ನಡ ವಿಭಕ್ತಿ ಪ್ರಯೋಗದ ಒಂದು ವೈಶಿಷ್ಟ್ಯ (೮.೨ ನೋಡಿ). ದ್ವಿತೀಯೆಯ ಬದಲು ಪ್ರಥಮೆ ಕಾಣಿಸುವಂತಹ ಸಂದರ್ಭಗಳೆಲ್ಲ ಈ ವೈಶಿಷ್ಟ್ಯದ ದ್ಯೋತಕಗಳಾಗಿವೆಯಲ್ಲದೆ ವಿಭಕ್ತಿ ಪಲ್ಲಟಕ್ಕೆ (ಇಲ್ಲವೇ ಸಮಾಸಕ್ಕೆ) ಉದಾಹರಣೆಗಳಲ್ಲ.

ವಿಭಕ್ತಿ ಪಲ್ಲಟಕ್ಕೆ ವೈಯಾಕರಣಿಗಳು ಕೊಡುವ ಉದಾಹರಣೆಗಳನ್ನು ಹಾಗೆಯೇ ಪರಿಶೀಲಿಸಿದಲ್ಲಿ ಅವುಗಳ ಉದ್ದೇಶವೇನೆಂಬುದು ಸ್ಪಷ್ಟವಾಗುವುದಿಲ್ಲ. ಅವು ಕಾಣಿಸಿಕೊಳ್ಳುವ ಕವಿಗಳ ಪ್ರಯೋಗಗಳನ್ನು ಪರಿಶೀಲಿಸಿದಾಗ ಮಾತ್ರ ನಿಜಕ್ಕೂ ಅವು ಒಂದೇ ಅರ್ಥದಲ್ಲಿ ಬಂದಿವೆಯೇ, ಅಥವಾ ಬೇರೆ ಬೇರೆ ಅರ್ಥಗಳನ್ನು ಸೂಚಿಸುವುದಕ್ಕಾಗಿ ಬಂದಿವೆಯೇ ಎಂಬ ವಿಷಯ ಸ್ಪಷ್ಟವಾಗಬಲ್ಲುದು.

## ೮.೭.೬ ಕಾರಕಗಳು

ಮೇಲೆ (೮.೬)ರಲ್ಲಿ ಸೂಚಿಸಿದ ಹಾಗೆ, ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯಗಳಿಗೂ ಅವು

ಸೂಚಿಸುವ ನಾಮ–ಕ್ರಿಯಾ ಸಂಬಂಧಗಳಿಗೂ ನಡುವೆ ನೇರವಾದ ಹೊಂದಾಣಿಕೆಯಿಲ್ಲ. ಹಾಗಾಗಿ, ಆ ಭಾಷೆಯಲ್ಲಿ ನಾಮ–ಕ್ರಿಯಾ ಸಂಬಂಧಗಳನ್ನು ಹೇಗೆ ವಿಂಗಡಿಸಲಾಗುತ್ತದೆ ಎಂಬುದನ್ನು ವಿವರಿಸುವುದಕ್ಕಾಗಿ ಸಂಸ್ಕೃತ ವೈಯಾಕರಣಿಗಳು 'ಕಾರಕ'ಗಳೆಂಬ ಸಂಬಂಧಗಳನ್ನು ಕಲ್ಪಿಸಿಕೊಳ್ಳಬೇಕಾಗಿದೆ.

ಹಳೆಗನ್ನಡದ ವಿಭಕ್ತಿ ಪ್ರತ್ಯಯಗಳು ನಾಮ–ಕ್ರಿಯಾ ಸಂಬಂಧಗಳನ್ನು ಹೆಚ್ಚು ಕಡಿಮೆ ನೇರವಾಗಿಯೇ ಸೂಚಿಸುತ್ತಿವೆಯಾದ ಕಾರಣ, ಕಾರಕಗಳೆಂಬ ಕಲ್ಪಿತ ಸಂಬಂಧಗಳ ಅವಶ್ಯಕತೆ ಹಳೆಗನ್ನಡ ವ್ಯಾಕರಣಕ್ಕಿಲ್ಲ. ಹಾಗೇನಾದರೂ ಕಲ್ಪಿಸಿಕೊಳ್ಳುವುದಿದ್ದರೂ, ಅವು ಸಂಸ್ಕೃತದ ಕಾರಕಗಳಿಗಿಂತ ತೀರ ಭಿನ್ನವಾಗಿರುವುದು ಅವಶ್ಯ. ಯಾಕೆಂದರೆ, ಹಳೆಗನ್ನಡದಲ್ಲಿ ಈ ಸಂಬಂಧಗಳನ್ನು ಸಂಸ್ಕೃತಕ್ಕಿಂತ ತೀರ ಭಿನ್ನವಾದ ರೀತಿಯಲ್ಲಿ ವಿಂಗಡಿಸಲಾಗುತ್ತದೆ.

ಉದಾಹರಣೆಗಾಗಿ, ಒಂದು ಘಟನೆಯಲ್ಲಿ ತೊಡಗಿಕೊಂಡಿರುವ ವ್ಯಕ್ತಿಗಳನ್ನು ಸಂಸ್ಕೃತದಲ್ಲಿ ಕರ್ತೃ ಮತ್ತು ಕರ್ಮ ಎಂಬುದಾಗಿ ವಿಭಜಿಸಲಾಗುತ್ತದೆ, ಆದರೆ ಹಳೆಗನ್ನಡದ ಮಟ್ಟಿಗೆ ಅಂತಹ ವಿಭಜನೆಗಿಂತಲೂ ಆಗುಗ ಮತ್ತು ಮಾಡುಗ ಎಂಬ ವಿಭಜನೆಯೇ ಹೆಚ್ಚು ಉಚಿತವಾದುದು. ಇದಕ್ಕೆ ಕಾರಣವೇನೆಂದರೆ, ಈ ಎರಡು ಭಾಷೆಗಳಲ್ಲಿ ಕ್ರಿಯಾಪದಗಳನ್ನು ವಿಭಜಿಸುವ ಕ್ರಮ ತೀರ ಭಿನ್ನವಾದುದು.

ಸಂಸ್ಕೃತದಲ್ಲಿ ಕ್ರಿಯಾಪದಗಳನ್ನು ಮುಖ್ಯವಾಗಿ ಅಕರ್ಮಕ ಮತ್ತು ಸಕರ್ಮಕ ಎಂಬುದಾಗಿ ವಿಭಜಿಸಲಾಗುತ್ತದೆ; ಕ್ರಿಯಾಪದಗಳು ಸೂಚಿಸುವ ಘಟನೆಯಲ್ಲಿ ಒಬ್ಬ ವ್ಯಕ್ತಿ ತೊಡಗಿರುವನಾದರೆ ಅದು ಅಕರ್ಮಕ, ಮತ್ತು ಇಬ್ಬರು ವ್ಯಕ್ತಿಗಳು ತೊಡಗಿರುವರಾದರೆ ಸಕರ್ಮಕ. ಅಕರ್ಮಕ ಘಟನೆಯಲ್ಲಿ ತೊಡಗಿರುವ ವ್ಯಕ್ತಿ ಕರ್ತೃ ಕಾರಕ ಮತ್ತು ಸಕರ್ಮಕ ಘಟನೆಯಲ್ಲಿ ತೊಡಗಿರುವ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬ ಕರ್ತೃ ಕಾರಕ ಮತ್ತು ಇನ್ನೊಬ್ಬ ಕರ್ಮ ಕಾರಕ.

ಸಂಸ್ಕೃತ ವೈಯಾಕರಣಿಗಳು ಈ ಅಕರ್ಮಕ–ಸಕರ್ಮಕ ಭೇದವನ್ನು ಸ್ವಲ್ಪ ಭಿನ್ನವಾಗಿ (ವ್ಯಾಪಾರ ಮತ್ತು ಫಲಗಳೆರಡೂ ಒಂದೇ ಘಟಕದಲ್ಲಿದ್ದರೆ ಅಕರ್ಮಕ, ಮತ್ತು ಬೇರೆ ಬೇರೆ ಘಟಕಗಳಲ್ಲಿದ್ದರೆ ಸಕರ್ಮಕ ಎಂಬುದಾಗಿ) ವರ್ಣಿಸುವರಾದರೂ ಮೂಲಾರ್ಥ ಒಂದೇ.

ಹಳೆಗನ್ನಡ ವ್ಯಾಕರಣಕ್ಕೆ ಇಂತಹ ಅಕರ್ಮಕ–ಸಕರ್ಮಕ ವಿಭಜನೆಯ ಅವಶ್ಯಕತೆಯಿಲ್ಲ. ಅದಕ್ಕೆ ಬದಲು, ಒಬ್ಬ ವ್ಯಕ್ತಿ ಒಂದು ಘಟನೆಯಲ್ಲಿ ಸ್ವೇಚ್ಛೆಯಿಂದ ತೊಡಗಿರುವನಾದರೆ ಮಾಡುಗ, ಇಲ್ಲವಾದರೆ ಆಗುಗ ಎಂಬುದೇ ಹಳೆಗನ್ನಡ ಕ್ರಿಯಾಪದಗಳ ವಿಭಜನೆಗೆ ಮೂಲವಾಗಿರುತ್ತದೆ. ಹಾಗಾಗಿ, ಸಂಸ್ಕೃತದ ಕರ್ತೃ ಮತ್ತು ಕರ್ಮಕಾರಕಗಳನ್ನು ಹಾಗೆಯೇ ಹಳೆಗನ್ನಡಕ್ಕೆ ಅಳವಡಿಸಲು ಸಾಧ್ಯವಾಗುವುದಿಲ್ಲ.

ಹಳೆಗನ್ನಡದ ವಾಕ್ಯರಚನೆಯನ್ನು ವಿವರಿಸುವಾಗ, ಹಲವು ಸಂದರ್ಭಗಳಲ್ಲಿ ಈ ರೀತಿ ಆಗುಗ ಮತ್ತು ಮಾಡುಗಗಳೆಂಬ ಕಲ್ಪನೆಗಳನ್ನು ಬಳಸುವುದರಿಂದ ವಿವರಣೆಯ ಕೆಲಸ ಸುಲಭವಾಗುತ್ತದೆ; ಅದಕ್ಕೆ ಬದಲು, ಕರ್ತೃ ಮತ್ತು ಕರ್ಮ ಎಂಬ ಕಲ್ಪನೆಗಳನ್ನು ಬಳಸಿದಲ್ಲಿ ವಿವರಣೆ ತಪ್ಪಾಗುತ್ತದೆ.

ಉದಾಹರಣೆಗಾಗಿ, ಎರಡು ವಾಕ್ಯಗಳನ್ನು ಜೋಡಿಸಿ ಹೇಳುವಲ್ಲಿ ಬಳಕೆಯಾಗುವ ಕುಡಿದು, ಮಿಂದು ಮೊದಲಾದವುಗಳನ್ನು ಬಳಸಬೇಕಿದ್ದಲ್ಲಿ, ಆ ಎರಡು ವಾಕ್ಯಗಳೂ 'ಏಕಕರ್ತೃಕ'–ಗಳಾಗಿರಬೇಕೆಂದು ಭಟ್ಟಾಕಳಂಕನು ಒಂದು ನಿಯಮವನ್ನು ಮಾಡಿದ್ದಾನೆ (ಸೂ. ೫೪೦). ಆದರೆ ಇದಕ್ಕೆ ಅಪವಾದವಾಗಿ ಪೆಣನಂ ಕಂಡು ದುಃಖಮಾದುದು, ಪ್ರಿಯಳಂ ಕಂಡು ಸುಖಮಾದುದು

ಎಂಬಂತಹ ವಾಕ್ಯಗಳಿರುವುದು ಸಮಸ್ಯೆಯಾಗಿದೆ. ಪೆಣನಂ ಕಂಡು ಸುಖ ಮಾದುದು ಎಂಬ ವಾಕ್ಯದಲ್ಲಿ ಎರಡು ವಾಕ್ಯಗಳನ್ನು (ಆತನ್ ಪೆಣನಂ ಕಂಡನ್ ಮತ್ತು ಆತಂಗೆ ದುಃಖಮಾದುದು ಎಂಬವುಗಳನ್ನು) ಕಂಡು ಕ್ರಿಯಾರೂಪದ ಮೂಲಕ ಜೋಡಿಸಲಾಗಿದ್ದು, ಅವುಗಳ ಕರ್ತೃಗಳು ಒಂದೇ ಅಲ್ಲ.

ಇದಕ್ಕೆ ಕುಂಡಲಗಿಯಾಚಾರ್ಯರು (೧೯೪೧:೬೫೪) ಕೊಡುವ ಸಮಾಧಾನವೇನೆಂದರೆ, ದುಃಖಮಾದುದು ಎಂಬುದಕ್ಕೆ ದುಃಖಿತನಾದನು ಎಂಬ ಅರ್ಥವನ್ನಿಟ್ಟುಕೊಂಡಲ್ಲಿ ಎರಡು ವಾಕ್ಯದಲ್ಲೂ ಒಂದೇ ಕರ್ತೃವಿರುವ ಹಾಗೆ ಆಗುತ್ತದೆ ಎಂಬುದು. ಆದರೆ ಇದು ಅರ್ಥವನ್ನವಲಂಬಿಸಿದ ಸಮಾಧಾನವಾಗಿದ್ದು, ವಾಕ್ಯರಚನೆಯ ಸಮಸ್ಯೆಯನ್ನು ನಿವಾರಿಸುವುದಿಲ್ಲ.

ಇದಲ್ಲದೆ, ಹಳೆಗನ್ನಡದಲ್ಲಿ ಮೇಲಿನ ನಿಯಮಕ್ಕೆ ಅಪವಾದಗಳಾಗಿ ಕಾಣಿಸುವ ಬೇರೆಯೂ ಹಲವು ವಾಕ್ಯಗಳನ್ನು ರಚಿಸಲು ಸಾಧ್ಯವಿದ್ದು, ಅವಕ್ಕೆಲ್ಲ ಇಂತಹ ಸಮಾಧಾನವನ್ನು ಕೊಡಲು ಸಾಧ್ಯವಾಗದು.

ಇದಕ್ಕೆ ಬದಲು, ಮೇಲೆ ಸೂಚಿಸಿದ ಹಾಗೆ, ಒಂದು ಘಟನೆಯಲ್ಲಿ ಸ್ವೇಚ್ಛೆಯಿಂದ ನಿರತನಾಗುವ ವ್ಯಕ್ತಿ (ಮಾಡುಗ) ಮತ್ತು ಇತರ (ಆಗುಗ) ಎಂಬುದಾಗಿ ಕಾರಕಗಳನ್ನು ವಿಭಜಿಸಿದಲ್ಲಿ, ಮೇಲಿನ ಹಳೆಗನ್ನಡ ವಾಕ್ಯಗಳಿಗೆ ಸುಲಭವಾಗಿ ನಿಯಮವನ್ನು ರಚಿಸಬಹುದು. ಜೋಡಿಸಿರುವ ಎರಡು ವಾಕ್ಯಗಳಲ್ಲೂ ಮಾಡುಗ ಕಾರಕವನ್ನು ಬಳಸಲಾಗಿದೆಯಾದರೆ, ಅದು ಒಬ್ಬನೇ ವ್ಯಕ್ತಿಯನ್ನು ಸೂಚಿಸುವ ಅವಶ್ಯಕತೆಯಿದೆ ಎಂಬುದೇ ಇಲ್ಲಿ ಬೇಕಾಗಿರುವ ನಿಯಮ (ಹೊಸಗನ್ನಡದಲ್ಲೂ ಈ ನಿಯಮ ಹೇಗೆ ಬಳಕೆಯಲ್ಲಿದೆ ಎಂಬುದನ್ನು ಭಟ್ (೨೦೦೪:೧೯೬)ರಲ್ಲಿ ವಿವರಿಸಲಾಗಿದೆ). ಮೇಲೆ ಕೊಟ್ಟಿರುವ ಅಪವಾದ ವಾಕ್ಯಗಳಲ್ಲಿ ಮಾಡುಗ ಘಟಕ ಮೊದಲನೆಯ ಅಂಗವಾಕ್ಯದಲ್ಲಿ ಮಾತ್ರ ಬಂದಿದೆ ಎಂಬುದನ್ನು ಗಮನಿಸಬಹುದು (೧೦.೨.೨ ನೋಡಿ).

### ೮.೭.೭ ನಾಮ–ಕ್ರಿಯಾ ಸಂಬಂಧ

ಸಂಸ್ಕೃತದ ವೈಯಾಕರಣಿಗಳು ಹೇಳುವ ಆರು ಕಾರಕಗಳು 'ಸಕಲ ಭಾಷೆಗಳಲ್ಲಿಯೂ ನಿಹಿತವಾಗಿರುವ ಗೂಢತತ್ವ'ವನ್ನು ಸೂಚಿಸುತ್ತವೆಯೆಂಬುದಾಗಿ ಇತ್ತೀಚೆಗೆ ರಂಗನಾಥ ಶರ್ಮರು (೨೦೦೨:೨) ಬರೆದಿದ್ದಾರೆ. ಅವರ ಅಭಿಪ್ರಾಯ ದಂತೆ, 'ಶಬ್ದಗಳಿಗೆ ಕ್ರಿಯೆಯೊಡನೆ ಸಂಬಂಧವಿಶೇಷವು ಆರು ವಿಧದಲ್ಲಿ ಮಾತ್ರ ಸಾಧ್ಯ. ಅದಕ್ಕಿಂತ ಹೆಚ್ಚು ವಿಧದಲ್ಲಿ ಈ ಸಂಬಂಧವನ್ನು ಯಾವ ಶಬ್ದವೂ ತಿಳಿಸಲಾರದು. ಆದ್ದರಿಂದ ಯಾವ ಭಾಷೆಯಲ್ಲಾಗಲಿ ಆರು ಕಾರಕಗಳಿರುತ್ತವೆ. ಅಧಿಕವೂ ಇಲ್ಲ ಕಡಿಮೆಯೂ ಇಲ್ಲ'.

ಜಗತ್ತಿನಲ್ಲಿ ಒಟ್ಟು ಐದು ಸಾವಿರಕ್ಕಿಂತಲೂ ಜಾಸ್ತಿ ಭಾಷೆಗಳಿದ್ದು (ಭಟ್ ೨೦೦೨ ನೋಡಿ), ಒಂದು ಸಿದ್ಧಾಂತ ಇವೆಲ್ಲವಕ್ಕೂ ಅನ್ವಯಿಸುತ್ತದೆ ಎಂದು ವಾದಿಸಬೇಕಾದಲ್ಲಿ, ಅವುಗಳನ್ನು ಪ್ರತಿನಿಧೀಕರಿಸುವ ನೂರಿನ್ನೂರು ಭಾಷೆಗಳನ್ನಾದರೂ ಪರಿಶೀಲಿಸುವ ಅವಶ್ಯಕತೆಯಿದೆ. ರಂಗನಾಥ ಶರ್ಮರು ಇಂತಹ ಪರಿಶೀಲನೆಯನ್ನು ನಡೆಸಿದ ಹಾಗೆ ಕಾಣಿಸುವುದಿಲ್ಲ. ಇದಲ್ಲದೆ, ಹೀಗೆ ಪರಿಶೀಲಿಸಿರುವೆವಾದರೂ, ನಮ್ಮ ಸಿದ್ಧಾಂತಕ್ಕೆ ಅಪವಾದವಾಗಿ ಒಂದೇ ಒಂದು ಭಾಷೆ ಕಾಣಸಿಕ್ಕಿದರೂ ಒಡನೆಯೇ ಆ ಸಿದ್ಧಾಂತ ಬಿದ್ದುಹೋಗುತ್ತದೆ.

ನಾಮಪದ ಮತ್ತು ಕ್ರಿಯಾಪದಗಳ ನಡುವಿರುವ ಸಂಬಂಧವನ್ನು ಎಲ್ಲಾ ಭಾಷೆಗಳಿಗೂ ಅನ್ವಯಿಸುವ ಹಾಗೆ ಕ್ರೋಢೀಕರಿಸಲು ಹಲವರು ವಿದ್ವಾಂಸರು ಈಗಾಗಲೇ ಪ್ರಯತ್ನಿಸಿ ಸೋತಿದ್ದಾರೆ.

ಉದಾಹರಣೆಗಾಗಿ, ಫಿಲ್ಲಿಮೋರ್ ಎಂಬ ಅಮೆರಿಕದ ವಿದ್ವಾಂಸರು ಮೊದಲಿಗೆ (ಫಿಲ್ಲಿಮೋರ್ ೧೯೬೮) ಇಂತಹ ಆರು ಸಂಬಂಧಗಳ ಅವಶ್ಯಕತೆಯಿದೆಯೆಂದು ವಾದಿಸಿದ್ದು, ಅನಂತರ (ಫಿಲ್ಲಿಮೋರ್ ೧೯೭೧) ಅವುಗಳನ್ನು ಎಂಟಕ್ಕೆ ಏರಿಸಿದ್ದಾರೆ. ಮಾಡುಗ, ಅನುಭೋಗಿ, ಕರಣ, ಕರ್ಮ, ಮೂಲ, ಗುರಿ, ಆಕರ ಮತ್ತು ಸಮಯಗಳೇ ಅವರು ಸೂಚಿಸುವ ಎಂಟು ಸಂಬಂಧಗಳು.

ಫಿಲ್ಲಿಮೋರ್ ಅವರ ಅನಂತರ ಈ ವಿಷಯದಲ್ಲಿ ಹಲವಾರು ವಿದ್ವಾಂಸರು ಚರ್ಚೆ ನಡೆಸಿದ್ದು, ಅವರಲ್ಲಿ ಕೆಲವರು ಈ ಸಂಬಂಧಗಳ ಪಟ್ಟಿಯನ್ನು ನಾಲ್ಕಕ್ಕೆ ಇಳಿಸಿದ್ದಾರೆ, ಮತ್ತು ಬೇರೆ ಕೆಲವರು ಹತ್ತು–ಹನ್ನೊಂದರ ವರೆಗೆ ಏರಿಸಿದ್ದಾರೆ. ಆದರೆ ಈ ವಿಷಯದಲ್ಲಿ ಎಲ್ಲರೂ ಒಪ್ಪುವಂತಹ ಒಂದು ನಿರ್ಧಾರಕ್ಕೆ ಬರಲು ಈ ವಿದ್ವಾಂಸರಿಗೆ ಇನ್ನೂ ಸಾಧ್ಯವಾಗಿಲ್ಲ, ಮತ್ತು ಸಾಧ್ಯವಾಗುವ ಹಾಗೆ ಕಾಣಿಸುವುದೂ ಇಲ್ಲ (ಬ್ಲೇಕ್ ೨೦೦೧:೭೦ ನೋಡಿ).

ಇಂತಹ ಸಂಬಂಧಗಳನ್ನು ಸೂಚಿಸುವುದಕ್ಕಾಗಿ ಕೆಲವು ಭಾಷೆಗಳು ವಿಭಕ್ತಿ ಪ್ರತ್ಯಯಗಳನ್ನು ಬಳಸುತ್ತವೆಯಾದರೆ, ಬೇರೆ ಕೆಲವು ಅದಕ್ಕಿಂತ ಭಿನ್ನವಾಗಿರುವ ಪದಗಳ ಅನುಕ್ರಮದಂತಹ ಬೇರೆ ವಿಧಾನಗಳನ್ನು ಬಳಸುತ್ತವೆ. ವಿಭಕ್ತಿ ಪ್ರತ್ಯಯಗಳನ್ನು ಬಳಸುವ ಭಾಷೆಗಳಲ್ಲೂ ಕೆಲವು ಒಂದೆರಡು ಪ್ರತ್ಯಯಗಳನ್ನು ಮಾತ್ರ ಬಳಸುತ್ತವೆಯಾದರೆ, ಬೇರೆ ಕೆಲವು ನಲುವತ್ತು–ಐವತ್ತು ಪ್ರತ್ಯಯಗಳನ್ನು ಬಳಸುತ್ತವೆ. ಈ ಎಲ್ಲಾ ವೈವಿಧ್ಯತೆಗಳನ್ನೂ ಗಮನದಲ್ಲಿರಿಸಿಕೊಂಡು, ಅವನ್ನೆಲ್ಲ ವಿವರಿಸುವುದಕ್ಕಾಗಿ ಎಷ್ಟು ಸಂಬಂಧಗಳ ಅವಶ್ಯಕತೆಯಿದೆಯೆಂಬುದಾಗಿ ಒಂದು ನಿರ್ಧಾರಕ್ಕೆ ಬರಬೇಕಾಗಿದೆ, ಮತ್ತು ಅದನ್ನು ಆಧರಿಸಿ ಸಂಬಂಧಗಳ ಪಟ್ಟಿಯನ್ನು ತಯಾರಿಸಬೇಕಾಗಿದೆ.

ಇಲ್ಲಿ ಒಂದು ಮುಖ್ಯ ವಿಷಯವನ್ನು ಗಮನಿಸುವ ಅವಶ್ಯಕತೆಯಿದೆ. ಅರ್ಥ ಎಂಬುದು ಪದವನ್ನು ಬಿಟ್ಟು ಪೂರ ಸ್ವತಂತ್ರವಾಗಿ ನಿಲ್ಲಲಾರದು. ಹಾಗಾಗಿ, ನಾವು ಕಲ್ಪಿಸಿಕೊಳ್ಳುವ ಅರ್ಥದ ಸ್ವರೂಪವನ್ನು ನಾವು ಬಳಸುವ ಭಾಷೆಯೂ ನಿಯಂತ್ರಿಸುತ್ತದೆ. ಎಲ್ಲಾ ಭಾಷೆಗಳಿಗೂ ಅನ್ವಯವಾಗುವ ಹಾಗೆ ಒಂದು ನಿಶ್ಚಿತವಾದ ಸ್ವರೂಪದ ಮತ್ತು ಸಂಖ್ಯೆಯ ನಾಮ–ಕ್ರಿಯಾ ಸಂಬಂಧಗಳನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗದಿರುವುದಕ್ಕೆ ಅರ್ಥದ ಮೇಲಿರುವ ಈ ನಿರ್ಬಂಧವೇ ಮುಖ್ಯ ಕಾರಣ.

ಇಲ್ಲಿ ಇನ್ನೊಂದು ವಿಷಯವನ್ನೂ ಗಮನಿಸುವ ಅವಶ್ಯಕತೆಯಿದೆ. ಸಂಸ್ಕೃತದ ಕರ್ತೃ, ಕರ್ಮ, ಕರಣ ಮೊದಲಾದ ಕಾರಕಗಳು ಮೇಲಿನಿಂದ ಮೇಲೆ ನೋಡುವಾಗ ಅರ್ಥದ ಮೇಲೆ ಅವಲಂಬಿಸಿವೆಯೆಂದು ಕಾಣಿಸುತ್ತದೆ; ಆದರೆ, ನಿಜಕ್ಕೂ ಅವು ಹಲವು ಸಂಸ್ಕೃತದವೇ ಆದ ವಾಕ್ಯರಚನೆಯ ನಿಯಮಗಳ ಮೇಲೂ ಅವಲಂಬಿಸಿದ್ದು, ನೇರವಾಗಿ ಬೇರೆ ಭಾಷೆಗಳಿಗೆ ಅನ್ವಯಿಸಲು ಸಾಧ್ಯವಾಗುವಂತಹ ಕಲ್ಪನೆಗಳೇ ಅಲ್ಲ.

ಉದಾಹರಣೆಗಾಗಿ, ಮೇಲೆ ೮.೭.೬ರಲ್ಲಿ ಸೂಚಿಸಿದ ಹಾಗೆ, ಸಂಸ್ಕೃತದ ಕರ್ತೃ ಮತ್ತು ಕರ್ಮ ಕಾರಕಗಳ ಮೂಲಕ ಹಳೆಗನ್ನಡದ ವಾಕ್ಯರಚನೆಯ ನಿಯಮಗಳನ್ನು ವಿವರಿಸಲು ಸಾಧ್ಯವಾಗುವುದಿಲ್ಲ. ಅವಕ್ಕಿಂತ ತೀರ ಭಿನ್ನವಾದ ಮಾಡುಗ ಮತ್ತು ಆಗುಗಗಳೆಂಬ ಘಟಕಗಳ ಅವಶ್ಯಕತೆ ಹಳೆಗನ್ನಡಕ್ಕಿದೆ. ಆದರೆ, ಸಂಸ್ಕೃತದ ವಾಕ್ಯರಚನೆಯ ನಿಯಮಗಳನ್ನು ವರ್ಣಿಸಲು ಕರ್ತೃ ಮತ್ತು ಕರ್ಮ ಕಾರಕಗಳೇ ಯೋಗ್ಯವಾದವುಗಳು.

## ೮.೮ ಸಾರಾಂಶ

ಹಳೆಗನ್ನಡದಲ್ಲಿ ವಿಭಕ್ತಿ ಮತ್ತು ವಚನಗಳನ್ನು ಬೇರೆ ಬೇರೆ ಪ್ರತ್ಯಯಗಳು ಸೂಚಿಸುವುವಾದ ಕಾರಣ, ಅವಶ್ಯವಿಲ್ಲದಲ್ಲಿ ಅವನ್ನು ಬಳಸದಿರಲು ಸಾಧ್ಯವಿದೆ. ಆದರೆ, ಸಂಸ್ಕೃತದಲ್ಲಿ ಅವೆರಡನ್ನೂ ಒಂದೇ ಪ್ರತ್ಯಯ ಸೂಚಿಸುವುದಾದ ಕಾರಣ, ಅವಶ್ಯವಿಲ್ಲದಲ್ಲೂ ಅದನ್ನು ಬಳಸಬೇಕಾಗುತ್ತದೆ.

ಹಳೆಗನ್ನಡದಲ್ಲಿ ವಿಭಕ್ತಿ ಪ್ರತ್ಯಯಗಳಿಗೂ, ಅವು ಸೂಚಿಸುವ ನಾಮಪದ-ಕ್ರಿಯಾಪದ ಸಂಬಂಧಗಳಿಗೂ ನಡುವೆ ನೇರವಾದ ಹೊಂದಾಣಿಕೆಯಿದೆ; ಆದರೆ, ಸಂಸ್ಕೃತದಲ್ಲಿ ಇಂತಹ ಹೊಂದಾಣಿಕೆಯಿಲ್ಲ. ಈ ಕಾರಣಕ್ಕಾಗಿ, ವಿಭಕ್ತಿಗಳ ಬಳಕೆಯನ್ನು ವಿವರಿಸಲು ಸಂಸ್ಕೃತ ವೈಯಾಕರಣಿಗಳು ಕಾರಕಗಳೆಂಬ ಘಟಕಗಳನ್ನು ಕಲ್ಪಿಸಿಕೊಳ್ಳಬೇಕಾಗಿದೆ. ಹಳೆಗನ್ನಡಕ್ಕೆ ಇವುಗಳ ಅವಶ್ಯಕತೆಯಿಲ್ಲ.

ನಾಮಪದ-ಕ್ರಿಯಾಪದ ಸಂಬಂಧವನ್ನು ವಿಭಜಿಸುವಲ್ಲೂ, ಸಂಸ್ಕೃತ ಮತ್ತು ಹಳೆಗನ್ನಡಗಳ ನಡುವೆ ಮುಖ್ಯವಾದ ವ್ಯತ್ಯಾಸಗಳಿವೆ. ಹಾಗಾಗಿ, ಕಾರಕಗಳೆಂಬ ಕಲ್ಪಿತ ಘಟಕಗಳನ್ನು ಹಳೆಗನ್ನಡ ವ್ಯಾಕರಣದಲ್ಲಿ ಬಳಸುವುದಿದ್ದರೂ ಅವು ಸಂಸ್ಕೃತದವಕ್ಕಿಂತ ಭಿನ್ನವಾಗಿರಬೇಕಾಗುತ್ತದೆ. ಉದಾಹರಣೆಗಾಗಿ, ಕರ್ತೃ-ಕರ್ಮ ಎಂಬವುಗಳ ಬದಲು ಮಾಡುಗ-ಆಗುಗ ಎಂಬವುಗಳನ್ನು ಬಳಸುವ ಅವಶ್ಯಕತೆ ಹಳೆಗನ್ನಡಕ್ಕಿದೆ.

ಇದಲ್ಲದೆ, ನಾಮಕ್ರಿಯಾ ಸಂಬಂಧವನ್ನು ಸೂಚಿಸುವುದಕ್ಕಾಗಿ ಹಳೆಗನ್ನಡ ನಾಲ್ಕು ಪ್ರತ್ಯಯಗಳನ್ನು ಮಾತ್ರ ಬಳಸುತ್ತದೆ; ಆದರೆ, ಸಂಸ್ಕೃತ ಏಳು ಪ್ರತ್ಯಯಗಳನ್ನು ಬಳಸುತ್ತದೆ.

ಸಂಸ್ಕೃತ ಮತ್ತು ಹಳೆಗನ್ನಡ ಭಾಷೆಗಳ ನಡುವಿರುವ ಇಂತಹ ಹಲವು ಮೂಲಭೂತ ವ್ಯತ್ಯಾಸಗಳನ್ನು ಗಮನಿಸದುದರಿಂದಾಗಿ, ಹಳೆಗನ್ನಡ ವೈಯಾಕರಣಿಗಳು ಹಲವು ಸಮಸ್ಯೆಗಳನ್ನೆದುರಿಸಬೇಕಾಗಿದೆ.

# ಅಧ್ಯಾಯ ಒಂಬತ್ತು

# ಕ್ರಿಯಾರೂಪಗಳು

## ೯.೧ ಕ್ರಿಯಾರೂಪಗಳ ಒಳರಚನೆ

ವಾಕ್ಯದ ಪ್ರಧಾನ ಅಂಗವಾಗಿ ಬರುವ ಕ್ರಿಯಾರೂಪಗಳ ಒಳರಚನೆಯಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಹಲವು ಮುಖ್ಯವಾದ ವ್ಯತ್ಯಾಸಗಳಿವೆ. ಈ ಎರಡು ಭಾಷೆಗಳು ಬಳಸುವ ವ್ಯಾಕರಣದ ಮೂಲತತ್ವಗಳು ಬೇರೆ ಬೇರೆಯಾಗಿರುವುದೇ ಈ ವ್ಯತ್ಯಾಸಗಳಿಗೂ ಮೂಲ ಕಾರಣ ಎಂಬುದನ್ನು ಈ ಅಧ್ಯಾಯದಲ್ಲಿ ನೋಡಲಿರುವೆವು.

(೧) ಸಂಸ್ಕೃತದಲ್ಲಿ ಕ್ರಿಯಾರೂಪಗಳನ್ನು ರಚಿಸುವುದಕ್ಕಾಗಿ ಕ್ರಿಯಾಧಾತುವಿಗೆ ಘಟಕವನ್ನು ಸೂಚಿಸುವ 'ತಿಙ್' ಪ್ರತ್ಯಯಗಳಲ್ಲೊಂದನ್ನು ಮಾತ್ರ ಸೇರಿಸುವ ಅವಶ್ಯಕತೆಯಿದೆ. ಉದಾಹರಣೆಗಾಗಿ, ಸಂಸ್ಕೃತದ ಯಾತಿ 'ಹೋಗುತ್ತಾನೆ' ಕ್ರಿಯಾರೂಪದಲ್ಲಿ ಯಾ 'ಹೋಗು' ಧಾತುವಿನ ಅನಂತರ ಅದರ ಘಟಕವೊಂದನ್ನು ಸೂಚಿಸುವ ತಿ ಪ್ರತ್ಯಯ ಮಾತ್ರ ಬಂದಿದೆ. ಸಮಯವನ್ನು ಸೂಚಿಸುವುದಕ್ಕಾಗಿ ಅದಕ್ಕಿಂತ ಭಿನ್ನವಾದ ಬೇರೆ ಪ್ರತ್ಯಯ ಬಳಕೆಯಾಗಿಲ್ಲ.

ಆದರೆ, ಹಳೆಗನ್ನಡದಲ್ಲಿ ಕ್ರಿಯಾಪದದೊಂದಿಗೆ ಘಟಕವನ್ನು ಸೂಚಿಸುವ ಆಖ್ಯಾತ ಪ್ರತ್ಯಯವನ್ನು ಮಾತ್ರವಲ್ಲದೆ, ಸಮಯವನ್ನು ಸೂಚಿಸುವ ಪ್ರತ್ಯಯವನ್ನೂ ಸೇರಿಸಬೇಕಾಗುತ್ತದೆ. ಉದಾಹರಣೆಗಾಗಿ, ಹಳೆಗನ್ನಡದ ಪೋಪನ್ ಕ್ರಿಯಾರೂಪದಲ್ಲಿ ಪೋ ಧಾತುವಿನ ಅನಂತರ ಮುಂದಿನ ಸಮಯವನ್ನು ಸೂಚಿಸುವ ಪ ಪ್ರತ್ಯಯ ಮತ್ತು ಘಟಕವನ್ನು ಸೂಚಿಸುವ ಅನ್ ಪ್ರತ್ಯಯ – ಹೀಗೆ ಎರಡು ಪ್ರತ್ಯಯಗಳು ಬಂದಿವೆ.

(೨) ಹಳೆಗನ್ನಡದಲ್ಲಿ ಸಮಯವನ್ನು ಸೂಚಿಸುವ ಪ್ರತ್ಯಯಗಳು ಆಡುಗನ ಸಮಯಕ್ಕೂ ಘಟನೆಯ ಸಮಯಕ್ಕೂ ನಡುವಿರುವ ಸಂಬಂಧವನ್ನು ಸೂಚಿಸುವುದಕ್ಕಾಗಿ ಬಳಕೆಯಾಗುತ್ತವೆ. ಉದಾಹರಣೆಗಾಗಿ, ಪೋದನ್ ಕ್ರಿಯಾರೂಪದಲ್ಲಿ ಸಮಯವನ್ನು ಸೂಚಿಸುವುದಕ್ಕಾಗಿ ದ್ ಪ್ರತ್ಯಯ ಬಂದಿದೆ, ಮತ್ತು ಪೋಪನ್ ಕ್ರಿಯಾರೂಪದಲ್ಲಿ ಪ್ ಪ್ರತ್ಯಯ ಬಂದಿದೆ. ಆ ಕ್ರಿಯಾರೂಪವನ್ನು ವಾಕ್ಯವೊಂದರಲ್ಲಿ ಬಳಸಿರುವ ಸಮಯಕ್ಕಿಂತ ಮೊದಲೇ ಹೋಗುವ ಘಟನೆ ನಡೆದಿದೆಯೆಂಬುದನ್ನು ದ್ ಪ್ರತ್ಯಯವೂ, ಅನಂತರ ನಡೆಯಲಿದೆಯೆಂಬುದನ್ನು ಪ್ ಪ್ರತ್ಯಯವೂ ಸೂಚಿಸುತ್ತವೆ.

ಆದರೆ, ಸಂಸ್ಕೃತದ ಕ್ರಿಯಾರೂಪಗಳಲ್ಲಿ ಈ ರೀತಿ ಆಡುಗನ ಸಮಯಕ್ಕೂ ಘಟನೆಯ ಸಮಯಕ್ಕೂ ನಡುವಿರುವ ಸಂಬಂಧವನ್ನು ಸೂಚಿಸುವುದಕ್ಕಿಂತಲೂ ಘಟನೆಯ ಆಂತರಿಕ ಸಮಯ ವ್ಯವಸ್ಥೆಯನ್ನು ಸೂಚಿಸುವುದಕ್ಕೇನೇ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡಲಾಗಿದೆ, ಮತ್ತು ಇದಕ್ಕಾಗಿ, ಮೇಲೆ ಸೂಚಿಸಿದ ಹಾಗೆ, ಪ್ರತ್ಯೇಕವಾದ ಪ್ರತ್ಯಯವನ್ನು ಬಳಸುವ ಬದಲು, ಕ್ರಿಯಾಧಾತುವಿನಲ್ಲಿ ಮತ್ತು ಅದರ ಅನಂತರ ಘಟಕವನ್ನು ಸೂಚಿಸುವುದಕ್ಕಾಗಿ ಬರುವ ಪ್ರತ್ಯಯದಲ್ಲಿ ಕೆಲವು ಬದಲಾವಣೆಗಳನ್ನು ಮಾಡಲಾಗುತ್ತದೆ.

ಉದಾಹರಣೆಗಾಗಿ, ತುದ್ 'ಹೊಡೆ' ಧಾತುವಿಗೆ ಮುಖ್ಯವಾಗಿ ತುದ್ ಮತ್ತು ತುತೋದ್ ಎಂಬ ಎರಡು ರೂಪಗಳಿದ್ದು, ಇವು ಅಪೂರ್ಣ ಮತ್ತು ಪೂರ್ಣ ಎಂಬ ಎರಡು ಸಮಯ ವ್ಯವಸ್ಥೆಗಳನ್ನು ಸೂಚಿಸುವುದಕ್ಕಾಗಿ ಬಳಕೆಯಾಗುತ್ತವೆ. ಅವುಗಳಲ್ಲಿ ಮೊದಲನೆಯದನ್ನು ತುದತಿ 'ಹೊಡೆಯುತ್ತಾನೆ' ಕ್ರಿಯಾರೂಪದಲ್ಲೂ, ಎರಡನೆಯದನ್ನು ತುತೋದ 'ಹೊಡೆದ' ಕ್ರಿಯಾರೂಪದಲ್ಲೂ ಕಾಣಬಹುದು.

ಘಟಕವನ್ನು ಸೂಚಿಸುವ ಪ್ರತ್ಯಯಕ್ಕೆ ಮೊದಲನೆಯದರಲ್ಲಿ ತಿ ಎಂಬ ರೂಪವಿದೆಯಾದರೆ ಎರಡನೆಯದರಲ್ಲಿ ಅ ಎಂಬ ರೂಪವಿದೆ.

(೩) ಘಟಕಗಳನ್ನು ಸೂಚಿಸುವ ಪ್ರತ್ಯಯಗಳಲ್ಲೂ ಹಳೆಗನ್ನಡ ಮತ್ತು ಸಂಸ್ಕೃತಗಳ ನಡುವೆ ಹಲವು ವ್ಯತ್ಯಾಸಗಳಿವೆ:

(ಕ) ಹಳೆಗನ್ನಡದಲ್ಲಿ ಈ ಪ್ರತ್ಯಯಗಳು ಪುರುಷ-ವಚನ ಭೇದಗಳನ್ನು ಮಾತ್ರವಲ್ಲದೆ ಪ್ರಥಮ ಪುರುಷದಲ್ಲಿ ಲಿಂಗಭೇದವನ್ನೂ ಸೂಚಿಸುತ್ತವೆ (ಬಂದನ್, ಬಂದಳ್, ಬಂದುದು). ಆದರೆ, ಸಂಸ್ಕೃತದಲ್ಲಿ ಈ ಪ್ರತ್ಯಯಗಳು ಪುರುಷ ಮತ್ತು ವಚನ ಭೇದವನ್ನು ಮಾತ್ರ ಸೂಚಿಸುತ್ತವಲ್ಲದೆ, ಲಿಂಗಭೇದವನ್ನು ಸೂಚಿಸುವುದಿಲ್ಲ. ಉದಾಹರಣೆಗಾಗಿ, ಸಂಸ್ಕೃತದ ತುದತಿ ಕ್ರಿಯಾರೂಪವನ್ನು 'ಹೊಡೆಯುತ್ತಾನೆ', 'ಹೊಡೆಯುತ್ತಾಳೆ', ಮತ್ತು 'ಹೊಡೆಯುತ್ತದೆ' ಎಂಬುದಾಗಿ ಮೂರು ಅರ್ಥಗಳಲ್ಲೂ ಬಳಸಲು ಸಾಧ್ಯವಿದೆ.

(ಖ) ಹಳೆಗನ್ನಡದಲ್ಲಿ ಏಕವಚನ-ಬಹುವಚನ ಭೇದ ಮಾತ್ರ ಇದೆ; ಆದರೆ, ಸಂಸ್ಕೃತದಲ್ಲಿ ಏಕವಚನ-ದ್ವಿವಚನ-ಬಹುವಚನ ಭೇದವಿದೆ. ಹಳೆಗನ್ನಡದ ಮಾಳ್ಪರ್ 'ಮಾಡುತ್ತಾರೆ' ಕ್ರಿಯಾರೂಪಕ್ಕೆ ಬದಲಾಗಿ ಸಂಸ್ಕೃತದಲ್ಲಿ ಕುರುತಃ '(ಇಬ್ಬರು) ಮಾಡುತ್ತಾರೆ' ಮತ್ತು ಕುರ್ವಂತಿ '(ಇಬ್ಬರಿಗಿಂತ ಜಾಸ್ತಿ ಮಂದಿ) ಮಾಡುತ್ತಾರೆ' ಎಂಬುದಾಗಿ ಎರಡು ಕ್ರಿಯಾರೂಪಗಳಿವೆ.

(ಗ) ಹಳೆಗನ್ನಡದಲ್ಲಿ ಘಟಕವನ್ನು ಸೂಚಿಸುವ ಪ್ರತ್ಯಯಗಳು ಎಲ್ಲಾ ರೂಪಗಳಲ್ಲೂ ಬದಲಾಗದೆ ಒಂದೇ ರೂಪದಲ್ಲಿರುತ್ತವೆ. ಉದಾಹರಣೆಗಾಗಿ, ಪೋಪನ್, ಪೋದನ್ ಮತ್ತು ಪೋಗನ್ ಎಂಬ ಈ ಮೂರು ರೂಪಗಳಲ್ಲೂ ಘಟಕವನ್ನು ಸೂಚಿಸುವ ಪ್ರತ್ಯಯ ಅನ್ ಎಂಬ ಒಂದೇ ರೂಪದಲ್ಲಿದೆ. (ನಪುಂಸಕ ಏಕವಚನದ ಉದು ಪ್ರತ್ಯಯಕ್ಕೆ ಭೂತಕಾಲದಲ್ಲಿ ವಿಕಲ್ಪವಾಗಿ ತು ಇಲ್ಲವೇ ತ್ತು ರೂಪಗಳಿವೆಯೆಂಬುದು ಮಾತ್ರ (ಮಾಡಿದುದು, ಮಾಡಿತು, ಒಡೆದತ್ತು) ಇದಕ್ಕೆ ಅಪವಾದವಾಗಿದೆ).

ಆದರೆ, ಸಂಸ್ಕೃತದಲ್ಲಿ ಈ ಪ್ರತ್ಯಯಗಳು ಹಲವು ರೀತಿಯ ರೂಪಭೇದಗಳನ್ನು ತೋರಿಸುತ್ತವೆ. ಉದಾಹರಣೆಗಾಗಿ, ಪ್ರಥಮಪುರುಷ ಏಕವಚನ ಪ್ರತ್ಯಯಕ್ಕೆ ಅಪೂರ್ಣ ಕಾಲದಲ್ಲಿ ತಿ ರೂಪವಿದೆಯಾದರೆ (ಕರೋತಿ 'ಮಾಡುತ್ತಾನೆ'), ಭೂತ ಪ್ರತ್ಯಯ ಸೇರಿರುವಲ್ಲಿ ತ್ ರೂಪವಿದೆ (ಅಕರೋತ್ 'ಮಾಡಿದ'). ಆತ್ಮನೇಪದದಲ್ಲಿ ಇವೆರಡಕ್ಕಿಂತ ಭಿನ್ನವಾದ ತೇ ಮತ್ತು ತ ರೂಪಗಳಿವೆ (ಕುರುತೇ ಮತ್ತು ಅಕುರುತ). ಇದೇ ರೀತಿಯಲ್ಲಿ, ಈ ಪ್ರತ್ಯಯಕ್ಕೆ ಪೂರ್ಣಕಾಲದಲ್ಲೂ ಬೇರೆ ಬೇರೆ ರೂಪಗಳಿವೆ (ಚಕಾರ, ಅಕಾರ್ಷೀತ್ ಮತ್ತು ಚಕ್ರೇ, ಅಕೃತ).

(೪) ಸಂಸ್ಕೃತದ ಕ್ರಿಯಾಪದಗಳಿಗೆ ಪರಸ್ಮೈಪದ ಮತ್ತು ಆತ್ಮನೇಪದ ಎಂಬುದಾಗಿ ಎರಡೆರಡು ರೂಪಗಳಿವೆ. ಕ್ರಿಯಾಪದವು ತಿಳಿಸುವ ಘಟನೆಯನ್ನು ಒಬ್ಬ ವ್ಯಕ್ತಿ ಬೇರೊಬ್ಬನ ಲಾಭಕ್ಕಾಗಿ ನಡೆಸುತ್ತಿರುವನಾದರೆ ಪರಸ್ಮೈಪದ ರೂಪ ವನ್ನೂ, ತನ್ನ ಲಾಭಕ್ಕಾಗಿ ನಡೆಸುತ್ತಿರುವನಾದರೆ ಆತ್ಮನೇಪದ ರೂಪವನ್ನೂ ಬಳಸಬೇಕೆಂಬುದು ಈ ವ್ಯತ್ಯಾಸದ ಮೂಲ ಉದ್ದೇಶವಾಗಿತ್ತು.

ಈ ವ್ಯತ್ಯಾಸವನ್ನು ಸೂಚಿಸುವುದಕ್ಕಾಗಿ ಸಂಸ್ಕೃತದ ಕ್ರಿಯಾಪದಗಳೊಂದಿಗೆ ಎರಡು ರೀತಿಯ ಆಖ್ಯಾತ ಪ್ರತ್ಯಯಗಳು ಬಳಕೆಯಾಗುತ್ತವೆ. ಉದಾಹರಣೆಗಾಗಿ, ಯಜ್ 'ಯಾಗ ಮಾಡು' ಧಾತುವಿನೊಂದಿಗೆ ಅಪೂರ್ಣ ಕಾಲದ ಪ್ರಥಮ ಪುರುಷ-ಏಕವಚನವನ್ನು ಸೂಚಿಸಲು ಪರಸ್ಮೈಪದದಲ್ಲಿ ತಿ ಪ್ರತ್ಯಯ ಬರುವುದಾದರೆ, ಆತ್ಮನೇಪದದಲ್ಲಿ ತೇ ಪ್ರತ್ಯಯ ಬರುತ್ತದೆ (ಯಜತಿ, ಯಜತೇ).

ಆದರೆ, ಈ ಮೂಲ ಉದ್ದೇಶ ಸಂಸ್ಕೃತದ ಕೆಲವು ಕ್ರಿಯಾಪದಗಳ ಬಳಕೆಯಲ್ಲಿ ಮಾತ್ರ ಕಾಣಿಸುತ್ತದೆ. ಬೇರೆ ಕೆಲವು ಕ್ರಿಯಾಪದಗಳು ಯಾವಾಗಲೂ ಆತ್ಮನೇಪದದಲ್ಲಿ ಅಥವಾ ಪರಸ್ಮೈಪದದಲ್ಲಿ ಬರುತ್ತಿದ್ದು, ಅವುಗಳ ಬಳಕೆಯಲ್ಲಿ ಈ ಅರ್ಥವ್ಯತ್ಯಾಸ ಉಳಿದಿಲ್ಲ. ಇನ್ನು ಕೆಲವು ಕ್ರಿಯಾಪದಗಳು ಕೆಲವು ಸಮಯ ರೂಪಗಳಲ್ಲಿ ಮಾತ್ರ ಈ ವ್ಯತ್ಯಾಸವನ್ನು ಉಳಿಸಿಕೊಂಡಿವೆ.

ಹೊಸಗನ್ನಡದಲ್ಲಿ ಈ ಅರ್ಥವ್ಯತ್ಯಾಸವನ್ನು ಸೂಚಿಸುವುದಕ್ಕಾಗಿ ಕ್ರಿಯಾಪದದ ಮೊದಲಿನ ಸಮಯದ ರೂಪಕ್ಕೆ ಕೊಳ್ಳು ಎಂಬುದನ್ನು ಸೇರಿಸಿ ಬಳಸಲಾಗುತ್ತದೆ (ಮಾಡು–ಮಾಡಿಕೊಳ್ಳು, ಕೊಡಿಸು–ಕೊಡಿಸಿಕೊಳ್ಳು). ಹಳೆಗನ್ನಡದಲ್ಲೂ ಕೊಳ್ ಕ್ರಿಯಾಪದಕ್ಕೆ ಇಂತಹದೇ ಬಳಕೆಯಿತ್ತಾದರೂ (ತಿಳಿ–ತಿಳಿದುಕೊಳ್), ಅದು ಹೊಸಗನ್ನಡದಲ್ಲಿ ಕಾಣಿಸುವಷ್ಟು ನಿಯಮಿತವಾಗಿ ಆ ಅರ್ಥವನ್ನು ಸೂಚಿಸುವ ಹಾಗೆ ಕಾಣಿಸುವುದಿಲ್ಲ.

(ಇ) ಕರ್ತರಿ–ಕರ್ಮಣಿ ಭೇದ: ಸಂಸ್ಕೃತದಲ್ಲಿ ಒಂದು ಘಟನೆಯನ್ನು ವರದಿ ಮಾಡುವಾಗ ಅದರ ಕರ್ತೃವಿನ ಬದಲು ಕರ್ಮಕ್ಕೆ ಪ್ರಾಧಾನ್ಯತೆಯನ್ನು ಕೊಡಬೇಕಿದ್ದಲ್ಲಿ ಬೇರೆಯೇ ಒಂದು ಕ್ರಿಯಾರೂಪವನ್ನು ಬಳಸಬೇಕಾಗುತ್ತದೆ. ಕರ್ತೃವಿಗೆ ಪ್ರಾಧಾನ್ಯತೆಯನ್ನು ಕೊಡುವ ಮೇಲೆ ವಿವರಿಸಿದ ಕ್ರಿಯಾರೂಪಗಳನ್ನು 'ಕರ್ತರಿ' ರೂಪಗಳೆಂದು ಕರೆಯಲಾಗುತ್ತದೆ, ಮತ್ತು ಕರ್ಮಕ್ಕೆ ಪ್ರಾಧಾನ್ಯತೆಯನ್ನು ಕೊಡುವ ಇವಕ್ಕಿಂತ ಭಿನ್ನವಾದ ಕ್ರಿಯಾರೂಪಗಳನ್ನು 'ಕರ್ಮಣಿ' ರೂಪಗಳೆಂದು ಕರೆಯಲಾಗುತ್ತದೆ.

ಕರ್ಮಣಿ ರೂಪಗಳನ್ನು ರಚಿಸಲು ಕ್ರಿಯಾಪದಕ್ಕೆ ಯ ಪ್ರತ್ಯಯವನ್ನು ಸೇರಿಸಬೇಕಾಗುತ್ತದೆ, ಮತ್ತು ಅದರೊಂದಿಗೆ ಆಖ್ಯಾತ ಪ್ರತ್ಯಯದ ಆತ್ಮನೇಪದ ರೂಪವನ್ನು ಬಳಸಬೇಕಾಗುತ್ತದೆ. ಇದಲ್ಲದೆ, ಕ್ರಿಯಾಪದದಲ್ಲೂ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಉದಾಹರಣೆಗಾಗಿ, ಕೃ 'ಮಾಡು' ಧಾತುವಿಗೆ ಕರ್ತರಿಯಲ್ಲಿ ಕರೋತಿ 'ಮಾಡುತ್ತಾನೆ' ರೂಪವಿದೆಯಾದರೆ, ಕರ್ಮಣಿಯಲ್ಲಿ ಕ್ರಿಯತೇ ರೂಪವಿದೆ.

ಹಳೆಗನ್ನಡದ ಕ್ರಿಯಾಪದಗಳಿಗೆ ಇಂತಹ ವಿಶಿಷ್ಟವಾದ ಕರ್ಮಣಿ ರೂಪಗಳಿಲ್ಲ. ಅವು ಕೊಡುವ ಅರ್ಥವನ್ನು ಸೂಚಿಸಬೇಕಿದ್ದಲ್ಲಿ, ಕ್ರಿಯಾಪದಗಳ ಸಂಯುಕ್ತರೂಪಗಳನ್ನು ಬಳಸಬೇಕಾಗುತ್ತದೆ (ಅವನಿಂ ಮಾಡೆ ಪಟ್ಟುದು, ಪದಕಂ ಅಕ್ಕಸಾಲೆಯಿಂ ಮಾಡಲ್ ಪಟ್ಟುದು, ತಾನ್ ಇರಲ್ ಪಟ್ಟಂ, ಇತ್ಯಾದಿ). (ಜಾಸ್ತಿ ವಿವರಗಳಿಗೆ ಕಿಟ್ಟೆಲ್ ೧೯೦೩:೩೨೩–೩೦ ನೋಡಿ).

## ೬.೧.೧ ಹಳೆಗನ್ನಡ ವೈಯಾಕರಣಿಗಳ ಸಮಸ್ಯೆಗಳು

ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳು ಆ ಭಾಷೆಯ ಕ್ರಿಯಾರೂಪಗಳನ್ನು ಮೊದಲಿಗೆ ಸಂಸ್ಕೃತದಲ್ಲಿ ಬಳಕೆಯಾಗುವ ವಿಧಾನಗಳ ಮೂಲಕವೇ ವರ್ಣಿಸಿ, ಅನಂತರ ಅವುಗಳ ಒಂದಿರುವ ನಿಯಮಗಳಿಗೆ ಒಳಗಾಗದ ರೂಪಗಳನ್ನು ಬೇರೆ ನಿಯಮಗಳ ಮೂಲಕ ವರ್ಣಿಸಲು ಪ್ರಯತ್ನಿಸಿದ್ದಾರೆ. ಇಂತಹ ತೇಪೆಕೆಲಸದಿಂದಾಗಿ ಇವರು ರಚಿಸಿದ ವ್ಯಾಕರಣ ನಿಯಮಗಳೆಲ್ಲ ಅನವಶ್ಯಕವಾಗಿ ಕ್ಲಿಷ್ಟವಾಗಿವೆ ಮತ್ತು ಸಮಸ್ಯಾತ್ಮಕಗಳಾಗಿವೆ.

ಕೇಶಿರಾಜನು (ಸೂ. ೨೩೨) ಹಳೆಗನ್ನಡ ಕ್ರಿಯಾರೂಪಗಳಲ್ಲಿ ಘಟಕವನ್ನು ಸೂಚಿಸುವುದಕ್ಕಾಗಿ ಬಳಕೆಯಾಗುವ ಪ್ರತ್ಯಯಗಳನ್ನು ಮಾತ್ರ 'ಪ್ರತ್ಯಯ'ಗಳೆಂದು (ಆಖ್ಯಾತ (ವಿಭಕ್ತಿ) ಪ್ರತ್ಯಯಗಳೆಂದು) ಕರೆದಿದ್ದಾನೆ. ಸಮಯವನ್ನು ಸೂಚಿಸುವ ಪ್ರತ್ಯಯಗಳನ್ನು ಪ್ರತ್ಯಯಗಳೆಂದು ಕರೆಯದೆ, ಆಖ್ಯಾತ ಪ್ರತ್ಯಯಗಳ ಮೊದಲು ಬರುವವುಗಳೆಂದಿಷ್ಟೇ ಹೇಳಿದ್ದಾನೆ. ಇದು ಮೇಲೆ ಸೂಚಿಸಿದಂತಹ ತೇಪೆಕೆಲಸಕ್ಕೆ ಒಂದು ಉದಾಹರಣೆ.

ಸಮಯವನ್ನು ಸೂಚಿಸುವ ಕ್ರಿಯಾರೂಪಗಳಲ್ಲಿ ಆಖ್ಯಾತ ಪ್ರತ್ಯಯ, ಸಂಸ್ಕೃತದಲ್ಲಿರುವ ಹಾಗೆ, ನೇರವಾಗಿ ಕ್ರಿಯಾಪದದ ಅನಂತರ ಬರುವುದಿಲ್ಲವಾದ ಕಾರಣ, ನಾಗವರ್ಮನು ಆಖ್ಯಾತ ಪ್ರತ್ಯಯಗಳ ಬಳಕೆಗೆ ಉದಾಹರಣೆಗಳನ್ನು ಕೊಡುವಾಗ ಸಮಯವನ್ನು ಸೂಚಿಸುವ ಕ್ರಿಯಾರೂಪಗಳ ಬದಲು ಅಲ್ಲಗಳೆಯುವ ಕ್ರಿಯಾರೂಪಗಳನ್ನು ಕೊಟ್ಟಿದ್ದಾನೆ (ದೊಡ್ಡಸ್ವಾಮಿ ೧೯೮೦:೩೯೬ ನೋಡಿ).

ಸಂಸ್ಕೃತದಲ್ಲಿ ಘಟಕವನ್ನು ಸೂಚಿಸುವ ತಿಙ್ ಪ್ರತ್ಯಯಗಳು ಘಟಕಗಳ ಪುರುಷ ಮತ್ತು ವಚನಭೇದಗಳನ್ನು ಮಾತ್ರ ಸೂಚಿಸುತ್ತವೆ; ಆದರೆ, ಹಳೆಗನ್ನಡದ ಘಟಕ ಪ್ರತ್ಯಯಗಳು ಪುರುಷ ಮತ್ತು ವಚನಗಳನ್ನು ಮಾತ್ರವಲ್ಲದೆ ಪ್ರಥಮ ಪುರುಷದಲ್ಲಿ ಲಿಂಗಭೇದವನ್ನೂ ಸೂಚಿಸುತ್ತವೆ (೯.೩ ನೋಡಿ).

ಕೇಶಿರಾಜನೇ ಮೊದಲಾದವರು ಹಳೆಗನ್ನಡದ ಕ್ರಿಯಾರೂಪಗಳಲ್ಲಿ ಪುರುಷ ಮತ್ತು ವಚನಗಳನ್ನು ಸೂಚಿಸುವುದಕ್ಕಾಗಿ ಬರುವ ಅಮ್, ಅರ್, ಅಯ್, ಇರ್, ಎನ್, ಎವು ಪ್ರತ್ಯಯಗಳನ್ನು ಮಾತ್ರವೇ ಅಖ್ಯಾತ ಪ್ರತ್ಯಯಗಳೆಂದು ಕರೆದಿದ್ದಾರೆ. ಸಂಸ್ಕೃತದ ಕ್ರಿಯಾರೂಪಗಳಲ್ಲಿ ಇಂತಹ ಆಖ್ಯಾತ ಪ್ರತ್ಯಯಗಳ ಮೂಲಕ ಪುರುಷ ಮತ್ತು ವಚನಗಳನ್ನು ಮಾತ್ರವೇ ಸೂಚಿಸಲಾಗುತ್ತದೆಯೆಂಬುದೇ ಇದಕ್ಕೆ ಕಾರಣ.

ಹಳೆಗನ್ನಡದ ಕ್ರಿಯಾರೂಪಗಳಲ್ಲಿ ಲಿಂಗಭೇದವನ್ನು ಸೂಚಿಸುವುದಕ್ಕಾಗಿ ಪ್ರಥಮಪುರುಷದಲ್ಲಿ ಬರುವ ಸ್ತ್ರೀಲಿಂಗ-ಏಕವಚನದ ಅಳ್, ನಪುಂಸಕಲಿಂಗ ಏಕವಚನದ ಉದು ಮತ್ತು ನಪುಂಸಕಲಿಂಗ-ಬಹುವಚನದ ಉವು ಇವನ್ನೆಲ್ಲ ಆಖ್ಯಾತ ಪ್ರತ್ಯಯಗಳೆಂದು ಕರೆಯದೆ ಪ್ರಥಮಪುರುಷ (ಪುಲ್ಲಿಂಗ) ಏಕವಚನ ಮತ್ತು ಬಹುವಚನ ಪ್ರತ್ಯಯಗಳ ಮೇಲೆ ಬಂದಿರುವ 'ಆದೇಶ'ಗಳೆಂದು ಕರೆಯಲಾಗಿದೆ (ಕೇಶಿರಾಜ, ಸೂ. ೨೩೬-೭ ನೋಡಿ). ಇದು ಮೇಲೆ ಸೂಚಿಸಿದಂತಹ ತೇಪೆಕೆಲಸಕ್ಕೆ ಇನ್ನೊಂದು ಉದಾಹರಣೆ.

## ೯.೨ ಸಮಯವನ್ನು ಸೂಚಿಸುವ ವಿಧಾನಗಳು

ಒಂದು ಘಟನೆ ಇಲ್ಲವೇ ಸಂಗತಿಯ ಸಮಯವನ್ನು ಸೂಚಿಸುವುದಕ್ಕಾಗಿ ಭಾಷೆಗಳಲ್ಲಿ ಮುಖ್ಯವಾಗಿ ಮೂರು ರೀತಿಯ ವಿಧಾನಗಳು ಬಳಕೆಯಲ್ಲಿವೆ:

(ಕ) ಘಟನೆ ಇಲ್ಲವೇ ಸಂಗತಿಯ ಸಮಯವನ್ನು ಆ ಘಟನೆಯನ್ನು ವರದಿಮಾಡುವ ಸಮಯಕ್ಕೆ ಸಂಬಂಧಿಸಿದಂತೆ ಸೂಚಿಸುವುದು ಇವುಗಳಲ್ಲಿ ಒಂದು ವಿಧಾನ;

(ಖ) ಘಟನೆ ಮುಗಿದುದೇ ಅಥವಾ ಮುಗಿಯದುದೇ, ಕ್ಷಣಿಕವೇ ಅಥವಾ ಜಾಸ್ತಿ ಹೊತ್ತು ನಡೆಯುವಂತಹದೇ, ಒಮ್ಮೆ ನಡೆದುದೇ ಅಥವಾ ಹಲವು ಬಾರಿ ನಡೆದುದೇ ಮೊದಲಾದಂತಹ ಘಟನೆಯ ಆಂತರಿಕ ಸಮಯ ವ್ಯವಸ್ಥೆಯನ್ನು ಸೂಚಿಸುವುದು ಎರಡನೆಯ ವಿಧಾನ; ಮತ್ತು

(ಗ) ಘಟನೆ ನಿಜವಾದುದೇ ಅಥವಾ ನಿಜವಲ್ಲದುದೇ, ಅದು ನಡೆದಿರುವ ಇಲ್ಲವೇ

ನಡೆಯಲಿರುವ ವಿಷಯದಲ್ಲಿ ಆಡುಗನ ತಿಳುವಳಿಕೆಯೆಂತಹದು (ಆತ ಸ್ವತಃ ನೋಡಿರುವುದೇ, ಅಥವಾ ಇನ್ನೊಬ್ಬರಿಂದ ಕೇಳಿ ತಿಳಿದಿರುವಂತಹದೇ) ಮೊದಲಾದಂತಹ ಘಟನೆಯ ವಿಷಯದಲ್ಲಿ ಆಡುಗನ ಮನೋಭಾವವೆಂತಹದು ಎಂಬುದನ್ನು ಸೂಚಿಸುವುದು ಮೂರನೆಯ ವಿಧಾನ.

ಘಟನೆಯ ಸಮಯ ಸಂಬಂಧವನ್ನು ಸೂಚಿಸುವುದು, ಸಮಯದ ವ್ಯವಸ್ಥೆಯನ್ನು ಸೂಚಿಸುವುದು, ಮತ್ತು ಘಟನೆಯ ಸಮಯದ ಕುರಿತು ಆಡುಗನ ಮನೋಭಾವವನ್ನು ಸೂಚಿಸುವುದು ಎಂಬುದಾಗಿ ಈ ಮೂರು ವಿಧಾನಗಳನ್ನು ಸಂಕ್ಷಿಪ್ತವಾಗಿ ವರ್ಣಿಸಲು ಸಾಧ್ಯವಿದ್ದು, ಇವನ್ನು 'ಸಮಯ ಸಂಬಂಧ', 'ಸಮಯ ವ್ಯವಸ್ಥೆ' ಮತ್ತು 'ಮನೋಭಾವ' ಎಂಬುದಾಗಿ ಹೆಸರಿಸಬಹುದು.

ಭಾಷೆಗಳ ನಡುವೆ ಸಮಯ ಸೂಚನೆಯಲ್ಲಿ ಕಾಣಿಸುವ ಒಂದು ಮುಖ್ಯ ವ್ಯತ್ಯಾಸವೇನೆಂದರೆ, ಅವು ಈ ಮೂರು ವಿಧಾನಗಳಲ್ಲಿ ಒಂದಕ್ಕೆ ಹೆಚ್ಚಿನ ಮಹತ್ವವನ್ನು ಕೊಡುತ್ತವೆ. ಉದಾಹರಣೆಗಾಗಿ, ಕನ್ನಡದಲ್ಲಿ (ಮತ್ತು ಇತರ ದ್ರಾವಿಡ ಭಾಷೆಗಳಲ್ಲಿ) ಘಟನೆಯ ಸಮಯ ಮತ್ತು ಮಾತಿನ ಸಮಯಗಳ ನಡುವಿರುವ ಸಂಬಂಧಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗಿದ್ದು, ಮೊದಲನೆಯ ವಿಧಾನ ಪ್ರಧಾನವಾದುದು.

ಆದರೆ, ಸಂಸ್ಕೃತದಲ್ಲಿ ಈ ಎರಡು ಸಮಯಗಳ ನಡುವಿರುವ ಸಂಬಂಧಕ್ಕಿಂತಲೂ ಘಟನೆಯ ಆಂತರಿಕ ಸಮಯ ವ್ಯವಸ್ಥೆಗೆ (ಇದರಲ್ಲೂ ಮುಖ್ಯವಾಗಿ ಪೂರ್ಣ ಮತ್ತು ಅಪೂರ್ಣ ಎಂಬ ವಿಭಜನೆಗೆ) ಹೆಚ್ಚಿನ ಮಹತ್ವವನ್ನು ಕೊಡಲಾಗಿದ್ದು, ಎರಡನೆಯ ವಿಧಾನ ಪ್ರಧಾನವಾದುದು.

ಟಿಬೆಟೋ-ಬರ್ಮನ್ ಕುಟುಂಬಕ್ಕೆ ಸೇರಿದ ಬರ್ಮೀಸ್ ಭಾಷೆಯಲ್ಲಿ ಆಡುಗನ ಮನೋಭಾವಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗಿದ್ದು, ಸಮಯ ಸೂಚನೆಯಲ್ಲಿ ಮೊದಲಿನ ಎರಡು ವಿಧಾನಗಳಿಗಿಂತಲೂ ಮೂರನೆಯ ವಿಧಾನ ಪ್ರಧಾನವಾದುದು (ಜಾಸ್ತಿ ವಿವರಗಳಿಗೆ ಭಟ್ ೧೯೯೯ ನೋಡಿ).

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಘಟನೆಗಳ ಸಮಯ ಸೂಚನೆಯಲ್ಲಿ ಕಾಣಿಸುವ ಈ ವ್ಯತ್ಯಾಸವನ್ನು ಅವುಗಳಲ್ಲಿ ಬಳಕೆಯಾಗುವ ಕ್ರಿಯಾರೂಪಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

ಹಳೆಗನ್ನಡದ ಕ್ರಿಯಾಪದಗಳಿಗೆಲ್ಲ ಮುಖ್ಯವಾಗಿ ಎರಡೆರಡು ಸಮಯರೂಪಗಳಿವೆ. ಇವುಗಳಲ್ಲಿ ಒಂದು ಮಾತಿನ ಸಮಯದ ಅನಂತರ ನಡೆಯುವ ಘಟನೆಗಳನ್ನು ಸೂಚಿಸುವುದಕ್ಕಾಗಿ ಬಳಕೆಯಾಗುತ್ತದೆ, ಮತ್ತು ಇನ್ನೊಂದು ಅದಕ್ಕಿಂತ ಮೊದಲು ನಡೆದ ಘಟನೆಗಳನ್ನು ಸೂಚಿಸುವುದಕ್ಕಾಗಿ ಬಳಕೆಯಾಗುತ್ತದೆ. ಈ ಎರಡು ರೂಪಗಳನ್ನು 'ಮುಂದಿನ' ಸಮಯದ (ಭವಿಷ್ಯತ್ ಕಾಲದ) ಕ್ರಿಯಾರೂಪಗಳು ಮತ್ತು 'ಹಿಂದಿನ' ಸಮಯದ (ಭೂತಕಾಲದ) ಕ್ರಿಯಾರೂಪಗಳು ಎಂಬುದಾಗಿ ಹೆಸರಿಸಬಹುದು. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಹಳೆಗನ್ನಡದ ಕ್ರಿಯಾರೂಪಗಳನ್ನು ಗಮನಿಸಬಹುದು:

| ಮುಂದಿನ ಸಮಯ | ಹಿಂದಿನ ಸಮಯ |
|---|---|
| ನಗುವನ್ | ನಕ್ಕನ್ |
| ಬರ್ಪನ್ | ಬಂದನ್ |
| ಪೋಪೆನ್ | ಪೋದೆನ್ |
| ಅಱಿವೆನ್ | ಅಱಿದೆನ್ |

| | |
|---|---|
| ಅಪ್ಪುದು | ಆಯ್ತು |
| ಈವೆನ್ | ಇತ್ತೆನ್ |
| ಎಂಬರ್ | ಎಂದರ್ |

ಹಳೆಗನ್ನಡದಲ್ಲಿ ಬರುವ ಈ ಎರಡು ರೀತಿಯ ಕ್ರಿಯಾರೂಪಗಳಲ್ಲಿ ಹಿಂದಿನ ಸಮಯದ ಕ್ರಿಯಾರೂಪಗಳನ್ನು ಸಾಧಿಸುವುದು ಸ್ವಲ್ಪ ಕಷ್ಟ. ಯಾಕೆಂದರೆ, ಈ ಕ್ರಿಯಾರೂಪಗಳಲ್ಲಿ ಬರುವ ಕ್ರಿಯಾಪದದಲ್ಲಿ, ಸಲ್>ಸನ್, ನಿಲ್>ನಿನ್, ತರ್ >ತನ್ ಇಡು>ಇಟ್, ನಗು>ನಕ್, ಕುಡು>ಕೊಟ್, ಕಿಡು>ಕೆಟ್, ಮೊದಲಾದವುಗಳಲ್ಲಿ ಕಾಣಿಸುವ ಹಾಗೆ, ಹಲವಾರು ಬದಲಾವಣೆಗಳು ನಡೆಯುತ್ತವೆ, ಮತ್ತು ಅದರೊಂದಿಗೆ ಬರುವ ಸಮಯ ಪ್ರತ್ಯಯದಲ್ಲೂ ದ್>ಟ್>ಕ್>ತ್>ಡ್>ಯ್ ಮೊದಲಾದ ಹಲಕೆಲವು ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ. ಇವನ್ನೆಲ್ಲ ಸರಿಯಾಗಿ ವರ್ಣಿಸಬೇಕಿದ್ದಲ್ಲಿ ಕ್ರಿಯಾಪದಗಳನ್ನು ಕಡಿಮೆಯೆಂದರೆ ಎಂಟು ಗುಂಪುಗಳಲ್ಲಾದರೂ ವಿಂಗಡಿಸುವ ಅವಶ್ಯಕತೆಯಿದೆ (ರಾಮಚಂದ್ರ ರಾವ್ ೧೯೭೨:೧೧೨–೧೮ ನೋಡಿ).

ಸಂಸ್ಕೃತದ ಕ್ರಿಯಾಪದಗಳಿಗೆ ಮುಖ್ಯವಾಗಿ ಅಪೂರ್ಣ ಮತ್ತು ಪೂರ್ಣಗಳೆಂಬ ಎರಡು ರೀತಿಯ ಸಮಯ ವ್ಯವಸ್ಥೆಗಳನ್ನು ಸೂಚಿಸುವ ಕ್ರಿಯಾರೂಪಗಳಿವೆ. ಇವನ್ನು ಸಂಸ್ಕೃತ ವ್ಯಾಕರಣಗಳಲ್ಲಿ ಲಟ್ ಮತ್ತು ಲಿಟ್ ರೂಪಗಳೆಂದು ಕರೆಯಲಾಗಿದೆ. ಈ ರೂಪಗಳ ನಡುವಿರುವ ವ್ಯತ್ಯಾಸವನ್ನು ಕೆಳಗಿನ ಉದಾಹರಣೆಗಳಲ್ಲಿ ಕಾಣಬಹುದು:

| **ಲಟ್ ರೂಪ** | | **ಲಿಟ್ ರೂಪ** | |
|---|---|---|---|
| ಕರೋತಿ | 'ಮಾಡುತ್ತಾನೆ' | ಚಕಾರ | 'ಮಾಡಿದ' |
| ಭವತಿ | 'ಆಗುತ್ತದೆ' | ಬಭೂವ | 'ಆಯಿತು' |
| ಬಿಭರ್ತಿ | 'ಹೊರುತ್ತಾನೆ' | ಬಭಾರ | 'ಹೊತ್ತ' |
| ರುಣದ್ಧಿ | 'ತಡೆಯುತ್ತಾನೆ' | ರುರೋಧ | 'ತಡೆದ' |
| ಚರತಿ | 'ಚಲಿಸುತ್ತದೆ' | ಚಚಾರ | 'ಚಲಿಸಿತು' |
| ಕುಪ್ಯತಿ | 'ಕೋಪಿಸುತ್ತಾನೆ' | ಚುಕೋಪ | 'ಕೋಪಿಸಿದ' |

ಈ ಎರಡು ರೀತಿಯ ಕ್ರಿಯಾರೂಪಗಳಲ್ಲಿ ಲಿಟ್ ರೂಪಗಳನ್ನು ಸಾಧಿಸುವುದು ಸುಲಭ. ಇದಕ್ಕಾಗಿ ಕ್ರಿಯಾಧಾತುವಿನ ದ್ವಿತ್ವ ರೂಪವನ್ನು ಬಳಸಬೇಕು, ಮತ್ತು ಅದರ ಸ್ವರ ಮತ್ತು ವ್ಯಂಜನಗಳಲ್ಲಿ ಕೆಲವು ಜಾಸ್ತಿ ಕ್ಲಿಷ್ಟವಲ್ಲದ ಬದಲಾವಣೆಗಳನ್ನೂ ಮಾಡಿಕೊಳ್ಳಬೇಕು. ಉದಾಹರಣೆಗಾಗಿ, ಭೂ 'ಆಗು' ಧಾತುವಿನಿಂದ ಅದರ ಲಿಟ್ ರೂಪವಾದ ಬಭೂವ ಎಂಬುದನ್ನು ಸಾಧಿಸುವಲ್ಲಿ ಆ ಧಾತುವನ್ನು ಎರಡು ಬಾರಿ ಬಳಸಲಾಗಿದ್ದು, ಮೊದಲನೆಯ ಬಳಕೆಯಲ್ಲಿ ಭೂ ಎಂಬುದನ್ನು ಬ ಎಂಬುದಾಗಿ ಬದಲಿಸಲಾಗಿದೆ.

ಆದರೆ, ಕ್ರಿಯಾಪದಗಳ ಲಟ್ ರೂಪವನ್ನು ಸಾಧಿಸಬೇಕಿದ್ದಲ್ಲಿ, ಅವುಗಳಲ್ಲಿ ಹಲವಾರು ಬಹಳ ಕ್ಲಿಷ್ಟವಾದ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಈ ಬದಲಾವಣೆಗಳನ್ನೆಲ್ಲ ಸರಿಯಾಗಿ ವರ್ಣಿಸಲು ಸಂಸ್ಕೃತದ ವೈಯಾಕರಣಿಗಳು ಧಾತುಗಳನ್ನು ಒಟ್ಟು ಹತ್ತು ಗುಂಪು(ಗಣ)ಗಳಲ್ಲಿ ವಿಂಗಡಿಸಬೇಕಾಗಿದೆ. ಇವುಗಳಲ್ಲಿ ಕೆಲವು ಧಾತುಗಳು ದ್ವಿತ್ವ ರೂಪದಲ್ಲಿ ಬರುತ್ತವೆ (ಭೃ 'ಹೊರು' ಬಿಭರ್ತಿ 'ಹೊರುತ್ತಾನೆ'), ಕೆಲವು ಸ್ವರದಲ್ಲಿ ಬದಲಾವಣೆಯನ್ನು

ತೋರಿಸುತ್ತವೆ (ಕೃ 'ಮಾಡು' ಕರೋತಿ 'ಮಾಡುತ್ತಾನೆ'), ಕೆಲವಕ್ಕೆ ಯಕಾರವನ್ನು ಸೇರಿಸಬೇಕಾಗುತ್ತದೆ (ಕುಪ್ 'ಕೋಪಿಸು' ಕುಪ್ಯತಿ 'ಕೋಪಿಸುತ್ತಾನೆ'), ಕೆಲವಕ್ಕೆ ಧಾತುವಿನೊಳಗೆ ಅನುನಾಸಿಕವೊಂದನ್ನು ತುರುಕಿಸಬೇಕಾಗುತ್ತದೆ (ಮುಚ್ 'ಬಿಡು' ಮುಂಚತಿ 'ಬಿಡುತ್ತಾನೆ'), ಇತ್ಯಾದಿ.

ಸಾಮಾನ್ಯವಾಗಿ ಸಂಸ್ಕೃತದ ಈ ಕ್ರಿಯಾರೂಪಗಳನ್ನು ಕನ್ನಡಕ್ಕೆ ಅನುವಾದಿಸುವಾಗ (ಮೇಲೆ ಕೊಟ್ಟಿರುವ ಹಾಗೆ) ಲಟ್ ರೂಪಗಳನ್ನು ಮುಂದಿನ ಅಥವಾ ಈಗಿನ ಸಮಯದ (ಭವಿಷ್ಯತ್ ಅಥವಾ ವರ್ತಮಾನ) ಘಟನೆಯನ್ನು ಸೂಚಿಸುವಂತೆಯೂ ಲಿಟ್ ರೂಪಗಳನ್ನು ಹಿಂದಿನ ಸಮಯದ (ಭೂತ) ಘಟನೆಯನ್ನು ಸೂಚಿಸುವಂತೆಯೂ ತೋರಿಸುವುದು ರೂಢಿ. ಆದರೆ, ನಿಜಕ್ಕೂ ಇವೆರಡು ರೂಪಗಳ ನಡುವಿರುವ ವ್ಯತ್ಯಾಸ ಘಟನೆಯ 'ಸಮಯ ಸಂಬಂಧ'ವನ್ನು ಸೂಚಿಸುವಂತಹದಾಗಿರದೆ ಅದರ ಆಂತರಿಕ 'ಸಮಯ ವ್ಯವಸ್ಥೆ'ಯನ್ನು ಸೂಚಿಸುವಂತಹದಾಗಿದೆ. ಲಿಟ್ ರೂಪ ಪೂರ್ಣ ಘಟನೆಯನ್ನೂ, ಲಟ್ ರೂಪ ಅಪೂರ್ಣ ಘಟನೆಯನ್ನೂ ಸೂಚಿಸುತ್ತವೆ.

ಸಂಸ್ಕೃತದಲ್ಲಿ ಸಮಯ ಸಂಬಂಧವನ್ನು ಸೂಚಿಸಲು ಕ್ರಿಯಾರೂಪಗಳಿಗೆ ಅ ಎಂಬ ಪೂರ್ವಪ್ರತ್ಯಯವನ್ನು ಸೇರಿಸಲಾಗುತ್ತದೆ. ಇದನ್ನು ಮೇಲೆ ವಿವರಿಸಿದ ಎರಡು ರೀತಿಯ (ಅಪೂರ್ಣ ಮತ್ತು ಪೂರ್ಣ) ರೂಪಗಳಿಗೂ ಸೇರಿಸಲು ಸಾಧ್ಯವಿದೆ.

ಉದಾಹರಣೆಗಾಗಿ, ಕರೋತಿ 'ಮಾಡುತ್ತಾನೆ' ಎಂಬ ಲಟ್ ರೂಪದ ಕ್ರಿಯಾಪದಕ್ಕೆ ಈ ಪ್ರತ್ಯಯವನ್ನು ಸೇರಿಸಿ ಅಕರೋತ್ 'ಮಾಡಿದ' ಎಂಬ ಲಙ್ ರೂಪವನ್ನು ಸಾಧಿಸಬಹುದು. ಇದೇ ರೀತಿಯಲ್ಲಿ ಲಿಟ್ ರೂಪಕ್ಕೆ ಅ ಪ್ರತ್ಯಯವನ್ನು ಸೇರಿಸಿ ರಚಿಸಿದ ಅಚಚಕ್ಷಂ ಎಂಬಂತಹ ಕ್ರಿಯಾರೂಪಗಳು ವೇದಕಾಲದ ಸಂಸ್ಕೃತದಲ್ಲಿ ಬಳಕೆಯಲ್ಲಿದ್ದುವು; ಆದರೆ, ಅನಂತರದ ಸಂಸ್ಕೃತದಲ್ಲಿ ಅವು ಬಳಕೆಯಿಂದ ಬಿದ್ದು ಹೋಗಿವೆ.

ಸಮಯಭೇದವನ್ನು ಸೂಚಿಸುವುದಕ್ಕಾಗಿ ಸಂಸ್ಕೃತದಲ್ಲಿ ಇನ್ನೂ ಹಲವು ಕ್ರಿಯಾರೂಪಗಳು ಬಳಕೆಯಲ್ಲಿದ್ದು, ಇವುಗಳಲ್ಲೆಲ್ಲ ಮೇಲೆ ಸೂಚಿಸಿದ ಅಪೂರ್ಣ ಮತ್ತು ಪೂರ್ಣವೆಂಬ ಸಮಯ ವ್ಯವಸ್ಥೆಯ ವ್ಯತ್ಯಾಸವೇ ಪ್ರಧಾನ ವ್ಯತ್ಯಾಸವಾಗಿ ಕಾಣಿಸಿಕೊಳ್ಳುತ್ತದೆ (ಬರೋ ೧೯೫೫:೨೯ಳ ನೋಡಿ). ವೇದ ಕಾಲದ ಸಂಸ್ಕೃತದಲ್ಲಿ ಇದು ಸ್ಪಷ್ಟವಾಗಿತ್ತು; ಆದರೆ, ಅನಂತರದ ಸಂಸ್ಕೃತದಲ್ಲಿ ಅಸ್ಪಷ್ಟವಾಗಿದೆ.

ವೇದಕಾಲದ ಅನಂತರ ಕ್ರಮೇಣ ಸಂಸ್ಕೃತ ಭಾಷೆಗೆ ಮಾತಿನ ಬಳಕೆ ತಪ್ಪಿಹೋಗಿ, ಅದು ಬರಿಯ ಗ್ರಾಂಥಿಕ ಭಾಷೆಯಾಗಿ ಉಳಿದುಕೊಂಡಿರುವುದೇ ಈ ರೀತಿ ಹಲವು ವ್ಯಾಕರಣದ ಸೂಕ್ಷ್ಮ ವ್ಯತ್ಯಾಸಗಳು ಅದರ ಬಳಕೆಯಿಂದ ಬಿದ್ದುಹೋಗಲು ಕಾರಣವಿರಬೇಕು.

ಮಾತಿನ ಬಳಕೆಯಲ್ಲೇ ಉಳಿದುಕೊಂಡಿರುವ ಹಿಂದಿ, ಮರಾಠಿ ಮೊದಲಾದ ಆಧುನಿಕ ಇಂಡೋ-ಆರ್ಯನ್ ಭಾಷೆಗಳಲ್ಲಿ ಇವತ್ತಿಗೂ ಸಮಯ ಸಂಬಂಧಕ್ಕಿಂತ ಸಮಯ ವ್ಯವಸ್ಥೆಗೆ ಹೆಚ್ಚಿನ ಮಹತ್ವವಿರುವುದನ್ನು ಸ್ಪಷ್ಟವಾಗಿ ಕಾಣಬಹುದು. ಉದಾಹರಣೆಗಾಗಿ, ಹಿಂದಿ ಭಾಷೆಯಲ್ಲಿ ಆ 'ಬರು' ಕ್ರಿಯಾಪದಕ್ಕೆ ಆತಾ ಮತ್ತು ಆಯಾ ಎಂಬ ಎರಡು ರೂಪಗಳಿದ್ದು ಇವು ಅಪೂರ್ಣ ಮತ್ತು ಪೂರ್ಣ ಘಟನೆಗಳನ್ನು ಸೂಚಿಸುವುದಕ್ಕಾಗಿ ಬಳಕೆಯಾಗುತ್ತವೆ.

ಸಮಯ ಸಂಬಂಧವನ್ನು ಸೂಚಿಸುವುದಕ್ಕಾಗಿ ಹಿಂದಿ ಭಾಷೆಯಲ್ಲಿ ಈ ಎರಡು ಕ್ರಿಯಾರೂಪಗಳೊಂದಿಗೆ ಹೈ 'ಈಗಿನ ಅಥವಾ ಮುಂದಿನ ಸಮಯ' ಮತ್ತು ಥಾ 'ಹಿಂದಿನ ಸಮಯ' ಎಂಬುದಾಗಿ ಎರಡು ಉಪಕ್ರಿಯಾಪದಗಳನ್ನು ಬಳಸಲು ಸಾಧ್ಯವಿದೆಯಾದರೂ, ಮೇಲಿನ ಪೂರ್ಣ-ಅಪೂರ್ಣ ರೂಪಗಳನ್ನು ಅಂತಹ ಉಪಕ್ರಿಯಾಪದಗಳ ಸಹಾಯವಿಲ್ಲದೆಯೂ ಬಳಸಲು ಸಾಧ್ಯವಿದೆ (೧ಗ-೨ಗ ನೋಡಿ).

(೧ಕ) ಮ್ಯೆ ಆತಾ ಹೂಂ (ಈಗಿನ ಅಥವಾ ಮುಂದಿನ ಕಾಲದ ಅಪೂರ್ಣ ಘಟನೆ)
(೧ಖ) ಮ್ಯೆ ಆತಾ ಥಾ (ಹಿಂದಿನ ಕಾಲದ ಅಪೂರ್ಣ ಘಟನೆ)
(೧ಗ) ಮ್ಯೆ ಆತಾ (ಅಪೂರ್ಣ ಘಟನೆ)

(೨ಕ) ಮ್ಯೆ ಆಯಾ ಹೂಂ (ಈಗಿನ ಅಥವಾ ಮುಂದಿನ ಕಾಲದ ಪೂರ್ಣ ಘಟನೆ)
(೨ಖ) ಮ್ಯೆ ಆಯಾ ಥಾ (ಹಿಂದಿನ ಕಾಲದ ಪೂರ್ಣ ಘಟನೆ)
(೨ಗ) ಮ್ಯೆ ಆಯಾ (ಪೂರ್ಣ ಘಟನೆ)

ಸಮಯ ವ್ಯವಸ್ಥೆಯನ್ನು ಸೂಚಿಸುವುದಕ್ಕಾಗಿ ಹಳೆಗನ್ನಡದಲ್ಲಿ ಕೆಲವು ವಿಶಿಷ್ಟವಾದ ಕ್ರಿಯಾಪದಗಳ ಬಳಕೆಯಾಗುತ್ತದಲ್ಲದೆ, ಸಂಸ್ಕೃತದ ಹಾಗೆ ಪ್ರತ್ಯಯಗಳ ಬಳಕೆಯಿಲ್ಲ. ಉದಾಹರಣೆಗಾಗಿ, ಅಱಿದತ್ತು, ಉರಿದತ್ತು ಎಂಬಂತಹ ಪ್ರಯೋಗಗಳಲ್ಲಿ ಅಱಿ ಮತ್ತು ಉರಿ ಕ್ರಿಯಾಪದಗಳೊಂದಿಗೆ ಅವು ಸೂಚಿಸುವ ಘಟನೆ ಪೂರ್ಣಗೊಂಡಿದೆಯೆಂಬ ಅರ್ಥವನ್ನು ಕೊಡುವುದಕ್ಕಾಗಿ ಆಗು ಕ್ರಿಯಾಪದದ 'ಹಿಂದಿನ' ಸಮಯದ ರೂಪ ಬಳಕೆಯಾಗಿದೆ (ರಾಮಚಂದ್ರ ರಾವ್ ೧೯೭೨:೧೨೬ ನೋಡಿ).

ಆಗು ಕ್ರಿಯಾಪದದ ಮುಂದಿನ ಸಮಯದ ರೂಪವನ್ನು ಇವೇ ಕ್ರಿಯಾಪದಗಳೊಂದಿಗೆ ಬಳಸಿ ಅವು ಸೂಚಿಸುವ ಘಟನೆ ಪೂರ್ಣಗೊಂಡಿಲ್ಲವೆಂಬ ಅರ್ಥವನ್ನು ಸೂಚಿಸಲು ಸಾಧ್ಯವಿದೆ (ಅಱಿದಪುದು, ಉರಿದಪುದು). ಇಂತಹ ಕ್ರಿಯಾರೂಪಗಳಲ್ಲಿ ದಪ ಎಂಬ 'ವರ್ತಮಾನ ಪ್ರತ್ಯಯ' ಬಂದಿದೆಯೆಂದು ಕನ್ನಡದ ವೈಯಾಕರಣಿಗಳು ಹೇಳಿರುವುದು ನಿಜಕ್ಕೂ ಸರಿಯಲ್ಲ ಎಂಬುದನ್ನು ಕೆಳಗೆ (೯.೨.೧)ರಲ್ಲಿ ತೋರಿಸಿಕೊಡಲಾಗಿದೆ.

### ೯.೨.೧ ದಪ ಮತ್ತು ವ ಪ್ರತ್ಯಯಗಳು

ಹಳೆಗನ್ನಡದಲ್ಲಿ ದ, ದಪ ಮತ್ತು ವ ಎಂಬುದಾಗಿ ಮೂರು ಕಾಲವಾಚಕ ಪ್ರತ್ಯಯಗಳಿವೆ, ಮತ್ತು ಇವು ಅನುಕ್ರಮವಾಗಿ ಭೂತ, ವರ್ತಮಾನ, ಮತ್ತು ಭವಿಷ್ಯತ್ ಕಾಲಗಳನ್ನು ಸೂಚಿಸುತ್ತವೆ ಎಂಬುದಾಗಿ ಕೇಶಿರಾಜನೇ ಮೊದಲಾದ ಹಳೆಗನ್ನಡದ ವೈಯಾಕರಣಿಗಳೆಲ್ಲರೂ ಹೇಳಿದ್ದಾರೆ. ಆದರೆ, ನಿಜಕ್ಕೂ ಹಳೆಗನ್ನಡದ ಗ್ರಂಥಗಳಲ್ಲಿ ಈ ಪ್ರತ್ಯಯಗಳ ಬಳಕೆ ಹೇಗಿದೆಯೆಂಬುದನ್ನು ಪರಿಶೀಲಿಸಿದೆವಾದರೆ, ದಪ ಮತ್ತು ವ ಪ್ರತ್ಯಯಗಳ ವಿಷಯದಲ್ಲಿ ಈ ಹೇಳಿಕೆ ಸರಿಯಲ್ಲ ಎಂಬ ವಿಷಯ ಸ್ಪಷ್ಟವಾಗುತ್ತದೆ.

ಪಂಪಭಾರತದಲ್ಲಿ ದಪ ಪ್ರತ್ಯಯ ಭವಿಷ್ಯದರ್ಥದಲ್ಲಿ ಮಾತ್ರವಲ್ಲದೆ ವರ್ತಮಾನಾರ್ಥದಲ್ಲೂ ಬಳಕೆಯಾಗುತ್ತದೆ ಎಂಬುದನ್ನು ಕೆಳಗಿನ ಪ್ರಯೋಗಗಳಲ್ಲಿ ಕಾಣಬಹುದು.

(ಕ) ಭವಿಷ್ಯದರ್ಥದಲ್ಲಿ ದಪ ಪ್ರತ್ಯಯದ ಬಳಕೆ

(೩ಕ) ಕಡಲಂ ಪೊಕ್ಕೊಡೆ ಪೀರ್ದಪೆಂ ಕಡಲನಾ ಪಾತಾಳಮಂ ಪೊಕ್ಕನಪ್ಪೊಡೆ ಶೇಷಾಹಿಯ ಪಲ್ಗಳಂ ಮುಱಿದಪೆಂ (೧೩.೭೬)
'(ದುರ್ಯೋಧನನು) ಕಡಲನ್ನು ಹೊಕ್ಕರೆ ಕಡಲನ್ನು ಹೀರುತ್ತೇನೆ, ಪಾತಾಳವನ್ನು ಹೊಕ್ಕನಾದರೆ ಆದಿಶೇಷನ ಹಲ್ಲುಗಳನ್ನು ಮುರಿಯುತ್ತೇನೆ'

(೩ಖ) ಸೆರಗಂ ಬಗೆದೊಡೆ ಸಾವಾದಪುದು (೧೧.೨೧)
'ಸಹಾಯವನ್ನು ಅಪೇಕ್ಷಿಸಿದರೆ ಸಾವಾಗುತ್ತದೆ'

(೩ಗ) ಮೊನೆಯಂಬುಗಳೊಳೆ ಪೂಣ್ದಪನ್ ಅನಿಬರುಮಂ ಕಿಱಿದು ಬೇಗದಿಂ ಹರಿಗನ್ ಅದರ್ಕೆ ಎನಗೆ ಎಡೆಮೇಱ್ಕುಮೆ ಎಂಬವೊಲ್ ಅನಿಬರುಮಂ ಪೂಣ್ದನ್ ಅತನು ನನೆಯಂಬುಗಳಿಂ (೩.೫೨)
'ಹರಿಗನು ಸ್ವಲ್ಪ ಹೊತ್ತಿನಲ್ಲಿ ಅಷ್ಟು ಜನರನ್ನೂ ಮೊನಚಾದ ಬಾಣಗಳಿಂದ ಹೂಳಿಬಿಡುತ್ತಾನೆ, ಅನಂತರ ನಾನು ಬಾಣಬಿಡುವುದಕ್ಕೆ ಸ್ಥಳ ಬೇಕಲ್ಲವೇ? ಎನ್ನುವ ಹಾಗೆ ಮನ್ಮಥನು ಅಷ್ಟು ಜನರನ್ನೂ ಪುಷ್ಪಬಾಣಗಳಿಂದ ಹೂತನು'

**(ಖ) ವರ್ತಮಾನಾರ್ಥದಲ್ಲಿ ದಪ ಪ್ರತ್ಯಯದ ಬಳಕೆ**

(೪ಕ) ಏ ಗೆಯ್ಯಲ್ ಬಗೆದಪೆ (೧೩.೬೪ವ)
'ಏನು ಮಾಡಬೇಕೆಂದು ಆಲೋಚಿಸುತ್ತಿದ್ದೀ?'

(೪ಖ) ಬಿರಯಿಯ ಮಿೞ್ತುವೆಂ ಮಿದಿದೊಡಲ್ಲದಣಂ ಮುಳಿಸಾಱದೆಂದು ಪಲ್ಮೊರೆದಪನ್ ಇಲ್ಲಿ ಮನ್ಮಥನ್ (೩.೧೩)
'ನಾನು ವಿರಹಿಗಳ ಶತ್ರುವಾಗಿದ್ದೇನೆ; ಅವರನ್ನು ತುಳಿದರಲ್ಲದೆ ನನ್ನ ಕೋಪವು ಸ್ವಲ್ಪವೂ ಆರುವುದಿಲ್ಲ ಎಂದು ಇಲ್ಲಿ ಮನ್ಮಥನು ಹಲ್ಲು ಮಸೆಯುತ್ತಿದ್ದಾನೆ'

(೪ಗ) ಎನ್ನ ಕಣ್ಣಿಂ ಕಿಡಿಯುಂ ಕೆಂಡಂಗಳುಂ ಸೂಸಿದಪುವು ಅಹಿತರಂ ನೋಡಿ (೭.೧೩)
'ಶತ್ರುಗಳನ್ನು ನೋಡಿ ನನ್ನ ಕಣ್ಣಿನಿಂದ ಕಿಡಿಯೂ ಕೆಂಡಗಳೂ ಚೆಲ್ಲುತ್ತಿವೆ'

ಮೇಲೆ (೩ಕ)ದಲ್ಲಿ ಪೀರ್ದಪೆಂ ಮತ್ತು ಮುಱಿದಪೆಂ ಎಂಬ ಎರಡು ಕ್ರಿಯಾರೂಪಗಳೂ ಷರತ್ತನ್ನು ಸೂಚಿಸುವ ಪೊಕ್ಕೊಡೆ ಮತ್ತು ಪೊಕ್ಕನಪ್ಪೊಡೆ ಎಂಬ ಕ್ರಿಯಾರೂಪಗಳ ಅನಂತರ ಬಂದಿರುವ ಕಾರಣ, ಅವು ಮುಂದೆ ನಡೆಯಬಹುದಾದ (ಎಂದರೆ ಭವಿಷ್ಯತ್ತಿನ) ಘಟನೆಗಳನ್ನು ಸೂಚಿಸುತ್ತವೆಯಲ್ಲದೆ ಮಾತನಾಡುವ ಸಮಯದಲ್ಲಿ ನಡೆಯುತ್ತಿರುವ (ವರ್ತಮಾನ) ಘಟನೆಗಳನ್ನು ಸೂಚಿಸುವುದಿಲ್ಲ. ಇದೇ ರೀತಿಯಲ್ಲಿ, (೩ಖ)ದಲ್ಲೂ ಆದಪುದು ಎಂಬ ಕ್ರಿಯಾರೂಪ ಬಗೆದೊಡೆ ಎಂಬ ಷರತ್ತನ್ನು ಸೂಚಿಸುವ ಕ್ರಿಯಾರೂಪದ ಅನಂತರ ಬಂದಿದೆಯಾದ ಕಾರಣ, ಅದಕ್ಕೂ ವರ್ತಮಾನಾರ್ಥವಿದೆಯೆಂದು ಹೇಳಲು ಸಾಧ್ಯವಿಲ್ಲ.

(೩ಗ)ದಲ್ಲಿ ಪೂಣ್ದಪಂ ಎಂಬ ಕ್ರಿಯಾರೂಪ ಸ್ವಲ್ಪ ಹೊತ್ತಿನಲ್ಲಿ (ಎಂದರೆ ಭವಿಷ್ಯತ್ತಿನಲ್ಲಿ) ಏನಾಗಬಹುದು ಎಂಬುದನ್ನು ಸೂಚಿಸುತ್ತದೆಯಲ್ಲದೆ, ಈಗಿನ ಸ್ಥಿತಿ ಏನು ಅಥವಾ ಏನು ನಡೆಯುತ್ತಾ ಇದೆ ಎಂಬುದನ್ನು ಸೂಚಿಸುವುದಿಲ್ಲ. ಈ ಎಲ್ಲಾ ಪ್ರಯೋಗಗಳಲ್ಲೂ ದಪ ಪ್ರತ್ಯಯ ಭವಿಷ್ಯದರ್ಥದಲ್ಲಿ ಬಳಕೆಯಾಗಿದೆ.

ಇದಕ್ಕೆ ಬದಲು, (೪ಕ–ಗ) ವಾಕ್ಯಗಳಲ್ಲಿ ಇದೇ ಪ್ರತ್ಯಯ ವರ್ತಮಾನಾರ್ಥದಲ್ಲಿ ಬಳಕೆಯಾಗಿದೆಯೆಂದು ಹೇಳಬೇಕಾಗುತ್ತದೆ. ಉದಾಹರಣೆಗಾಗಿ, (೪ಕ)ದಲ್ಲಿ ಬಗೆದಪೆ ಕ್ರಿಯಾರೂಪ ಮಾತನಾಡುತ್ತಿರುವ ಸಮಯದಲ್ಲಿ ಆತನಲ್ಲಿ ಎಂತಹ ಆಲೋಚನೆಯಿದೆ ಎಂಬುದನ್ನು ಪ್ರಶ್ನಿಸುತ್ತದೆ; (೪ಖ)ದಲ್ಲಿ ಬಂದಿರುವ ಪಲ್ಮೊರೆದಪನ್ ಎಂಬುದು ಮನ್ಮಥನು ಏನು ಮಾಡುತ್ತಿದ್ದಾನೆ ಎಂಬುದನ್ನು ಸೂಚಿಸುತ್ತದೆ, ಮತ್ತು (೪ಗ)ದಲ್ಲಿ ಸೂಸಿದಪುವು ಎಂಬುದು ಆ ಸಮಯದಲ್ಲಿ ಆತನ ಕಣ್ಣುಗಳು ಹೇಗಿವೆ ಎಂಬುದನ್ನು ವರ್ಣಿಸುತ್ತದೆ.

ದಪ ಪ್ರತ್ಯಯದ ಹಾಗೆಯೇ ವ (ಪ) ಪ್ರತ್ಯಯವೂ ಪಂಪಭಾರತದಲ್ಲಿ ಭವಿಷ್ಯತ್ ಮತ್ತು ವರ್ತಮಾನಾರ್ಥಗಳೆರಡರಲ್ಲೂ ಬಳಕೆಯಾಗುತ್ತದೆ ಎಂಬುದನ್ನು ಕೆಳಗಿನ ಉದಾಹರಣೆಗಳಲ್ಲಿ ಕಾಣಬಹುದು:

**(ಕ) ಭವಿಷ್ಯದರ್ಥದಲ್ಲಿ ವ ಪ್ರತ್ಯಯದ ಬಳಕೆ**

(೫ಕ) ಕರ್ಣನನ್ ಈಗಳೆ ಕುಲಜನಂ ಮಾಡಿ ತೋರ್ಪೆನ್ (೨.೮೩ವ)
‘ಕರ್ಣನನ್ನು ಈಗಲೇ ಕುಲಜನನ್ನಾಗಿ ಮಾಡಿ ತೋರಿಸುತ್ತೇನೆ’

(೫ಖ) ಆತಂಗೆ ಕಟ್ಟಿದಿರ್ ನಿಲ್ವೊಡೆ ನೀನೆ ನಿಲ್ವೆ (೧೩.೩೧)
‘ಆತನಿಗೆ ಸರಿಸಮನಾಗಿ ನಿಲ್ಲುವುದಿದ್ದರೆ ನೀನೇ ನಿಲ್ಲುತ್ತೀ (ನೀನೊಬ್ಬನೇ ನಿಲ್ಲಬಲ್ಲೆ)’

(೫ಗ) ಎಮ್ಮ ಮಗಳ್ಗೆ ಪುಟ್ಟಿದಾತಂ ರಾಜ್ಯಕ್ಕೊಡೆಯನಪ್ಪೊಡೆ ಕುಡುವೆಂ
‘ನಮ್ಮ ಮಗಳಿಗೆ ಹುಟ್ಟಿದವನು ರಾಜ್ಯಕ್ಕೊಡೆಯನಾಗುವುದಾದರೆ (ಮಗಳನ್ನು) ಕೊಡುತ್ತೇವೆ’

**(ಖ) ವರ್ತಮಾನಾರ್ಥದಲ್ಲಿ ವ ಪ್ರತ್ಯಯದ ಬಳಕೆ**

(೬ಕ) ಸಿರಿಯುಂ ಆಕೆಯ ಕೆಲದೊಳ್ ನಸು ಮಸುಳ್ದು ತೋರ್ಪಳ್ (೧.೪೦)
‘ಲಕ್ಷ್ಮೀ ದೇವಿಯೂ ಆಕೆಯ ಪಕ್ಕದಲ್ಲಿ ಸ್ವಲ್ಪ ಕಾಂತಿಹೀನಳಾಗಿ ತೋರುತ್ತಾಳೆ’

(೬ಖ) ಉದ್ಧತ ಸಿದ್ಧಖೇಚರರೆ ಕಾವರ್ (೫.೮೧)
‘(ಈ ಖಾಂಡವ ವನವನ್ನು) ಗರ್ವಿಷ್ಠರಾದ ಸಿದ್ಧಖೇಚರರೇ ಕಾಯುತ್ತಿದ್ದಾರೆ’

(೫ಕ)ದಲ್ಲಿ ತೋರ್ಪೆನ್ ಕ್ರಿಯಾರೂಪ ದುರ್ಯೋಧನನು ಮುಂದೆ ನಡೆಸಲಿರುವ ಘಟನೆಯೊಂದನ್ನು ಸೂಚಿಸುತ್ತಿದೆಯಾದ ಕಾರಣ, ಅದರಲ್ಲಿ ಬಂದಿರುವ ವ (ಪ) ಪ್ರತ್ಯಯಕ್ಕೆ ಭವಿಷ್ಯದರ್ಥವಿದೆ. ಇದೇ ರೀತಿಯಲ್ಲಿ, (೫ಖ) ಮತ್ತು (೫ಗ) ವಾಕ್ಯಗಳಲ್ಲಿ ನಿಲ್ವೆ ಮತ್ತು ಕುಡುವೆಂ ಕ್ರಿಯಾರೂಪಗಳು ಷರತ್ತನ್ನು ಸೂಚಿಸುವ ನಿಲ್ವೊಡೆ ಮತ್ತು ಅಪ್ಪೊಡೆ ಕ್ರಿಯಾರೂಪಗಳ ಅನಂತರ ಬಂದಿರುವ ಕಾರಣ, ಅವು ಆ ಷರತ್ತನ್ನು ಪೂರ್ಣಗೊಳಿಸಿದ ಮೇಲೆ, ಎಂದರೆ ಭವಿಷ್ಯತ್ಕಾಲದಲ್ಲಿ ನಡೆಯಬಹುದಾದ ಘಟನೆಗಳನ್ನು ಮಾತ್ರವೇ ಸೂಚಿಸಬಲ್ಲುವು.

ಇದಕ್ಕೆ ಬದಲು, (೬ಕ) ವಾಕ್ಯ ಮಾತನಾಡುವ ಸಮಯದಲ್ಲಿ ಲಕ್ಷ್ಮೀ ದೇವಿ ಹೇಗೆ ಕಾಣಿಸುತ್ತಿದ್ದಾಳೆ ಎಂಬುದನ್ನು ವರ್ಣಿಸುತ್ತಿದೆಯಾದ ಕಾರಣ, ಅದರಲ್ಲಿ ಬಂದಿರುವ ತೋರ್ಪಳ್ ಕ್ರಿಯಾರೂಪದಲ್ಲಿ ವ (ಪ) ಪ್ರತ್ಯಯ ವರ್ತಮಾನಾರ್ಥದಲ್ಲಿ ಬಂದಿದೆಯೆಂದು ಹೇಳಬೇಕಾಗುತ್ತದೆ. (೬ಖ)ದಲ್ಲಿ ಬಂದಿರುವ ಕಾವರ್ ಕ್ರಿಯಾರೂಪವೂ ಇದೇ ರೀತಿಯಲ್ಲಿ ವರ್ತಮಾನಾರ್ಥದಲ್ಲಿ ಬಂದಿದೆ.

ಮೇಲಿನ ಉದಾಹರಣೆಗಳಿಂದ ಒಂದು ವಿಷಯವಂತೂ ಸ್ಪಷ್ಟವಾಗುತ್ತದೆ: ದಪ ಮತ್ತು ವ ಪ್ರತ್ಯಯಗಳ ನಡುವೆ ‘ಸಮಯ ಸಂಬಂಧ’ದ ಮಟ್ಟಿಗೆ ಯಾವ ವ್ಯತ್ಯಾಸವೂ ಇಲ್ಲ. ಎರಡನ್ನೂ ವರ್ತಮಾನಾರ್ಥದಲ್ಲೂ ಬಳಸಬಹುದು, ಭವಿಷ್ಯದರ್ಥದಲ್ಲೂ ಬಳಸಬಹುದು. ಹಾಗಾದರೆ ಅವುಗಳ ನಡುವೆ ಅರ್ಥದಲ್ಲಿ ವ್ಯತ್ಯಾಸವೇನಾದರೂ ಇದೆಯೇ? ಮತ್ತು ಇದೆಯಾದರೆ ಅದು

ಎಂತಹದು? ಇದನ್ನು ತಿಳಿಯಲು ಈ 'ಪ್ರತ್ಯಯ'ಗಳ ಚರಿತ್ರೆಯೆಂತಹದು ಎಂಬುದನ್ನು ಪರಿಶೀಲಿಸುವ ಅವಶ್ಯಕತೆಯಿದೆ.

ನಿಜಕ್ಕೊ ಪೀರ್ದಪೆಂ, ಮುಱಿದಪೆಂ, ಬಗೆದಪೆ, ಸೂಸಿದಪುವು ಮೊದಲಾದ ಕ್ರಿಯಾರೂಪಗಳಲ್ಲಿ ಕಾಣಿಸುವ ಈ ದಪ ಎಂಬುದು ದ ಮತ್ತು ವ (ಪ) ಪ್ರತ್ಯಯಗಳಿಂದ ಭಿನ್ನವಾಗಿರುವ ಮೂರನೆಯದೊಂದು ಪ್ರತ್ಯಯವೇ ಅಲ್ಲ; ಅದು ದ ಮತ್ತು ವ (ಪ) ಪ್ರತ್ಯಯಗಳ ಸೇರಿಕೆ ಮಾತ್ರ. ಹಿಂದಿನ ಸಮಯ ಮತ್ತು ಮುಂದಿನ ಸಮಯಗಳನ್ನು ಸೂಚಿಸುವ ದ ಮತ್ತು ವ (ಪ) ಪ್ರತ್ಯಯಗಳು ಈ ರೀತಿ ಒಟ್ಟಿಗೆ ಬರಲು ಈ ಕ್ರಿಯಾರೂಪಗಳಲ್ಲಿ ನಡೆದ ಕೆಲವು ಬದಲಾವಣೆಗಳೇ ಕಾರಣವಿರಬೇಕು.

ಹಳೆಗನ್ನಡದಲ್ಲಿ ದಪ ಪ್ರತ್ಯಯ ಕೆಲವು ಸಂದರ್ಭಗಳಲ್ಲಿ ದಪ್ಪ ರೂಪದಲ್ಲೂ ಕಾಣಿಸಿಕೊಳ್ಳುತ್ತದೆ. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ಬಳಕೆಯನ್ನು ಗಮನಿಸಬಹುದು:

(೭) ಇವರ್ ಗಜೆಗೊಂಡೆನಪ್ಪೊಡೆ ಈಗಡೆ ಪರೆದಪ್ಪರ್ (೧೧.೧೪೨)
'ಗದೆಯನ್ನು ತೆಗೆದುಕೊಂಡರೆ ಇವರು ಈಗಲೇ ಚದರಿಹೋಗುತ್ತಾರೆ'

(೭)ನೇ ವಾಕ್ಯದ ಪರೆದಪ್ಪರ್ ಕ್ರಿಯಾರೂಪದಲ್ಲಿ ದಪ ಎಂಬುದು ದಪ್ಪ ರೂಪದಲ್ಲಿದೆ. ಈ ಕ್ರಿಯಾರೂಪವನ್ನು ಪರಿಶೀಲಿಸಿದಾಗ, ಅದರಲ್ಲಿ ಪರೆ ಕ್ರಿಯಾಪದದ ಸಾಮಾನ್ಯ ರೂಪವೊಂದು ಬಂದಿರುವ ಬದಲು ಅದರೊಂದಿಗೆ ಬೇರೊಂದು ಕ್ರಿಯಾಪದದ ಕ್ರಿಯಾರೂಪ ಸೇರಿರುವ ಹಾಗೆ ಕಾಣಿಸುತ್ತದೆ. ಪರೆ ಕ್ರಿಯಾಪದದ ಸಂಬಂಧಿಸುವ ರೂಪವಾದ ಪರೆದ ಎಂಬುದರೊಂದಿಗೆ ಆಗು ಕ್ರಿಯಾಪದದ ಮುಂದಿನ ಸಮಯದ ರೂಪವಾದ ಅಪ್ಪರ್ ಎಂಬುದನ್ನು ಸೇರಿಸಿ ಮೇಲಿನ ಪರೆದಪ್ಪರ್ ರೂಪವನ್ನು ತಯಾರಿಸಿರಬಹುದೇ?

ಕಿಟ್ಟೆಲ್ (೧೯೦೩:೧೨೫) ಅವರು ಇಂತಹ ಅಭಿಪ್ರಾಯವನ್ನು ನಮ್ಮ ಮುಂದಿರಿಸಿದ್ದಾರೆ. ಕ್ರಿಯಾಪದಗಳ ಸಂಬಂಧಿಸುವ ರೂಪ(ಭೂತವಿಭಕ್ತಿಕೃತ್)ದೊಂದಿಗೆ ಆಗು ಕ್ರಿಯಾಪದದ ಭವಿಷ್ಯದ್ರೂಪಗಳನ್ನು ಸೇರಿಸಿ ಈ ಕ್ರಿಯಾರೂಪಗಳನ್ನು ತಯಾರಿಸಲಾಗಿದೆಯೆಂದು ಅವರು ಅಭಿಪ್ರಾಯಪಟ್ಟಿದ್ದಾರೆ.

ಆದರೆ, ಹೀಗೆ ಹೇಳುವುದರಲ್ಲಿ ಒಂದು ಮುಖ್ಯವಾದ ಸಮಸ್ಯೆಯಿದೆ. ಹಳೆಗನ್ನಡದಲ್ಲಿ ಕೃದಂತರೂಪ(ಕ್ರಿಯಾಪದದ ಸಂಬಂಧಿಸುವ ರೂಪ)ವನ್ನು ನೇರವಾಗಿ ಬೇರೊಂದು ಕ್ರಿಯಾಪದದೊಂದಿಗೆ ಬಳಸಲು ಸಾಧ್ಯವಾಗದು. ಅದನ್ನು ನಾಮಪದದೊಂದಿಗೆ ಮಾತ್ರವೇ ಬಳಸಲು ಸಾಧ್ಯ. ಕ್ರಿಯಾಪದದೊಂದಿಗೆ ಬಳಸಬೇಕಿದ್ದಲ್ಲಿ, ಅದಕ್ಕೆ ಲಿಂಗ-ವಚನ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ನಾಮರೂಪಕ್ಕೆ ಬದಲಾಯಿಸಿಕೊಳ್ಳುವ ಅವಶ್ಯಕತೆಯಿದೆ (೬.೧.೩ ನೋಡಿ).

ಹಾಗಾಗಿ, ಮೊದಲಿಗೆ ಈ ಕ್ರಿಯಾರೂಪಗಳು ನಾಮರೂಪದಲ್ಲಿದ್ದು, ಅನಂತರ ಈಗಿನ ರೂಪಕ್ಕೆ ಬದಲಾಯಿಸಿವೆ ಎಂದು ಹೇಳಬೇಕಾಗುತ್ತದೆ. ಉದಾಹರಣೆಗಾಗಿ, ಪರೆದಪ್ಪರ್ ಎಂಬುದು ಮೊದಲಿಗೆ ಪರೆದರಪ್ಪರ್ (ಪರೆದರ್ ಅಪ್ಪರ್) ಎಂದಿದ್ದು, ಅನಂತರ ಅದರಲ್ಲಿದ್ದ ಮೊದಲನೆಯ ಅರ್ ಪ್ರತ್ಯಯ ಬಿದ್ದು ಹೋಗಿ, ಪರೆದಪ್ಪರ್ ಎಂಬುದಾಗಿ ಬದಲಾಯಿತೆಂದು ಹೇಳುವುದೇ ಸರಿಯೆಂದು ತೋರುತ್ತದೆ. ಲಿಂಗ-ವಚನಗಳನ್ನು ಸೂಚಿಸುವ (ಅರ್ ಎಂಬಂತಹ) ಪ್ರತ್ಯಯ ಎರಡು ಬಾರಿ ಬರುವ ಅವಶ್ಯಕತೆಯಿಲ್ಲವಾದ ಕಾರಣ, ಮೊದಲನೇ ಕ್ರಿಯಾರೂಪದಿಂದ ಅದು ಬಿದ್ದುಹೋಗಿರಬೇಕು.

ಈ ರೀತಿ ಕ್ರಿಯಾಪದದ ನಾಮರೂಪದೊಂದಿಗೆ ಆಗು ಕ್ರಿಯಾಪದದ ಮುಂದಿನ ಸಮಯದ ರೂಪಗಳನ್ನು (ಮತ್ತು ಬೇರೆ ಕೆಲವು ಕ್ರಿಯಾರೂಪಗಳನ್ನು) ಬಳಸಿ ತಯಾರಿಸಿದ ರಚನೆಗಳು ಹೊಸಗನ್ನಡದಲ್ಲಿ ಇವತ್ತಿಗೂ ಬಳಕೆಯಲ್ಲಿವೆ. ಉದಾಹರಣೆಗಾಗಿ ಬರುವವನಾಗುತ್ತೇನೆ, ಬರುವವನಾಗು ಎಂಬಂತಹ ಬಳಕೆಗಳನ್ನು ಗಮನಿಸಬಹುದು. ಆದರೆ ಈ ಬಳಕೆಗಳಲ್ಲಿ ಮೊದಲನೆಯ ಕ್ರಿಯಾ ಪದದೊಂದಿಗೆ ಲಿಂಗ–ವಚನಗಳನ್ನು ಸೂಚಿಸುವ ಸರ್ವನಾಮದ (ಸರ್ವಪದದ) ರೂಪಗಳು ಹಾಗೆಯೇ ಉಳಿದುಕೊಂಡಿವೆ.

ಹಾಗಾಗಿ, ಮೇಲ್ನೋಟಕ್ಕೆ ಅರಿದಪ್ಪಂ ಎಂಬಂತಹ ಕ್ರಿಯಾರೂಪಗಳಲ್ಲಿ ಕೃದಂತದೊಂದಿಗೆ ಕ್ರಿಯಾರೂಪ ಬಂದಿದೆಯೆಂದು ಕಾಣಿಸುವುದಾದರೂ, ಅದಕ್ಕೆ ಮೂಲದಲ್ಲಿ ಕ್ರಿಯಾಪದಗಳ ನಾಮರೂಪ(ಕೃಲ್ಲಿಂಗ)ವಿತ್ತೆಂದು ಹೇಳುವುದೇ ಸರಿ ಎಂದು ತೋರುತ್ತದೆ.

ಹಳೆಗನ್ನಡದ ದಪ ಮತ್ತು ವ 'ಪ್ರತ್ಯಯ'ಗಳ ನಡುವೆ ಅರ್ಥದಲ್ಲಿ ಎಂತಹ ವ್ಯತ್ಯಾಸವಿತ್ತು ಎಂಬ ಪ್ರಶ್ನೆಗೆ ಉತ್ತರವನ್ನೂ ಮೇಲಿನ ಚಾರಿತ್ರಿಕ ಕಲ್ಪನೆಯೇ ಕೊಡಬಲ್ಲುದೆಂದು ನನಗೆ ತೋರುತ್ತದೆ. ಹೊಸಗನ್ನಡದಲ್ಲಿ ಬರುತ್ತೇನೆ ಮತ್ತು ಬರುವವನಾಗುತ್ತೇನೆ ಎಂಬವುಗಳ ನಡುವೆ ಎಂತಹ ಅರ್ಥವ್ಯತ್ಯಾಸವಿದೆಯೋ ಅಂತಹದೇ ವ್ಯತ್ಯಾಸ ಹಳೆಗನ್ನಡದ ಬರ್ಪೆನ್ ಮತ್ತು ಬಂದಪೆನ್ ಎಂಬವುಗಳ ನಡುವೆಯೂ ಇದ್ದಿರಬೇಕು. ಇದು ಸಮಯ ಸಂಬಂಧಕ್ಕಿಂತಲೂ ಸಮಯ ವ್ಯವಸ್ಥೆಗೆ ಸಂಬಂಧಿಸಿದ ವ್ಯತ್ಯಾಸವೆಂದು ತೋರುತ್ತದೆ (೯.೨ ನೋಡಿ).

ಹಳೆಗನ್ನಡದಲ್ಲಿ ಈ ಎರಡು ರೀತಿಯ ಕ್ರಿಯಾರೂಪಗಳ ಬಳಕೆಯನ್ನು ಇನ್ನಷ್ಟು ಸೂಕ್ಷ್ಮವಾಗಿ ಮತ್ತು ವಿಸ್ತಾರವಾಗಿ ಪರಿಶೀಲಿಸಿದಲ್ಲಿ ಅವುಗಳ ನಡುವೆ ನಿಜಕ್ಕೂ ಎಂತಹ ಅರ್ಥವ್ಯತ್ಯಾಸವಿದೆ ಎಂಬುದು ಹೆಚ್ಚು ಸ್ಪಷ್ಟವಾಗಬಲ್ಲುದು.

### ೯.೨.೨ ಅತ್ತು ಪ್ರತ್ಯಯದ ಬಳಕೆ

ಹಳೆಗನ್ನಡದಲ್ಲಿ ಬಳಕೆಯಾಗುವ ಅಱಿದತ್ತು, ಉರಿದತ್ತು, ಬಿಟ್ಟಿತ್ತು, ಮಸುಳ್ದತ್ತು ಮೊದಲಾದ ಕ್ರಿಯಾರೂಪಗಳೂ, ಮೇಲಿನ ಕ್ರಿಯಾರೂಪಗಳ ಹಾಗೆ, ಎರಡು ಕ್ರಿಯಾರೂಪಗಳ ಸೇರಿಕೆಯಿಂದ ಸಿದ್ಧವಾದ ರೂಪಗಳಿರಬೇಕೆಂದು ರಾಮಚಂದ್ರ ರಾವ್ (೧೯೭೨:೧೨೬) ವಾದಿಸಿದ್ದಾರೆ. ಇವುಗಳಲ್ಲಿ ಕ್ರಿಯಾಪದದ ಹಿಂದಿನ ಸಮಯದ ಸಂಬಂಧಿಸುವ ರೂಪದೊಂದಿಗೆ ಆಗು ಕ್ರಿಯಾಪದದ ಹಿಂದಿನ ಸಮಯದ ಪೂರ್ಣರೂಪಗಳು ಬಂದಿವೆಯೆಂಬುದು ಅವರ ಅಭಿಪ್ರಾಯ. (ಇಂತಹ ಸೇರಿಕೆಯ ರೂಪಗಳು ನಪುಂಸಕ ಏಕವಚನದಲ್ಲಿ ಮಾತ್ರ ಕಾಣಿಸುತ್ತವೆ).

ಆದರೆ, ಹಳೆಗನ್ನಡದಲ್ಲಿ ಕ್ರಿಯಾಪದದ ಸಂಬಂಧಿಸುವ ರೂಪಗಳು ನೇರವಾಗಿ ಇನ್ನೊಂದು ಕ್ರಿಯಾಪದದೊಂದಿಗೆ ಬರಲಾರವಾದ ಕಾರಣ, ಇಲ್ಲಿಯೂ ಮೇಲೆ ವಿವರಿಸಿದಂತಹ ಸಂಬಂಧಿಸುವ ಪದದ ನಾಮರೂಪವೊಂದನ್ನು ಕಲ್ಪಿಸಿಕೊಳ್ಳುವ ಅವಶ್ಯಕತೆಯಿದೆ. ಕಾಲಕ್ರಮೇಣ, ಇದರ ಲಿಂಗ–ವಚನ ಪ್ರತ್ಯಯಗಳು ಬಿದ್ದುಹೋಗಿರಬಹುದು.

ಇನ್ನೊಂದು ಸಮಸ್ಯೆಯೇನೆಂದರೆ, ಆಗು ಕ್ರಿಯಾಪದದ ಹಿಂದಿನ ಸಮಯದ ರೂಪ ನಪುಂಸಕ ಏಕವಚನದಲ್ಲಿ ಆಯ್ತು ಎಂದಿದೆ. ಇದು ಅತ್ತು ಎಂಬುದಾಗಿ ಬದಲಾದುದು ಹೇಗೆ ಎಂಬುವನ್ನೂ ವಿವರಿಸುವ ಅವಶ್ಯಕತೆಯಿದೆ.

ಕೇಶಿರಾಜನ ಶಬ್ದಮಣಿದರ್ಪಣದ ಪ್ರಕಾರ (ಸೂತ್ರ ೨೩೭ ನೋಡಿ), ಈ ಕ್ರಿಯಾರೂಪಗಳಲ್ಲಿ ನಪುಂಸಕ ಏಕವಚನದ ಪ್ರತ್ಯಯ ಉದು ರೂಪಕ್ಕೆ ಬದಲಾಗಿ ಅತ್ತು ರೂಪವಲ್ಲಿ ಬಂದಿದೆ. ಆದರೆ,

ಹೀಗೆ ಹೇಳುವುದರಿಂದ, ಈ ಕ್ರಿಯಾರೂಪಗಳಿಗೂ ಅಱಿದುದು, ಉರಿದುದು, ಬಿಟ್ಟುದು, ಮಸುಳ್ದುದು ಮೊದಲಾದುವಕ್ಕೂ ನಡುವೆ ಅರ್ಥದಲ್ಲಿ ಏನೂ ವ್ಯತ್ಯಾಸವಿಲ್ಲ ಎಂದು ಹೇಳಿದ ಹಾಗಾಗುತ್ತದೆ. ಇದು ನಿಜವೇ ಎಂಬುದನ್ನು ಹಳೆಗನ್ನಡದ ಗ್ರಂಥಗಳಲ್ಲಿ ಈ ಎರಡು ರೂಪಗಳ ಬಳಕೆಯೆಂತಹದು ಎಂಬುದನ್ನು ಪರಿಶೀಲಿಸುವುದರ ಮೂಲಕ ನಿರ್ಧರಿಸಬಹುದು.

ಪಂಪಭಾರತದಲ್ಲಿ ಈ ಎರಡು ಕ್ರಿಯಾರೂಪಗಳ ನಡುವೆ ಅರ್ಥದಲ್ಲಿ ವ್ಯತ್ಯಾಸವಿರುವ ಹಾಗೆ ಕಾಣಿಸುತ್ತದೆ. ಉದಾಹರಣೆಗಾಗಿ ಅತ್ತು ಕ್ರಿಯಾರೂಪ ಬಂದಿರುವ ಹಲವು ಸಂದರ್ಭಗಳಲ್ಲಿ, ಕೆಳಗೆ ಕಾಣಿಸಿದ ಹಾಗೆ, ಅಂತೆ 'ಹಾಗೆ' ಪದದ (ಉಪಮೆಯ) ಪ್ರಯೋಗವಿದೆ.

(೮ಕ) ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು (೮.೧೬)
'ಶಿವನ ಬಾಣ ಶರೀರವನ್ನು ಭಾಗ ಮಾಡಿದ ಹಾಗೆ ಒಳನುಗ್ಗಿತು'

(೮ಖ) ಉರಿಮುಟ್ಟಿದರಳೆಯಂತೆ ಅಂಬರಂ ಉರಿದತ್ತು (೧೦.೩೬)
'ಬೆಂಕಿ ತಗಲಿದ ಹತ್ತಿಯ ಹಾಗೆ ಆಕಾಶ ಉರಿಯಿತು'

(೮ಗ) ದೇವದುಂದುಭಿ ಜಯಪ್ರಾರಂಭಮಂ ಸಾಱುವಂತೆ ಎಸೆದತ್ತು (೯.೯೬)
'ದೇವದುಂದುಭಿರವವು ಜಯೋದ್ಯೋಗವನ್ನು ಸಾರುವ ಹಾಗೆ ಎಸೆದುದು'

ಆದರೆ, ಬೇರೆ ಕೆಲವು ಬಳಕೆಗಳಲ್ಲಿ ಅತ್ತು ಮತ್ತು ತು ಪ್ರತ್ಯಯಗಳ ನಡುವೆ ಅರ್ಥದ ಮಟ್ಟಿಗೆ ಯಾವ ವ್ಯತ್ಯಾಸವೂ ಇಲ್ಲದ ಹಾಗೆಯೂ ಅನಿಸುತ್ತದೆ. ಉದಾಹರಣೆಗಾಗಿ, ಕೆಳಗಿನ ಎರಡು ಬಳಕೆಗಳನ್ನು ಹೋಲಿಸಿ ನೋಡಬಹುದು.

(೯ಕ) ನೀಳ ನೀರರುಹಮಂ ಪೋಲ್ದತ್ತು ಕಬ್ಬಿಂದುವಾ (೪.೫೧)
'ಆ ಚಂದ್ರನ ಕಲೆ ಕನ್ನೈದಿಲೆಯ ಹೂವನ್ನು ಹೋಲುತ್ತಿತ್ತು'

(೯ಖ) ಮೂಱು ಲೋಕಮನೆ ಪೋಲ್ತುದು ಸ್ವಯಂವರಂ (೩.೫೩)
'ಸ್ವಯಂವರವು ಮೂರು ಲೋಕವನ್ನೂ ಹೋಲುತ್ತಿತ್ತು'

ಈ ವಿಷಯದಲ್ಲಿ ಹೆಚ್ಚಿನ ಸಂಶೋಧನೆ ನಡೆಸುವ ಅವಶ್ಯಕತೆಯಿದೆ.

### ೯.೨.೩ ಘಟನೆಗಳ ನಡುವಿನ ಸಮಯ ಸಂಬಂಧ

ಹಳೆಗನ್ನಡದಲ್ಲಿ ಘಟನೆಯ ಸಮಯವನ್ನು ಮಾತಿನ ಸಮಯಕ್ಕೆ ಸಂಬಂಧಿಸಿದ ಹಾಗೆ ಸೂಚಿಸಬಲ್ಲ ಕ್ರಿಯಾರೂಪಗಳು ಮಾತ್ರವಲ್ಲದೆ, ಬೇರೊಂದು ಘಟನೆಯ ಸಮಯಕ್ಕೆ ಸಂಬಂಧಿಸಿದ ಹಾಗೆ ಸೂಚಿಸಬಲ್ಲ ಕ್ರಿಯಾರೂಪಗಳೂ ಬಳಕೆಯಲ್ಲಿವೆ. ಈ ಕ್ರಿಯಾರೂಪಗಳು ಮಾತಿನ ಸಮಯಕ್ಕೆ ಸಂಬಂಧಿಸಿದ ಹಾಗೆ ಘಟನೆಯ ಸಮಯವನ್ನು ಸೂಚಿಸುವ ಕ್ರಿಯಾರೂಪಗಳಿಗಿಂತ ಸ್ವಲ್ಪ ಮಟ್ಟಿಗೆ ಭಿನ್ನವಾಗಿಯೂ ಇವೆ.

ಎರಡು ಘಟನೆಗಳ ನಡುವೆ ಸಮಯದ ಮಟ್ಟಿಗೆ ಮೂರು ರೀತಿಯ ಸಂಬಂಧಗಳಿರಲು ಸಾಧ್ಯವಿದೆ: (ಕ) ಅವುಗಳಲ್ಲಿ ಒಂದು ಘಟನೆ ಇನ್ನೊಂದು ಘಟನೆಗಿಂತ ಮೊದಲು ನಡೆದುದಿರಬಹುದು, (ಖ) ಅನಂತರ ನಡೆಯುವುದಿರಬಹುದು, ಇಲ್ಲವೇ (ಗ) ಅವೆರಡೂ ಒಂದೇ ಸಮಯದಲ್ಲಿ

ನಡೆಯುವಂತಹವಿರಬಹುದು. ಎರಡು ಘಟನೆಗಳ ನಡುವೆ ಕಾಣಿಸಬಲ್ಲ ಈ ಮೂರು ಸಮಯ ಸಂಬಂಧಗಳನ್ನು 'ಮೊದಲಿನ ಸಮಯ', 'ಅನಂತರದ ಸಮಯ' ಮತ್ತು 'ಒಂದೇ ಸಮಯ' ಎಂಬುದಾಗಿ ಹೆಸರಿಸಬಹುದು.

ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಪಂಪಭಾರತದ ಬಳಕೆಗಳನ್ನು ಗಮನಿಸಬಹುದು:

(೧೦ಕ) ಈ ಪುಯ್ಯಲನ್ ಆರಯ್ದು ಬರ್ಪೆನ್ (೩.೨೪ವ)
'ಈ ಪ್ರಲಾಪವನ್ನು ವಿಚಾರಿಸಿ ಬರುತ್ತೇನೆ'

(೧೦ಖ) ಸುಖದಿಂ ರಾಜ್ಯಂ ಗೆಯ್ಯುತ್ತ ಇರಿಂ (೪.೮ವ)
'ಸುಖದಿಂದ ರಾಜ್ಯವಾಳುತ್ತ ಇರಿ'

(೧೦ಕ)ದಲ್ಲಿ ವಿಚಾರಿಸುವ ಘಟನೆ ಬರುವ ಘಟನೆಗಿಂತ ಮೊದಲು ನಡೆಯುವಂತಹದೆಂದು ಸೂಚಿಸಲಾಗಿದೆ; ಆದರೆ, (೧೦ಖ)ದಲ್ಲಿ ರಾಜ್ಯವಾಳುವ ಘಟನೆ ಮತ್ತು ಇರುವ ಘಟನೆ ಇವೆರಡೂ ಒಂದೇ ಸಮಯದಲ್ಲಿ ನಡೆಯುವಂತಹವೆಂದು ಸೂಚಿಸಲಾಗಿದೆ.

ಹಳೆಗನ್ನಡದಲ್ಲಿ ಈ ಕ್ರಿಯಾರೂಪಗಳು, ಕ್ರಿಯಾಪದಗಳ ವಿಶೇಷಣಗಳ ಹಾಗೆ, ಗುಣಪದಗಳ ಜಾಗದಲ್ಲಿ ಬಳಕೆಯಾಗುತ್ತವೆ. ಆದರೆ, ಇವು ನಾಮಪದಗಳ ವಿಶೇಷಣಗಳಾಗಿ ಬರುವ ಗುಣರೂಪಗಳಿಂದ ಭಿನ್ನವಾಗಿವೆ ಎಂಬುದನ್ನು ಗಮನಿಸಬಹುದು. ಉದಾಹರಣೆಗಾಗಿ, ಮಾಡು ಕ್ರಿಯಾಪದಕ್ಕೆ ನಾಮಪದಗಳ ವಿಶೇಷಣಗಳಾಗಿ ಬಳಸಲು ಮಾಡಿದ, ಮಾಳ್ಪ (ಮಾಡುವ), ಮತ್ತು ಮಾಡದ ಎಂಬ ಗುಣರೂಪ(ಕೃದಂತರೂಪ)ಗಳಿವೆಯಾದರೆ, ಕ್ರಿಯಾಪದಗಳ ವಿಶೇಷಣಗಳಾಗಿ ಬಳಸಲು ಮಾಡಿ, ಮಾಡಲ್, ಮಾಡುತ್ತೆ, ಮತ್ತು ಮಾಡದೆ ಎಂಬ ಗುಣರೂಪಗಳಿವೆ. ಈ ಎರಡನೇ ರೀತಿಯ ಗುಣರೂಪಗಳನ್ನು ಇಲ್ಲಿ ಕ್ರಿಯಾಪದಗಳ ಜೋಡಿಸುವ ರೂಪಗಳೆಂದು ಕರೆಯಲಾಗಿದೆ.

ಸಂಸ್ಕೃತದಲ್ಲಿ ಮೇಲಿನ ಎರಡು ಸಂದರ್ಭಗಳಲ್ಲೂ ಕ್ರಿಯಾಪದಗಳ ನಾಮರೂಪ(ಕೃದಂತ)ಗಳನ್ನೇ ಬಳಸಲಾಗುತ್ತದೆ. ಗತ್ವಾ, ಕೃತ್ವಾ ಎಂಬಂತಹ ರೂಪಗಳು ಮಾತ್ರ ಇದಕ್ಕೆ ಅಪವಾದಗಳಾಗಿವೆ (ಜಾಸ್ತಿ ವಿವರಗಳಿಗೆ (೧೦.೨-೩) ನೋಡಿ).

### ೯.೩ ಘಟಕವನ್ನು ಸೂಚಿಸುವುದು

ಘಟನೆಯನ್ನು ಸೂಚಿಸುವ ವಾಕ್ಯಗಳಲ್ಲಿ ಕ್ರಿಯಾಪದಗಳು ಘಟನೆಯನ್ನೂ, ನಾಮಪದಗಳು (ಇಲ್ಲವೇ ನಾಮಪದ ಕಂತೆಗಳು) ಘಟನೆಯಲ್ಲಿ ತೊಡಗಿಕೊಂಡಿರುವ ವ್ಯಕ್ತಿ, ವಸ್ತು ಮೊದಲಾದ 'ಘಟಕ'ಗಳನ್ನೂ ಸೂಚಿಸುತ್ತವೆ. ಉದಾಹರಣೆಗಾಗಿ, ಕೆಳಗಿನ ಹಳೆಗನ್ನಡ ವಾಕ್ಯವನ್ನು ಗಮನಿಸಬಹುದು:

(೧೧) ಅರಸನ್ ಲಲನೆಗೆ ಪೂಮಾಲೆಯನ್ ಇತ್ತನ್
'ಅರಸನು ಲಲನೆಗೆ ಹೂಮಾಲೆಯನ್ನು ಕೊಟ್ಟನು'

ಮೇಲಿನ ವಾಕ್ಯದಲ್ಲಿ ಈ 'ಕೊಡು' ಕ್ರಿಯಾಪದದ ಇತ್ತನ್ ರೂಪ ಆ ವಾಕ್ಯ ತಿಳಿಸಬೇಕಾಗಿರುವ ಘಟನೆ ಯಾವುದು ಎಂಬುದನ್ನು ಸೂಚಿಸುತ್ತದೆ, ಮತ್ತು ಅದರೊಂದಿಗೆ ಬಂದಿರುವ ಅರಸನ್,

ಲಲನೆ ಮತ್ತು ಪೂಮಾಲೆ ಎಂಬ ನಾಮಪದಗಳು ಆ ಘಟನೆಯಲ್ಲಿ ತೊಡಗಿಕೊಂಡಿರುವ ಘಟಕಗಳು ಯಾವುವು ಎಂಬುದನ್ನು ಸೂಚಿಸುತ್ತವೆ.

ವಾಕ್ಯದಲ್ಲಿ ಬರುವ ನಾಮಪದಗಳು ಮಾತ್ರವಲ್ಲದೆ, ಕ್ರಿಯಾರೂಪದ ಕೊನೆಯಲ್ಲಿ ಬರುವ 'ಆಖ್ಯಾತ' ಪ್ರತ್ಯಯವೂ ಘಟನೆಯಲ್ಲಿ ತೊಡಗಿಕೊಂಡಿರುವ ಘಟಕವೊಂದನ್ನು ಸೂಚಿಸಬಲ್ಲುದು ಎಂಬುದನ್ನು ಮೇಲೆ ಕೊಟ್ಟಿರುವ (೧೧)ನೇ ವಾಕ್ಯದಲ್ಲಿ ಕಾಣಬಹುದು. ಇತ್ತನ್ ಕ್ರಿಯಾರೂಪದ ಕೊನೆಯಲ್ಲಿ ಬಂದಿರುವ ಅನ್ ಪ್ರತ್ಯಯ ಈ ಘಟನೆಯನ್ನು ನಡೆಸಿದವನು ಅರಸ ಎಂಬುದನ್ನು ಬಹಳ ಸೂಕ್ಷ್ಮವಾಗಿ (ಎಂದರೆ ಹಾಗೆ ನಡೆಸಿದವನು ಒಬ್ಬ ಮನುಷ್ಯ ಮತ್ತು ಗಂಡಸು ಎಂಬುದಾಗಿ) ಸೂಚಿಸುತ್ತದೆ.

ಈ ರೀತಿ ಕ್ರಿಯಾರೂಪದಲ್ಲಿ ಬರುವ ಆಖ್ಯಾತ ಪ್ರತ್ಯಯದ ಮೂಲಕ ಘಟಕವೊಂದನ್ನು ಹಳೆಗನ್ನಡದ ಹಾಗೆ ಸಂಸ್ಕೃತವೂ ಸೂಚಿಸಬಲ್ಲುದಾದರೂ, ಈ ಎರಡು ಭಾಷೆಗಳ ನಡುವೆ ಈ ವಿಷಯದಲ್ಲಿ ಒಂದು ಮುಖ್ಯವಾದ ವ್ಯತ್ಯಾಸವಿದೆ. ಹಳೆಗನ್ನಡದಲ್ಲಿ ಈ ಪ್ರತ್ಯಯದ ಮೂಲಕ ಘಟಕದ ಪುರುಷ, ವಚನ, ಮತ್ತು ಲಿಂಗಗಳನ್ನು ಸೂಚಿಸಲು ಸಾಧ್ಯವಿದೆಯಾದರೆ, ಸಂಸ್ಕೃತದಲ್ಲಿ ಪುರುಷ ಮತ್ತು ವಚನಗಳನ್ನು ಮಾತ್ರ ಸೂಚಿಸಲು ಸಾಧ್ಯವಿದೆ. ಸಂಸ್ಕೃತದಲ್ಲಿ ಈ ಪ್ರತ್ಯಯ ಲಿಂಗ ಭೇದವನ್ನು ಸೂಚಿಸಲಾರದು.

ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಹಳೆಗನ್ನಡ ಮತ್ತು ಸಂಸ್ಕೃತ ವಾಕ್ಯಗಳನ್ನು ಗಮನಿಸಬಹುದು.

(೧೨ಕ) ದೇವದತ್ತಃ ಕಟಂ ಕರೋತಿ
'ದೇವದತ್ತ ಚಾಪೆಯನ್ನು ಮಾಡುತ್ತಾನೆ'
(೧೨ಖ) ದೇವದತ್ತಸ್ಯ ಭಾರ್ಯಾ ಕಟಂ ಕರೋತಿ
'ದೇವದತ್ತನ ಹೆಂಡತಿ ಚಾಪೆಯನ್ನು ಮಾಡುತ್ತಾಳೆ'

(೧೩ಕ) ಕೀಚಕಂ ತಮ್ಮಕ್ಕನಂ ಕಾಣಲ್ ಪೋದನ್
'ಕೀಚಕನು ತನ್ನ ಅಕ್ಕನನ್ನು ಕಾಣಲು ಹೋದನು'
(೧೩ಖ) ದ್ರೌಪದಿ ತಕ್ಕುದನೆ ನುಡಿದಳ್
'ದ್ರೌಪದಿ ಯೋಗ್ಯವಾದುದನ್ನೇ ಹೇಳಿದಳು'

ಚಾಪೆಯನ್ನು ಮಾಡುವ ವ್ಯಕ್ತಿ (೧೨ಕ)ದಲ್ಲಿ ಒಬ್ಬ ಗಂಡಸು ಮತ್ತು (೧೨ಖ)ದಲ್ಲಿ ಒಬ್ಬ ಹೆಂಗಸು; ಆದರೆ, ಈ ಎರಡು ವಾಕ್ಯಗಳಲ್ಲೂ ಸಂಸ್ಕೃತದಲ್ಲಿ ಕರೋತಿ ಎಂಬ ಒಂದೇ ಕ್ರಿಯಾರೂಪ ಬಳಕೆಯಾಗಿದೆ.

(೧೩ಕ–ಖ) ವಾಕ್ಯಗಳಲ್ಲೂ ಇದೇ ರೀತಿಯಲ್ಲಿ ಒಬ್ಬ ಗಂಡಸು ಮತ್ತು ಒಬ್ಬ ಪೆಂಗಸು ನಡೆಸಿರುವ ಕೆಲಸಗಳನ್ನು ಸೂಚಿಸಲಾಗಿದೆ; ಆದರೆ, ಹಳೆಗನ್ನಡದ ಈ ವಾಕ್ಯಗಳಲ್ಲಿ ಒಬ್ಬ ಗಂಡಸು ನಡೆಸಿದ ಹೋಗುವ ಘಟನೆಯನ್ನು (೧೩ಕ)ದಲ್ಲಿ ಅನ್ ಪ್ರತ್ಯಯವಿರುವ ಪೋದನ್ ಕ್ರಿಯಾರೂಪವೂ, ಒಬ್ಬ ಹೆಂಗಸು ನಡೆಸಿದ ಹೇಳುವ ಘಟನೆಯನ್ನು (೧೩ಖ)ದಲ್ಲಿ ಅದಕ್ಕಿಂತ ಭಿನ್ನವಾದ ಅಳ್ ಪ್ರತ್ಯಯವಿರುವ ನುಡಿದಳ್ ಕ್ರಿಯಾರೂಪವೂ ಸೂಚಿಸುತ್ತವೆ.

ಹಳೆಗನ್ನಡದಲ್ಲೂ ಇಂತಹ ಪ್ರತ್ಯಯಗಳು ಆಡುಗನನ್ನು ಇಲ್ಲವೇ ಕೇಳುಗನನ್ನು ಸೂಚಿಸುತ್ತಿವೆಯಾದರೆ ಅವುಗಳ ಮೂಲಕ ಲಿಂಗಭೇದ ಸೂಚಿತವಾಗುವುದಿಲ್ಲ. ಉದಾಹರಣೆಗಾಗಿ ಪಂಪಭಾರತದ ಕೆಳಗಿನ ವಾಕ್ಯಗಳನ್ನು ಗಮನಿಸಬಹುದು.

(೧೪ಕ) ಆನುಂ ತಪೋನಿಯೋಗದೊಳಿರ್ಪೆಂ (೧೨.೧೩೦)
'ನಾನೂ ತಪಸ್ಸಿನ ನಿಯಮದಲ್ಲಿ ಇರುತ್ತೇನೆ'

(೧೪ಖ) ನಿನ್ನ ಬಿಸುಟೆಂತಿರ್ಪೆಂ (೨.೨೫)
'ನಿನ್ನ ಬಿಟ್ಟು (ನಾನು) ಹೇಗಿರಬಲ್ಲೆ?'

(೧೪ಕ) ವಾಕ್ಯವನ್ನು ಧರ್ಮರಾಯ ಹೇಳಿದ್ದು, ಆ ಘಟಕವನ್ನು (ಆಡುಗ ಮತ್ತು ಗಂಡಸು) ಸೂಚಿಸಲು ಇರು ಕ್ರಿಯಾಪದದೊಂದಿಗೆ ಎಂ ಆಖ್ಯಾತ ಪ್ರತ್ಯಯ ಬಂದಿದೆ; (೧೪ಖ) ವಾಕ್ಯವನ್ನು ಕುಂತಿ ಹೇಳಿದ್ದು, ಆ ಘಟಕವನ್ನು (ಆಡುಗ ಮತ್ತು ಹೆಂಗಸು) ಸೂಚಿಸುವುದಕ್ಕಾಗಿಯೂ ಎಂ ಆಖ್ಯಾತ ಪ್ರತ್ಯಯವೇ ಬಂದಿದೆ.

ಇದಲ್ಲದೆ, ಆಡುಗ ಮತ್ತು ಕೇಳುಗರನ್ನು ಬಿಟ್ಟು ಇತರರನ್ನು ಸೂಚಿಸುವಲ್ಲಿಯೂ ಬಹುವಚನದಲ್ಲಿ ಮನುಷ್ಯ–ಮನುಷ್ಯೇತರ ಲಿಂಗಭೇದವಿದೆಯಲ್ಲದೆ ಪುಂ–ಸ್ತ್ರೀ ಲಿಂಗಭೇದವಿಲ್ಲ.

(೧೫ಕ) ಆ ತಪೋವೃದ್ಧರ್ ಕಾಂತೆಯನ್ ಸಂತೈಸಿದರ್ (೨.೨೬ವ)
'ಆ ತಪೋವನದಲ್ಲಿದ್ದ ವೃದ್ಧ ತಾಪಸರು ಕಾಂತೆ(ಕುಂತಿ)ಯನ್ನು ಸಂತೈಸಿದರು'

(೧೫ಖ) ಅಂತು ದಿವ್ಯ ಸಂಯೋಗದೊಳಿರ್ವರುಂ ಗರ್ಭಮಂ ತಾಳ್ದರ್ (೧.೮೫ವ)
'ಹಾಗೆ ದಿವ್ಯವಾದ ಋಷಿಶ್ರೇಷ್ಠನ ಸಂಯೋಗದಿಂದ ಇಬ್ಬರೂ ಗರ್ಭವನ್ನು ಧರಿಸಿದರು'

(೧೫ಗ) ಬೀಸುವ ಚಾಮರಾಳಿ ಸುಂದರಿಯರ ಕೈಗಳಿಂ ಬರ್ದುಕಿ ಬಿಳ್ದುವು
'ಬೀಸುತ್ತಿದ್ದ ಚಾಮರ ಸಮೂಹಗಳು ಸುಂದರಿಯರ ಕೈಗಳಿಂದ ಜಾರಿ ಬಿದ್ದುವು'

(೧೫ಕ)ದಲ್ಲಿ ಘಟನೆಯನ್ನು ನಡೆಸಿದವರು ತಾಪಸ(ಗಂಡಸ)ರಾಗಿದ್ದು, ಆ ಘಟಕವನ್ನು ಸೂಚಿಸುವುದಕ್ಕಾಗಿ ಅರ್ ಆಖ್ಯಾತ ಪ್ರತ್ಯಯ ಬಂದಿದೆ (ಸಂತೈಸಿದರ್); (೧೫ಖ)ದಲ್ಲಿ ಘಟನೆಯನ್ನು ನಡೆಸಿದವರು ಇಬ್ಬರು ಹೆಂಗಸರು (ಅಂಬಿಕೆ ಮತ್ತು ಅಂಬಾಲಿಕೆ); ಹೀಗಿದ್ದರೂ, ಆ ಘಟಕವನ್ನು ಸೂಚಿಸುವುದಕ್ಕಾಗಿ ಅರ್ ಪ್ರತ್ಯಯವೇ ಬಂದಿದೆ (ತಾಳ್ದರ್). (೧೫ಗ)ದಲ್ಲಿ ಮಾತ್ರ ಘಟನೆ ನಡೆದುದು ಚಾಮರ ಸಮೂಹಗಳಿಂದ; ಇವು ಮನುಷ್ಯೇತರಗಳಾದ ಕಾರಣ, ಆ ಘಟಕವನ್ನು ಸೂಚಿಸುವುದಕ್ಕಾಗಿ ಅರ್ ಪ್ರತ್ಯಯಕ್ಕಿಂತ ಭಿನ್ನವಾದ ಉವು ಪ್ರತ್ಯಯ ಬಂದಿದೆ (ಬಿಳ್ದುವು).

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಘಟಕಗಳನ್ನು ಸೂಚಿಸುವ ಪ್ರತ್ಯಯಗಳ ಮಟ್ಟಿಗೆ ಕಾಣಿಸುವ ಇನ್ನೊಂದು ವ್ಯತ್ಯಾಸವೇನೆಂದರೆ, ಸಂಸ್ಕೃತದಲ್ಲಿ ಈ ಪ್ರತ್ಯಯಗಳು ಬೇರೆಯೂ ಕೆಲವು ಅರ್ಥಭೇದಗಳನ್ನು ಸೂಚಿಸುತ್ತವೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಸಂಸ್ಕೃತದ ಅಪೂರ್ಣ ಮತ್ತು ಪೂರ್ಣ ಕ್ರಿಯಾರೂಪಗಳನ್ನು ಅವಕ್ಕೆ ಸಮನಾಗಿರುವ ಹಳೆಗನ್ನಡದ ಅಭೂತ ಮತ್ತು ಭೂತ ಕ್ರಿಯಾರೂಪಗಳೊಂದಿಗೆ ಹೋಲಿಸಿ ನೋಡಬಹುದು:

| ಸಂಸ್ಕೃತ | ಹಳೆಗನ್ನಡ |
| --- | --- |
| ಅಪೂರ್ಣ-ಪೂರ್ಣ | ಅಭೂತ-ಭೂತ |
| ಕರೋಮಿ-ಚಕಾರ | ಮಾಡುವೆನ್-ಮಾಡಿದೆನ್ |
| ಕುರ್ಮಃ-ಚಕೃಮ | ಮಾಡುವೆಮ್-ಮಾಡಿದೆಮ್ |
| ಕರೋಷಿ-ಚಕರ್ಥ | ಮಾಡುವಯ್-ಮಾಡಿದಯ್ |
| ಕುರುಥ-ಚಕ್ರ | ಮಾಡುವಿರ್-ಮಾಡಿದಿರ್ |
| ಕರೋತಿ-ಚಕಾರ | ಮಾಡುವನ್-ಮಾಡಿದನ್ |
| ಕುರ್ವಂತಿ-ಚಕ್ರುಃ | ಮಾಡುವರ್-ಮಾಡಿದರ್ |

ಮೇಲೆ ಸಂಸ್ಕೃತದ ಅಪೂರ್ಣರೂಪಗಳ ಕೊನೆಯಲ್ಲಿ ಕಾಣಿಸುವ ಆಖ್ಯಾತ ಪ್ರತ್ಯಯಗಳು (ಮಿ, ಮಃ, ಷಿ, ಥ, ತಿ ಮತ್ತು ಅಂತಿ ಎಂಬವುಗಳು) ಪೂರ್ಣ ರೂಪಗಳ ಕೊನೆಯಲ್ಲಿ ಕಾಣಿಸುವ ಆಖ್ಯಾತ ಪ್ರತ್ಯಯಗಳಿಗಿಂತ (ಅ, ಮ, ಥ, ಅ, ಅ ಮತ್ತು ಉಃ ಎಂಬವುಗಳಿಂದ) ತೀರ ಭಿನ್ನವಾಗಿವೆ. ಆದರೆ, ಹಳೆಗನ್ನಡದಲ್ಲಿ ಅಭೂತ ಮತ್ತು ಭೂತ ರೂಪಗಳೆರಡರಲ್ಲೂ ಒಂದೇ ರೀತಿಯ ಆಖ್ಯಾತ ಪ್ರತ್ಯಯಗಳು (ಎನ್, ಎಮ್, ಅಯ್, ಇರ್, ಅನ್ ಮತ್ತು ಅರ್ ಎಂಬವು) ಬಳಕೆಯಾಗಿವೆ.

## ೯.೪ ಗುಂ (ಕುಂ) ಪ್ರತ್ಯಯದ ಬಳಕೆ

ಹಳೆಗನ್ನಡದಲ್ಲಿ ಗುಂ (ಕುಂ) ಪ್ರತ್ಯಯ ನಿಜಕ್ಕೂ ಯಾವ ಅರ್ಥದಲ್ಲಿ ಬಳಕೆಯಾಗುತ್ತಿತ್ತು ಎಂಬ ವಿಷಯದಲ್ಲೂ ಹೆಚ್ಚಿನ ಸಂಶೋಧನೆ ನಡೆಸುವ ಅವಶ್ಯಕತೆಯಿದೆಯೆಂದು ನನಗೆ ತೋರುತ್ತದೆ. ನಾಗವರ್ಮನ ಭಾಷಾಭೂಷಣದಲ್ಲಿ ಈ ಪ್ರತ್ಯಯ ಭವಿಷ್ಯತ್ಕಾಲದಲ್ಲಿ ಬಳಕೆಯಾಗುವುದೆಂದು ಹೇಳಲಾಗಿದೆ (ಸೂ. ೨೦೯), ಮತ್ತು ಕಾವ್ಯಾವಲೋಕನದಲ್ಲಿ (ಸೂ. ೯೦) ಇದು ಭವಿಷ್ಯತ್ಕಾಲದಲ್ಲಿ ಮಾತ್ರವಲ್ಲದೆ ವರ್ತಮಾನ ಕಾಲದಲ್ಲೂ ಬಳಕೆಯಾಗುವುದೆಂದು ಹೇಳಲಾಗಿದೆ.

ಆದರೆ, ಕೇಶಿರಾಜನ ಶಬ್ದಮಣಿದರ್ಪಣದಲ್ಲಿ (ಸೂ. ೨೩೮), ಮತ್ತು ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ (ಸೂ. ೪೬೩) ಈ ಪ್ರತ್ಯಯ ಭೂತಾರ್ಥದಲ್ಲೂ ಬಳಕೆಯಾಗುತ್ತದೆಯೆಂದು ಹೇಳಲಾಗಿದೆ. ಅನಂತರದ ವಿದ್ವಾಂಸರು ಈ ಮೂರನೆಯ ಅಭಿಪ್ರಾಯವನ್ನೇ ಎತ್ತಿ ಹಿಡಿದಿದ್ದಾರೆ (ಕಿಟ್ಟೆಲ್ ೧೯೦೩:೧೪೬, ಕನ್ನಡ ಕೈಪಿಡಿ ೧೯೩೬:೪೫).

ಭಟ್ಟಾಕಳಂಕನು ಕೊಟ್ಟಿರುವ ಪ್ರಯೋಗಗಳಿಂದ ಇವಕ್ಕೂ ಸಾಮಾನ್ಯ ಕ್ರಿಯಾರೂಪಗಳಿಗೂ ಅರ್ಥದಲ್ಲಿ ವ್ಯತ್ಯಾಸವಿಲ್ಲವೆಂಬ ಅಭಿಪ್ರಾಯ ಆತನಿಗಿದ್ದ ಹಾಗೆ ಕಾಣಿಸುತ್ತದೆ. ಉದಾಹರಣೆಗಾಗಿ, ಪುಟ್ಟುಗುಂ ಎಂಬುದಕ್ಕೆ ಪುಟ್ಟಿದಂ, ಪುಟ್ಟುವಂ ಮತ್ತು ಪುಟ್ಟಿದಪಂ ಎಂಬವುಗಳ ಅರ್ಥವೇ ಇದೆಯೆಂದು ಆತನ ಪ್ರಯೋಗಗಳು ಸೂಚಿಸುತ್ತವೆ. ಅನಂತರದ ವಿದ್ವಾಂಸರೂ ಇವಕ್ಕೂ ಮತ್ತು ಸಾಮಾನ್ಯ ಕ್ರಿಯಾರೂಪಗಳಿಗೂ ನಡುವೆ ಅರ್ಥದ ಮಟ್ಟಿಗೆ ವ್ಯತ್ಯಾಸವೇನಾದರೂ ಇದೆಯೇ ಎಂಬ ವಿಷಯದಲ್ಲಿ ಏನೂ ಹೇಳಿರುವ ಹಾಗೆ ಕಾಣಿಸುವುದಿಲ್ಲ.

ಪಂಪಭಾರತದಲ್ಲಿ ಈ ಗುಂ (ಕುಂ) ಪ್ರತ್ಯಯದ ಮೂಲಕ ಸಾಧಿತವಾಗಿರುವ ಕ್ರಿಯಾರೂಪಗಳು ಹೆಚ್ಚಿನೆಡೆಗಳಲ್ಲೂ ಭವಿಷ್ಯದರ್ಥದಲ್ಲೇ ಬಳಕೆಯಾಗಿವೆ. ಇದಲ್ಲದೆ, ಈ ಪ್ರಯೋಗಗಳಲ್ಲಿ ಗುಂ (ಕುಂ) ಪ್ರತ್ಯಯಕ್ಕೆ ಭವಿಷ್ಯದರ್ಥ ಮಾತ್ರವಲ್ಲದೆ ಸಂಭಾವ್ಯತೆಯ ಅರ್ಥವೂ ಇರುವ ಹಾಗೆ

ಕಾಣಿಸುತ್ತದೆ. ಅಪರೂಪಕ್ಕೆ ಇವನ್ನು ಭೂತಾರ್ಥದಲ್ಲೂ ಬಳಸಲಾಗಿದೆಯಾದರೂ, ಅಂತಹ ಸಂದರ್ಭಗಳಲ್ಲಿ ಅವು ರೂಢಿಯಲ್ಲಿರುವ ಘಟನೆಗಳನ್ನು ಸೂಚಿಸುತ್ತಿರುವ ಹಾಗೆ ಕಾಣಿಸುತ್ತದೆ.

ಈ ಕಾರಣಕ್ಕಾಗಿ, ಹಳೆಗನ್ನಡದಲ್ಲಿ ಈ ಕುಂ (ಗುಂ) ಪ್ರತ್ಯಯದ ಮೂಲಕ ಸಾಧಿತವಾಗುವ ಕ್ರಿಯಾರೂಪಗಳು ದ ಮತ್ತು ವ (ಪ) ಪ್ರತ್ಯಯಗಳಿರುವ ಕ್ರಿಯಾರೂಪಗಳಿಗಿಂತ ಅರ್ಥದಲ್ಲಿ ಭಿನ್ನವಾದುವೆಂದು ಹೇಳಲು ಸಾಧ್ಯವಿರುವ ಹಾಗೆ ಕಾಣಿಸುತ್ತದೆ. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ಬಳಕೆಗಳನ್ನು ಗಮನಿಸಬಹುದು:

(೧೬ಕ) ಬೇಡಿದೊಡೆ ಬಲದ ಬರಿಯುಮನ್ ಈಡಾಡುಗುಂ (೧.೧೦೦)
‘ಯಾಚಿಸಿದರೆ (ಕರ್ಣನು) ಬಲಪಾರ್ಶ್ವದ ಪಕ್ಕೆಯನ್ನು ಕತ್ತರಿಸಿ ಎಸೆದಾನು’

(೧೬ಖ) ಎನ್ನುಮನಿಂತು ತುತ್ತುಗುಂ (೩.೨೯ ವ)
‘ನನ್ನನ್ನೂ ಈ ರೀತಿ ನುಂಗಿಬಿಡಬಹುದು’

(೧೬ಗ) ಬಗೆವಾಗಳ್ ಈ ಕಲಹದೊಳ್ ನಿಮ್ಮ ಕುಲವಾಕುಲವಂ ನಿಮಗುಂಟುಮಾಡುಗುಂ (೧೦.೨೧)
‘ವಿಚಾರ ಮಾಡುವುದಾದರೆ, ಈ ಯುದ್ಧದಲ್ಲಿ ನಿಮ್ಮ ಕುಲವು ನಿಮಗೆ ವ್ಯಥೆಯನ್ನುಂಟುಮಾಡೀತು’

ಮೇಲಿನ ವಾಕ್ಯಗಳಲ್ಲೆಲ್ಲ ಈ ಕ್ರಿಯಾರೂಪಗಳು ಮುಂದಿನ ಸಮಯದಲ್ಲಿ ನಡೆಯಬಹುದಾದ (ಎಂದರೆ ಸಂಭಾವ್ಯ) ಘಟನೆಯೊಂದನ್ನು ಸೂಚಿಸುತ್ತಿವೆ.

ಭೂತಕಾಲದ ಬಳಕೆಗಳಲ್ಲೂ ಇದೇ ರೀತಿಯಲ್ಲಿ ಭೂತಕಾಲದ ಸಾಮಾನ್ಯ ಕ್ರಿಯಾರೂಪಗಳಿಗಿಂತ ಭಿನ್ನವಾಗಿರುವ ‘ರೂಢಿ’ಯಲ್ಲಿ ಜರಗುವ ಘಟನೆಯೊಂದನ್ನು ಸೂಚಿಸುವಂತಹ ಅರ್ಥವನ್ನು ಈ ಕ್ರಿಯಾರೂಪಗಳು ಕೊಡುತ್ತವೆಯೆಂದು ಹೇಳಲು ಸಾಧ್ಯವಿದೆ. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ಕಂದಪದ್ಯವನ್ನು ಗಮನಿಸಬಹುದು:

(೧೭) ನುಡಿಯಿಸಿ ಕೇಳ್ಗುಂ ಹರಿಗನ
ಪಡೆಮಾತನೆ ಮಾತು ತಪ್ಪೊಡಂ ಮತ್ತಮದಂ
ನುಡಿಯಿಸುಗುಂ ಮೊದಲಿಂದಾ
ನುಡಿ ಪಱಿಪಡೆ ಮುಳಿದು ನೋಡುಗುಂ ಕೆಳದಿಯರಂ (೪.೫೬)

ಇಲ್ಲಿ ಸುಭದ್ರೆ ವಿರಹತಾಪದಿಂದ ಏನು ಮಾಡುತ್ತಿದ್ದಳು ಎಂಬುದನ್ನು ವಿವರಿಸಲಾಗಿದೆ. ಈ ಸಂದರ್ಭದಲ್ಲಿ ಭೂತಕಾಲದ ಸಾಮಾನ್ಯ ಕ್ರಿಯಾ ರೂಪಗಳನ್ನು (ಕೇಳ್ದಳ್, ನುಡಿಯಿಸಿದಳ್, ನೋಡಿದಳ್ ಎಂಬ ರೂಪಗಳನ್ನು) ಬಳಸಿದಲ್ಲಿ ತಿಳಿಸಬೇಕಾಗಿರುವ ಏನು ಮಾಡುತ್ತಾ ಇದ್ದಳು ಎಂಬ ‘ರೂಢಿಯ’ ಅರ್ಥ ಸ್ಪಷ್ಟವಾಗಿ ಮೂಡಲಾರದು.

ಈ ಕಂದಪದ್ಯದ ಅನುವಾದದಲ್ಲಿ ಅನಂತರಂಗಾಚಾರ್ ಅವರು ಕೇಳುತ್ತಾಳೆ, ನುಡಿಯಿಸುತ್ತಾಳೆ ಮತ್ತು ನೋಡುತ್ತಾಳೆ ಎಂಬುದಾಗಿ ವರ್ತಮಾನಾರ್ಥದ ಕ್ರಿಯಾರೂಪಗಳನ್ನು ಬಳಸಿದ್ದಾರೆ; ಆದರೆ, ಇದಕ್ಕಿಂತಲೂ ಕೇಳುತ್ತಿದ್ದಳು, ನುಡಿಯಿಸುತ್ತಿದ್ದಳು, ಮತ್ತು ನೋಡುತ್ತಿದ್ದಳು ಎಂಬಂತಹ ರೂಪಗಳೇ ಹೆಚ್ಚು ಸ್ಪಷ್ಟವಾಗಿ ಇಲ್ಲಿ ತಿಳಿಸಬೇಕಾಗಿರುವ ರೂಢಿಯ ಅರ್ಥವನ್ನು ತಿಳಿಸಬಲ್ಲವು ಎಂದು ತೋರುತ್ತದೆ.

ಹೊಸಗನ್ನಡದಲ್ಲಿ ಕಾಣಿಸದಿರುವ ಹಲವು ಹಳೆಗನ್ನಡದ ಪದರೂಪಗಳನ್ನು ಹಾಗೆಯೇ ಉಳಿಸಿಕೊಂಡಿರುವ ಕರಾವಳಿಯ ಕನ್ನಡ ಪ್ರಭೇದಗಳಲ್ಲಿ ಈ ಗುಂ (ಕುಂ) ಪ್ರತ್ಯಯವೂ ಗು (ಕು) ಎಂಬ ರೂಪದಲ್ಲಿ ಉಳಿದುಕೊಂಡಿದ್ದು, ಅವುಗಳಲ್ಲಿ ಅದಕ್ಕೆ ಮುಂದಿನ ಸಮಯದಲ್ಲಿ ಮೇಲೆ ಸೂಚಿಸಿದಂತಹ ಸಂಭಾವ್ಯತೆಯ ಅರ್ಥವೂ, ಹಿಂದಿನ ಸಮಯದಲ್ಲಿ ರೂಢಿಯ ಅರ್ಥವೂ ಇವೆ. ಉದಾಹರಣೆಗಾಗಿ ಕೆಳಗೆ ಕೊಟ್ಟಿರುವ ಹವ್ಯಕ ಕನ್ನಡ ವಾಕ್ಯಗಳನ್ನು ಗಮನಿಸಬಹುದು:

(೧೮ಕ) ಅವು ನಾಳಂಗೆ ರಜಾ ಬೇಗ ಬಕ್ಕು
'ಅವರು ನಾಳೆ ಸ್ವಲ್ಪ ಬೇಗ ಬಂದಾರು'
(೧೮ಖ) ಹೆಚ್ಚು ಎಳದರೆ ಅದು ಮುರಿಗು
'ಜಾಸ್ತಿ ಎಳೆದರೆ ಅದು ಮುರಿದೀತು'
(೧೮ಗ) ನಾವು ಪೂನಲ್ಲಿಪ್ಪಗ ದಿನಾಗಳುದೆ ಕಾಪಿಗೆ ಹೋಟೆಲಿಂಗೆ ಹೋಕು
'ನಾವು ಪುಣೆಯಲ್ಲಿದ್ದಾಗ ದಿನಾಲೂ ಕಾಫಿಗೆ ಹೋಟೆಲಿಗೆ ಹೋಗುತ್ತಿದ್ದೆವು'

(೧೮ಕ-ಖ) ವಾಕ್ಯಗಳಲ್ಲಿ ಕು (ಗು) ಪ್ರತ್ಯಯ ಮುಂದಿನ ಸಮಯವನ್ನು ಸೂಚಿಸುವುದಕ್ಕಾಗಿ ಬಂದಿದ್ದು, ಅದಕ್ಕೆ ಸಂಭಾವ್ಯತೆಯ ಅರ್ಥವೂ ಇದೆ, ಮತ್ತು (೧೮ಗ) ವಾಕ್ಯದಲ್ಲಿ ಅದು ಹಿಂದಿನ ಸಮಯವನ್ನು ಸೂಚಿಸುವುದಕ್ಕಾಗಿ ಬಂದಿದ್ದು, ಅದಕ್ಕೆ ರೂಢಿಯಲ್ಲಿ ಜರಗುತ್ತಿದ್ದ ಘಟನೆಯೊಂದನ್ನು ಸೂಚಿಸುವ ಅರ್ಥವಿದೆ.

## ೯.೫ ಅಲ್ಲಗಳೆಯುವ ವಿಧಾನಗಳು

ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಅಲ್ಲಗಳೆಯುವುದಕ್ಕಾಗಿ ಬಳಕೆಯಾಗುವ ವಿಧಾನಗಳ ನಡುವೆ ಹಲವು ಮೂಲಭೂತವಾದ ವ್ಯತ್ಯಾಸಗಳಿವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಕೆಳಗೆ ಕೊಡಲಾಗಿದೆ:

(೧) ಸಂಸ್ಕೃತದಲ್ಲಿ ವಾಕ್ಯಗಳನ್ನು ಮಾತ್ರವಲ್ಲದೆ ಪದಗಳನ್ನೂ ಅಲ್ಲಗಳೆಯಲು ಸಾಧ್ಯವಿದೆ; ಇದಕ್ಕಾಗಿ, ಪದಗಳಿಗೆ ಅ (ಸ್ವರ ಪರವಾಗಿದ್ದರೆ ಅನ್) ಉಪಸರ್ಗವನ್ನು ಸೇರಿಸಲಾಗುತ್ತದೆ.

ಈ ರೀತಿ ಅಲ್ಲಗಳೆದಿರುವ ಹಲವು ಪದಗಳು ಸಂಸ್ಕೃತದಿಂದ ಹಳೆಗನ್ನಡಕ್ಕೂ ಎರವಲಾಗಿ ಬಂದಿರುವ ಕಾರಣ, ಅವುಗಳ ಬಳಕೆಯನ್ನು ಹಳೆಗನ್ನಡದಲ್ಲೂ ಕಾಣಬಹುದು. ಆದರೆ ಕನ್ನಡದವೇ ಆದ ಪದಗಳಿಗೆ ಈ ರೀತಿ ಪ್ರತ್ಯಯಗಳನ್ನು ಸೇರಿಸಿ ಅವನ್ನು ಅಲ್ಲಗಳೆಯಲು ಸಾಧ್ಯವಾಗದು.

| | |
|---|---|
| ಸತ್ಯ | ಅಸತ್ಯ |
| ಜ್ಞಾನ | ಅಜ್ಞಾನ |
| ನ್ಯಾಯ | ಅನ್ಯಾಯ |
| ಆಚಾರ | ಅನಾಚಾರ |
| ಏಕ | ಅನೇಕ |
| ಅರ್ಥ | ಅನರ್ಥ |

ಸಂಸ್ಕೃತದ ಪದಗಳಲ್ಲಿ ಈ ಅ ಪ್ರತ್ಯಯ (ಉಪಸರ್ಗ) ಮಾತ್ರವಲ್ಲದೆ, ನಿ (ಸ್ವರ ಪರವಾಗಿದ್ದರೆ ನಿರ್) ಎಂಬ ಇನ್ನೊಂದು ಪ್ರತ್ಯಯವೂ ಅಲ್ಲಗಳೆಯುವ ಅರ್ಥದಲ್ಲಿ ಬಳಕೆಯಾಗುತ್ತದೆ. ದಯೆ–ನಿರ್ದಯೆ, ಭಯ–ನಿರ್ಭಯ, ಆಶ್ರಿತ–ನಿರಾಶ್ರಿತ, ಅಪರಾಧಿ–ನಿರಪರಾಧಿ ಮೊದಲಾದ ಪದಗಳಲ್ಲಿ ಈ ಪ್ರತ್ಯಯದ ಬಳಕೆಯನ್ನು ಕಾಣಬಹುದು.

ಹಳೆಗನ್ನಡದ ನಿರ್ನೇರಂ, ನಿಬ್ಬೆರಗು, ನಿಪ್ಪೊಸತು ಮೊದಲಾದ ಕೆಲವು ಪದಗಳಲ್ಲಿ ಅಪರೂಪವಾಗಿ ಕನ್ನಡ ಪದಗಳಿಗೂ ಈ ಪ್ರತ್ಯಯ ಸೇರಿರುವ ಹಾಗೆ ಕಾಣಿಸುತ್ತದೆ (ಡಿ. ಎಲ್. ನರಸಿಂಹಾಚಾರ್ (೧೯೭೧:೭೭೯–೮೦ ನೋಡಿ).

(೨) ಸಂಸ್ಕೃತದಲ್ಲಿ ವಾಕ್ಯವೊಂದನ್ನು ಅಲ್ಲಗಳೆಯಬೇಕಿದ್ದಲ್ಲಿ, ಅದಕ್ಕೆ ನ ಎಂಬ ಅಲ್ಲಗಳೆಯುವ ಪದವನ್ನು ಸೇರಿಸಿದರೆ ಸಾಕು. ಆ ವಾಕ್ಯದಲ್ಲಿ ಬೇರಾವ ಬದಲಾವಣೆಯನ್ನೂ ಮಾಡಬೇಕಾಗಿಲ್ಲ.

(೧೯ಕ) ತೇ ಪುಸ್ತಕಾನಿ ಪಠಂತಿ
'ಅವರು ಪುಸ್ತಕಗಳನ್ನು ಓದುತ್ತಾರೆ'

(೧೯ಖ) ತೇ ಪುಸ್ತಕಾನಿ ನ ಪಠಂತಿ
'ಅವರು ಪುಸ್ತಕಗಳನ್ನು ಓದುವುದಿಲ್ಲ'

(೧೯ಕ) ತಿಳಿಸುವ ಘಟನೆಯನ್ನು ಅಲ್ಲಗಳೆಯುವುದಕ್ಕಾಗಿ (೧೯ಖ)ದಲ್ಲಿ ಆ ವಾಕ್ಯಕ್ಕೆ ನ ಎಂಬುದನ್ನಷ್ಟೇ ಸೇರಿಸಲಾಗಿದೆ, ಆ ವಾಕ್ಯದಲ್ಲಿ ಬೇರಾವ ಬದಲಾವಣೆಯೂ ನಡೆದಿಲ್ಲ ಎಂಬುದನ್ನು ಗಮನಿಸಬಹುದು.

ಹಳೆಗನ್ನಡದಲ್ಲಿ ಹಿಂದಿನ ಸಮಯದ ಘಟನೆಯನ್ನು ಅಲ್ಲಗಳೆಯುವಲ್ಲಿ ಮಾತ್ರ ಇಂತಹ ವಿಧಾನ ಬಳಕೆಯಲ್ಲಿದೆ. ಇದಕ್ಕಾಗಿ ವಾಕ್ಯದ ಕೊನೆಯಲ್ಲಿ ಇಲ್ಲ ಪದವನ್ನು ಬಳಸಲಾಗುತ್ತದೆ. ವಾಕ್ಯದಲ್ಲಿ ಬೇರಾವ ಬದಲಾವಣೆಯನ್ನೂ ಮಾಡಬೇಕಾಗುವುದಿಲ್ಲ:

(೨೦ಕ) ಈ ಕನ್ನೆಯನ್ ಪದ್ಮಜನ್ ಪಡೆದನ್
'ಈ ಕನ್ಯೆಯನ್ನು ಬ್ರಹ್ಮನು ಸೃಷ್ಟಿಸಿದನು'

(೨೦ಖ) ಈ ಕನ್ನೆಯನ್ ಪದ್ಮಜನ್ ಪಡೆದನ್ ಇಲ್ಲ
'ಈ ಕನ್ಯೆಯನ್ನು ಬ್ರಹ್ಮನು ಸೃಷ್ಟಿಸಲಿಲ್ಲ'

ಆದರೆ, ಮುಂದಿನ ಸಮಯದ ವಾಕ್ಯವೊಂದನ್ನು ಅಲ್ಲಗಳೆಯಬೇಕಿದ್ದಲ್ಲಿ, ಅಂತಹ ವಾಕ್ಯದಲ್ಲಿ ಬರುವ ಕ್ರಿಯಾಪದವನ್ನು ಅಲ್ಲಗಳೆಯುವ ರೂಪಕ್ಕೆ ಬದಲಾಯಿಸಬೇಕಾಗುತ್ತದೆ. ಕ್ರಿಯಾರೂಪಗಳಲ್ಲಿ ಸಮಯವನ್ನು ಸೂಚಿಸುವುದಕ್ಕಾಗಿ ಬರುವ ಪ್ರತ್ಯಯದ ಜಾಗದಲ್ಲಿ ಅ ಪ್ರತ್ಯಯವನ್ನು ಬಳಸುವುದರ ಮೂಲಕ, ಇಂತಹ ಅಲ್ಲಗಳೆಯುವ ಕ್ರಿಯಾರೂಪಗಳನ್ನು ಸಾಧಿಸಬಹುದು:

(೨೧ಕ) ಅವನ್ ಸಂಗರದೊಳ್ ಚಾಪಮಂ ಪಿಡಿವಂ
'ಅವನು ಯುದ್ಧದಲ್ಲಿ ಬಿಲ್ಲನ್ನು ಹಿಡಿಯುತ್ತಾನೆ'

(೨೧ಖ) ಅವನ್ ಸಂಗರದೊಳ್ ಚಾಪಮಂ ಪಿಡಿಯಂ
'ಅವನು ಯುದ್ಧದಲ್ಲಿ ಬಿಲ್ಲನ್ನು ಹಿಡಿಯುವುದಿಲ್ಲ'

(೨೧ಕ) ವಾಕ್ಯ ತಿಳಿಸುವ ಘಟನೆಯನ್ನು ಅಲ್ಲಗಳೆಯುವುದಕ್ಕಾಗಿ (೨೧ಖ) ವಾಕ್ಯದಲ್ಲಿ ಅದರ ಪಿಡಿವಂ ಕ್ರಿಯಾರೂಪವನ್ನು ಪಿಡಿಯಂ ಎಂಬುದಾಗಿ ಬದಲಾಯಿಸಲಾಗಿದೆ ಎಂಬುದನ್ನು ಗಮನಿಸಬಹುದು. ಇಲ್ಲಿ ಪಿಡಿ ಕ್ರಿಯಾಪದದ ಅನಂತರ ಬಂದಿರುವ ವ್ ಎಂಬ ಮುಂದಿನ ಸಮಯವನ್ನು ಸೂಚಿಸುವ ಪ್ರತ್ಯಯದ ಬದಲು ಅ ಎಂಬ ಅಲ್ಲಗಳೆಯುವ ಪ್ರತ್ಯಯವನ್ನು ಬಳಸಲಾಗಿದೆ. ಪಿಡಿ ಕ್ರಿಯಾಪದ ಇಕಾರದಲ್ಲಿ ಕೊನೆಗೊಳ್ಳುವ ಕಾರಣ, ಅದರ ಅನಂತರ ಅ ಪ್ರತ್ಯಯ ಬಂದಾಗ ಯಕಾರವೊಂದು ಸೇರಿಕೊಳ್ಳುತ್ತದೆ.

ಹಳೆಗನ್ನಡ ವ್ಯಾಕರಣಗಳಲ್ಲಿ ಈ ಕ್ರಿಯಾರೂಪಕ್ಕೆ ಮೂರು ಕಾಲಗಳನ್ನೂ ಸೂಚಿಸುವ ಅರ್ಥವಿದೆಯೆಂದು ಹೇಳಲಾಗಿದೆ (ಕೇಶಿರಾಜ ಸೂ. ೨೩೩). ಅನಂತರದ ವಿದ್ವಾಂಸರೂ ಇದು ಸರಿಯೆಂದು ಒಪ್ಪಿಕೊಂಡಿರುವ ಹಾಗೆ ಕಾಣಿಸುತ್ತದೆ (ಕಿಟ್ಟೆಲ್ ೧೯೦೩:೧೫೭).

ಆದರೆ, ಈ ಕ್ರಿಯಾರೂಪಗಳ ಹೆಚ್ಚಿನ ಬಳಕೆಗಳಲ್ಲೂ ಅದು ಹೊಸಗನ್ನಡದ ನೋಡುವುದಿಲ್ಲ, ಮಾಡುವುದಿಲ್ಲ ಎಂಬಂತಹ ರೂಪಗಳ, ಇಲ್ಲವೇ ನೋಡಲಿಕ್ಕಿಲ್ಲ, ಮಾಡಲಿಕ್ಕಿಲ್ಲ ಎಂಬಂತಹ ರೂಪಗಳ ಅರ್ಥದಲ್ಲೇ (ಎಂದರೆ ವರ್ತಮಾನ ಇಲ್ಲವೇ ಭವಿಷ್ಯದರ್ಥದಲ್ಲೇ) ಕಾಣಿಸಿಕೊಳ್ಳುತ್ತದೆ.

ನೋಡಲಿಲ್ಲ, ಮಾಡಲಿಲ್ಲ ಎಂಬಂತಹ ಕ್ರಿಯಾರೂಪಗಳ ಅರ್ಥದಲ್ಲಿ (ಭೂತಾರ್ಥದಲ್ಲಿ), ಮೇಲೆ (೨೦ಕ–ಖ)ಗಳಲ್ಲಿ ಉದಾಹರಿಸಿದ ಹಾಗೆ, ಕ್ರಿಯಾಪದದ ಪೂರ್ಣರೂಪದೊಂದಿಗೆ ಇಲ್ಲ ಪದವನ್ನು ಸೇರಿಸಿರುವ ರಚನೆಯನ್ನೇ ಬಳಸಲಾಗುತ್ತದೆ.

ಹಳೆಗನ್ನಡದ ಹಲವು ರಚನೆಗಳನ್ನು ಹಾಗೆಯೇ ಉಳಿಸಿಕೊಂಡಿರುವ ಕರಾವಳಿಯ ಕನ್ನಡ ಪ್ರಭೇದಗಳಲ್ಲಿ ಈ ಅಲ್ಲಗಳೆಯುವ ಕ್ರಿಯಾರೂಪವೂ ಕಾಣಿಸುತ್ತಿದ್ದು ಅದಕ್ಕೆ ಮಾಡಲಿಕ್ಕಿಲ್ಲ, ಹೋಗಲಿಕ್ಕಿಲ್ಲ ಎಂಬಂತಹ ಕ್ರಿಯಾರೂಪಗಳಿಗಿರುವ ಅರ್ಥವಿದೆ.

ಉದಾಹರಣೆಗಾಗಿ, ಹವ್ಯಕ ಕನ್ನಡದಲ್ಲಿ ಆನು ಹೋಗೆ 'ನಾನು ಹೋಗಲಿಕ್ಕಿಲ್ಲ' ಆನು ಹೋವುತ್ತಿಲ್ಲೆ 'ನಾನು ಹೋಗುವುದಿಲ್ಲ' ಮತ್ತು ಆನು ಹೋಯಿದಿಲ್ಲೆ 'ನಾನು ಹೋಗಲಿಲ್ಲ' ಎಂಬುದಾಗಿ ಮೂರು ಅಲ್ಲಗಳೆಯುವ ಕ್ರಿಯಾರೂಪಗಳಿದ್ದು, ಇವುಗಳಲ್ಲಿ ಮೊದಲನೆಯದು ಹಳೆಗನ್ನಡದ ಪೋಗೆಂ ಎಂಬುದರ ಆಧುನಿಕ ರೂಪವಾಗಿದೆ.

ಉಳಿದೆರಡು ಅಲ್ಲಗಳೆಯುವ ಕ್ರಿಯಾರೂಪಗಳನ್ನು ಹೋಗು ಕ್ರಿಯಾಪದದ ಹೋವುತ್ತೆ 'ಹೋಗುತ್ತೇನೆ' ಮತ್ತು ಹೋಯಿದೆ 'ಹೋಗಿದ್ದೇನೆ' ಎಂಬ ಪೂರ್ಣ ರೂಪಗಳಿಗೆ ಇಲ್ಲೆ 'ಇಲ್ಲ' ಎಂಬುದನ್ನು ಸೇರಿಸಿ ರಚಿಸಲಾಗಿದೆ.

(೩) ಹಳೆಗನ್ನಡದಲ್ಲಿ ಒಂದು ಘಟನೆ ಇಲ್ಲವೇ ಸಂಗತಿಗೂ, ಅದರ ಒಂದು ಘಟಕಕ್ಕೂ ನಡುವಿರುವ ಸಂಬಂಧವನ್ನು ಅಲ್ಲಗಳೆಯುವುದಿದ್ದಲ್ಲಿ ಇಲ್ಲ ಪದದ ಬದಲು ಅಲ್ಲ ಎಂಬ ಬೇರೆಯೇ ಒಂದು ಪದವನ್ನು ಬಳಸಬೇಕಾಗುತ್ತದೆ. ಆದರೆ, ಸಂಸ್ಕೃತದಲ್ಲಿ ಇದಕ್ಕೂ ನ ಉಪಸರ್ಗವನ್ನೇ ಬಳಸಲಾಗುತ್ತದೆ.

ಹಳೆಗನ್ನಡದಲ್ಲಿ ಸಂಬಂಧವನ್ನು ಅಲ್ಲಗಳೆಯುವ ಈ ಅಲ್ಲ ಪದದೊಂದಿಗೆ ಘಟಕವನ್ನು ಸೂಚಿಸುವ ಪ್ರತ್ಯಯಗಳೂ ಬರಬಲ್ಲುವು.

(೨೨ಕ) ಎನ್ನೆಂದುದಂ ಮೀಱುವರ್ ಅಲ್ಲರ್
'ನಾನು ಹೇಳಿದುದನ್ನು ಮೀರುವವರು ಅಲ್ಲ'
(೨೨ಖ) ನೀ ಅಱಿಯದೆಯುಂ ವಿಚಾರಿಸದೆಯುಂ ನೆಗಳ್ವನ್ನೆಯಲ್ಲೆ
'ನೀನು ತಿಳಿಯದೆಯೂ ವಿಚಾರಿಸದೆಯೂ ಕಾರ್ಯಮಾಡುವಂಥವನಲ್ಲ'

(೪) ಕೇಳುಗನು ಒಂದು ಕೆಲಸವನ್ನು ಮಾಡದ ಹಾಗೆ ತಡೆಯುವುದಕ್ಕಾಗಿ ಹಳೆಗನ್ನಡದಲ್ಲಿ ಕ್ರಿಯಾಪದದೊಂದಿಗೆ ಅಲ್ ಪ್ರತ್ಯಯದ ಬಳಕೆಯಾಗುತ್ತದೆ.

(೨೩ಕ) ಪೋ ಪೋಗಲ್ ಎಂದೊದಱುತ್ತುಂ ಪರಿತಂದು ತಾಗಿ ತಡರ್ದಂ ಗಂಗಾಸುತಂ ಭೀಮನಂ
'ಹೋಗಬೇಡ, ಹೋಗಬೇಡ ಎಂಬುದಾಗಿ ಕೂಗಿಕೊಳ್ಳುತ್ತಾ ಓಡಿ ಬಂದು ಭೀಷ್ಮನು ಭೀಮನನ್ನು ತಡೆಗಟ್ಟಿದನು'
(೨೩ಖ) ಕಾಗೆವೊಲ್ ಇಂತು ಬಿಲ್ಗೆ ಕರಂ ಅಂಜುವಿರ್ ಅಂಜಲಿಂ
'ಕಾಗೆಯ ಹಾಗೆ ಬಿಲ್ಲಿಗೆ ಹೆದರುತ್ತೀರಿ; ಹೆದರಬೇಡಿ'

ಈ ಪ್ರತ್ಯಯವೂ ಅನಂತರದ ಘಟನೆಯನ್ನು ಸೂಚಿಸುವುದಕ್ಕಾಗಿ ಬಳಸುವ ಅಲ್ ಪ್ರತ್ಯಯವೂ ಒಂದೇ ಎಂಬ ಅರ್ಥ ಬರುವ ಹಾಗೆ ಶಬ್ದಮಣಿದರ್ಪಣದಲ್ಲಿ (ಸೂ. ೨೪೫) ಇವನ್ನು ಪರಿಚಯಿಸಲಾಗಿದೆ. ಆದರೆ, ನಿಜಕ್ಕೂ ಹಳೆಗನ್ನಡದಲ್ಲಿ ಮೂರು ಬೇರೆ ಬೇರೆ ಅಲ್ ಎಂಬ ಒಂದೇ ರೂಪದ ಪ್ರತ್ಯಯಗಳಿವೆ ಎಂದು ಹೇಳುವ ಅವಶ್ಯಕತೆಯಿದೆ. ಮೇಲೆ ವಿವರಿಸಿದ ಪ್ರತಿಷೇಧಾರ್ಥದ ಅಲ್ ಪ್ರತ್ಯಯ ಇವುಗಳಲ್ಲೊಂದು.

ಇದಲ್ಲದೆ, ಅನಂತರದ ಘಟನೆಯನ್ನು ಸೂಚಿಸುವ ಅಲ್ ಮತ್ತು ಮೊದಲಿನ ಘಟನೆಯನ್ನು ಸೂಚಿಸುವ ಅಲ್ ಎಂಬುದಾಗಿ ಬೇರೆ ಎರಡು ಪ್ರತ್ಯಯಗಳಿದ್ದು, ಇವೆರಡೂ ಬಳಕೆಯಲ್ಲಿ ಒಂದಕ್ಕಿಂತ ಒಂದು ತೀರ ಭಿನ್ನವಾಗಿವೆ (೧೦.೨.೨ ನೋಡಿ).

ಕೆಲಸ ಮಾಡುವುದನ್ನು ತಡೆಯುವ ಪ್ರತಿಷೇಧಾರ್ಥದಲ್ಲಿ ಬರುವ ಅಲ್ ಪ್ರತ್ಯಯ ಅಲ್ಲ ಎಂಬುದರ (ಕ್ರಿಯೆಯ ಅರ್ಥವಿರುವ ಅವ್ಯಯದ) ಮೂಲ ರೂಪವೆಂದು ವೆಂಕಟಾಚಲ ಶಾಸ್ತ್ರಿಗಳು (೧೯೯೪:೧೧೮) ಅಭಿಪ್ರಾಯಪಟ್ಟಿದ್ದಾರೆ. ಆದರೆ, ಅರ್ಥದಲ್ಲಿ ಇವೆರಡರ ನಡುವೆ ಬಹಳ ವ್ಯತ್ಯಾಸವಿದೆ. ಅಲ್ಲ ಎಂಬುದು ಒಂದು ಘಟನೆ ಇಲ್ಲವೇ ಸಂಗತಿಗೂ, ಅದರ ಒಂದು ಘಟಕಕ್ಕೂ ನಡುವಿರುವ ಸಂಬಂಧವನ್ನು ಅಲ್ಲಗಳೆಯುತ್ತದೆ, ಆದರೆ, ಅಲ್ ಪ್ರತ್ಯಯ ಕೇಳುಗನು ಒಂದು ಕೆಲಸವನ್ನು ಮಾಡದಂತೆ ತಡೆಯುತ್ತದೆ. ಅಲ್ ಪ್ರತ್ಯಯಕ್ಕೆ 'ಅಲ್ಲ' ಪದದ ಅರ್ಥಕ್ಕಿಂತಲೂ 'ಬೇಡ' ಪದದ ಅರ್ಥವೇ ಹೆಚ್ಚು ಸರಿಯಾದುದು.

## ೯.೬ ಘಟನೆ ಮತ್ತು ಸಂಗತಿ

ಕ್ರಿಯಾಪದಗಳ ರಚನೆಯಲ್ಲಿ ಸಮಯದ 'ಸಂಬಂಧ'ಕ್ಕೆ ಮಹತ್ವವನ್ನು ಕೊಡುವ ಭಾಷೆಗಳಿಗೂ ಸಮಯದ 'ಆಂತರಿಕ ವ್ಯವಸ್ಥೆ'ಗೆ ಮಹತ್ವವನ್ನು ಕೊಡುವ ಭಾಷೆಗಳಿಗೂ ನಡುವೆ ಒಂದು ಕುತೂಹಲಕಾರಿಯಾದ ವ್ಯತ್ಯಾಸವಿದೆ:

ಸಮಯ ಸಂಬಂಧಕ್ಕೆ ಮಹತ್ವವನ್ನು ಕೊಡುವ ಭಾಷೆಗಳಲ್ಲಿ ಕ್ರಿಯಾಪದಗಳು ಸಾಮಾನ್ಯವಾಗಿ ಘಟನೆಗಳನ್ನು ಸೂಚಿಸುವುದಕ್ಕಾಗಿ ಮಾತ್ರವೇ ಬಳಕೆಯಾಗುತ್ತವೆ. ಸಂಗತಿಯನ್ನು ಸೂಚಿಸುವುದಕ್ಕಾಗಿ ಕ್ರಿಯಾಪದಗಳಿಲ್ಲದಿರುವ ವಾಕ್ಯಗಳನ್ನಾಗಲಿ, ಇಲ್ಲವೇ ಸಂಗತಿಯ ಇರುವಿಕೆಯನ್ನು ಸೂಚಿಸುವ ಒಂದೋ ಎರಡೋ ಕ್ರಿಯಾಪದಗಳನ್ನಾಗಲೀ ಬಳಸುವ ಕ್ರಮ ಈ ಭಾಷೆಗಳಲ್ಲಿರುತ್ತದೆ.

ಇದಕ್ಕೆ ಬದಲು, ಸಮಯದ ಆಂತರಿಕ ವ್ಯವಸ್ಥೆಗೆ ಮಹತ್ವವನ್ನು ಕೊಡುವ ಭಾಷೆಗಳಲ್ಲಿ ಹಲವು ಕ್ರಿಯಾಪದಗಳು ಘಟನೆಗಳನ್ನು ಸೂಚಿಸಲು ಬಳಕೆಯಾಗುತ್ತವೆ ಮತ್ತು ಬೇರೆ ಹಲವು ಕ್ರಿಯಾಪದಗಳು ಸಂಗತಿಗಳನ್ನು ಸೂಚಿಸಲು ಬಳಕೆಯಾಗುತ್ತವೆ. ಇಂತಹ ಭಾಷೆಗಳಲ್ಲಿ ಕ್ರಿಯಾಪದಗಳನ್ನು (೧) ಘಟನೆಯನ್ನು ಸೂಚಿಸುವವು, ಮತ್ತು (೨) ಸಂಗತಿಯನ್ನು ಸೂಚಿಸುವವು ಎಂಬುದಾಗಿ ಎರಡು ಮುಖ್ಯ ಗುಂಪುಗಳಲ್ಲಿ ವಿಂಗಡಿಸಲು ಸಾಧ್ಯವಿದೆ (ಜಾಸ್ತಿ ವಿವರಗಳಿಗೆ ಭಟ್ ೧೯೯೯:೧೫೨ ನೋಡಿ).

ಕ್ರಿಯಾಪದಗಳಲ್ಲಿ ಸಮಯ ಸಂಬಂಧಕ್ಕೆ ಮಹತ್ವವನ್ನು ಕೊಡುವ ಹಳೆಗನ್ನಡ ಭಾಷೆಗೂ, ಸಮಯದ ಆಂತರಿಕ ವ್ಯವಸ್ಥೆಗೆ ಮಹತ್ವವನ್ನು ಕೊಡುವ ಸಂಸ್ಕೃತ ಭಾಷೆಗೂ ನಡುವೆ ಇಂತಹದೇ ವ್ಯತ್ಯಾಸವಿರುವ ಹಾಗೆ ಕಾಣಿಸುತ್ತದೆ. ಹಳೆಗನ್ನಡದ ಕ್ರಿಯಾಪದಗಳೆಲ್ಲವೂ ಘಟನೆಗಳನ್ನು ಸೂಚಿಸುವುದಕ್ಕಾಗಿಯೇ ಬಳಕೆಯಾಗುತ್ತವೆ.

ಇದಕ್ಕೆ ಅಪವಾದಗಳಾಗಿ ಒಳ್ (ಉಳ್), ಬಲ್, ಅಲ್ ಎಂಬಂತಹ ಕೆಲವೇ ಕೆಲವು ಕ್ರಿಯಾಪದಗಳು ಮಾತ್ರ ಘಟನೆಯ ಬದಲು ಸಂಗತಿಯನ್ನು (ಇಲ್ಲವೇ ಸಂಗತಿಯ ಇರುವಿಕೆಯನ್ನು) ಸೂಚಿಸುವುದಕ್ಕಾಗಿ ಬಳಕೆಯಾಗುತ್ತವೆ. ಈ ಕ್ರಿಯಾಪದಗಳು ಹಲವು ವಿಷಯಗಳಲ್ಲಿ ಘಟನೆಯನ್ನು ಸೂಚಿಸುವ ಕ್ರಿಯಾಪದಗಳಿಗಿಂತ ಭಿನ್ನವಾಗಿವೆ.

ಉದಾಹರಣೆಗಾಗಿ, ಇವು ನೇರವಾಗಿ ಘಟಕವನ್ನು ಸೂಚಿಸುವ ಆಖ್ಯಾತ ಪ್ರತ್ಯಯಗಳೊಂದಿಗೆ ಬರುತ್ತವಲ್ಲದೆ, ಸಮಯವನ್ನು ಸೂಚಿಸುವ ಪ್ರತ್ಯಯಗಳೊಂದಿಗೆ ಬರುವುದಿಲ್ಲ:

(೨೪ಕ) ಮಕ್ಕಳೊಳರ್ ಎನಗಯ್ವರ್
'ನನಗೆ ಐವರು ಮಕ್ಕಳಿದ್ದಾರೆ'

(೨೪ಖ) ಎಂತಪ್ಪ ದುಷ್ಟಾಶ್ವಂಗಳುಮನ್ ಏಱಲುಂ ತಿರ್ದಲುಂ ಬಲ್ಲೆನ್
'ಎಂತಹ ಕೆಟ್ಟಕುದುರೆಗಳನ್ನಾದರೂ ಹತ್ತಲು ಮತ್ತು ತಿದ್ದಲು ಬಲ್ಲೆ'

(೨೪ಗ) ನಿನ್ನ ಮಾತಿಂಗೆ ಮೆಳ್ಪಡುವಂತಪ್ಪಾಕೆಯಲ್ಲೆಂ
'(ನಾನು) ನಿನ್ನ ಮಾತಿಗೆ ಮೋಸಹೋಗುವಂತಹವಳಲ್ಲ'

(೨೪ಕ)ದಲ್ಲಿ ಬಂದಿರುವ ಒಳರ್ ಕ್ರಿಯಾರೂಪದಲ್ಲಾಗಲಿ, (೨೪ಖ)ದಲ್ಲಿ ಬಂದಿರುವ ಬಲ್ಲೆನ್ ಕ್ರಿಯಾರೂಪದಲ್ಲಾಗಲಿ ಸಮಯವನ್ನು ಸೂಚಿಸುವ ಪ್ರತ್ಯಯಗಳ ಬಳಕೆಯಾಗಿಲ್ಲ ಎಂಬುದನ್ನು ಗಮನಿಸಬಹುದು. ಸಂಗತಿಯನ್ನು ಅಲ್ಲಗಳೆಯುವ ಅಲ್ ಕ್ರಿಯಾಪದದ ಬಳಕೆಯೂ (೨೪ಗ) ಹೀಗೆಯೇ.

ಕೇಶಿರಾಜನು ಉಳ್ ಧಾತುವಿಗೆ 'ದತ್ವನಿಷೇಧ'ವನ್ನು ಹೇಳಿದ್ದಾನೆ (ಸೂ. ೨೫೬); ಆದರೆ, ನಿಜಕ್ಕೂ ಇಲ್ಲಿ ಸಮಯವನ್ನು ಸೂಚಿಸುವ ದ ಪ್ರತ್ಯಯವೊಂದೇ ಅಲ್ಲ, ಇತರ ಸಮಯಸೂಚಕ ಪ್ರತ್ಯಯಗಳೂ (ದಪ, ವಗಳೂ) ಬಳಕೆಯಾಗುವುದಿಲ್ಲ.

ಸಂಸ್ಕೃತದಲ್ಲಿ ಸಂಗತಿಗಳನ್ನು ಸೂಚಿಸಬಲ್ಲ ಕ್ರಿಯಾಪದಗಳೂ ಹಲವಿದ್ದು, ಅವಕ್ಕೂ ಇತರ ಘಟನೆಗಳನ್ನು ಸೂಚಿಸಬಲ್ಲ ಕ್ರಿಯಾಪದಗಳ ಹಾಗೆಯೇ ಬೇರೆ ಬೇರೆ ಸಮಯ ವ್ಯವಸ್ಥೆಯ ಭೇದಗಳನ್ನು (ಮತ್ತು ಸಮಯ ಸಂಬಂಧದ ಭೇದಗಳನ್ನು) ಸೂಚಿಸಬಲ್ಲ ಕ್ರಿಯಾರೂಪಗಳಿವೆ.

ಉದಾಹರಣೆಗಾಗಿ, ಶಕ್ ಕ್ರಿಯಾಪದಕ್ಕೆ ಎಲ್ಲಾ ರೀತಿಯ ಸಮಯ ಭೇದಗಳನ್ನು ಸೂಚಿಸಬಲ್ಲ ಕ್ರಿಯಾರೂಪಗಳೂ ಇವೆ.

(೨೫ಕ) ಮಯಾ ಕಟಃ ಕರ್ತುಂ ಶಕ್ಯತೇ
'ನನಗೆ ಚಾಪೆಯನ್ನು ಮಾಡಲು ಬರುತ್ತದೆ'

(೨೫ಖ) ಸಾ ಚೇಯಂ ಕಥಾ ಕ್ಷತ್ರಿಯಸ್ಯಾಕರ್ಷಣಾಯ ಅಶಕತ್
'ಆ ಕಥೆ ಕ್ಷತ್ರಿಯನನ್ನು ಆಕರ್ಷಿಸಲು ಶಕ್ತವಾಯಿತು'

## ೯.೭ ಸಾರಾಂಶ

ಕ್ರಿಯಾರೂಪಗಳ ರಚನೆಯಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ವ್ಯಾಕರಣದ ಮೂಲ ತತ್ವಗಳಲ್ಲೇನೇ ಹಲವಾರು ವ್ಯತ್ಯಾಸಗಳಿವೆ.

(೧) ಹಳೆಗನ್ನಡದ ಕ್ರಿಯಾರೂಪಗಳಲ್ಲಿ ಸಮಯ ಸಂಬಂಧಕ್ಕೆ ಮಹತ್ವವಿದೆ; ಆದರೆ, ಸಂಸ್ಕೃತ ಕ್ರಿಯಾರೂಪಗಳಲ್ಲಿ ಸಮಯದ ಆಂತರಿಕ ವ್ಯವಸ್ಥೆಗೆ ಮಹತ್ವವಿದೆ.

(೨) ಹಳೆಗನ್ನಡದಲ್ಲಿ ಸಮಯವನ್ನು ಸೂಚಿಸಲು ವಿಶಿಷ್ಟವಾದ ಪ್ರತ್ಯಯಗಳಿವೆ; ಆದರೆ, ಸಂಸ್ಕೃತದಲ್ಲಿ ಇದನ್ನು ಧಾತುವಿನಲ್ಲಿ ನಡೆಸಿರುವ ಬದಲಾವಣೆಗಳ ಮೂಲಕ ಮಾತ್ರವೇ ಸೂಚಿಸಲಾಗುತ್ತದೆ.

(೩) ಹಳೆಗನ್ನಡದಲ್ಲಿ ಆಖ್ಯಾತ ಪ್ರತ್ಯಯಗಳು ಪ್ರಥಮಪುರುಷದಲ್ಲಿ ಲಿಂಗ ಭೇದವನ್ನೂ ಸೂಚಿಸುತ್ತವೆ; ಆದರೆ, ಸಂಸ್ಕೃತದ ಆಖ್ಯಾತ ಪ್ರತ್ಯಯಗಳಲ್ಲಿ ಲಿಂಗಭೇದ ಸೂಚಿತವಾಗುವುದಿಲ್ಲ.

ಇಂತಹ ಬೇರೆಯೂ ಹಲವು ವ್ಯತ್ಯಾಸಗಳು ಈ ಎರಡು ಭಾಷೆಗಳ ನಡುವೆ ಇವೆಯೆಂಬುದನ್ನು ಗಮನಿಸದೆ, ಸಂಸ್ಕೃತದ ರೂಪರಚನಾನಿಯಮಗಳನ್ನು ಹಾಗೆಯೇ ಹಳೆಗನ್ನಡಕ್ಕೆ ಅಳವಡಿಸಲು ಪ್ರಯತ್ನಿಸಿದುದರಿಂದಾಗಿ, ಅದರ ವೈಯಾಕರಣಿಗಳು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗಿದೆ ಎಂಬುದನ್ನು ಈ ಅಧ್ಯಾಯದಲ್ಲಿ ತೋರಿಸಿಕೊಡಲಾಗಿದೆ.

ಅಧ್ಯಾಯ ಹತ್ತು

# ವಾಕ್ಯಗಳ ಜೋಡಣೆ

## ೧೦.೧ ಪೀಠಿಕೆ

ಅರ್ಥದಲ್ಲಿ ಒಂದಕ್ಕೊಂದು ಸಂಬಂಧಿಸಿರುವ ಎರಡು ಅಥವಾ ಜಾಸ್ತಿ ವಾಕ್ಯಗಳನ್ನು ಒಟ್ಟು ಸೇರಿಸಿ ಒಂದೇ ವಾಕ್ಯವನ್ನಾಗಿ ಮಾಡಿ ಹೇಳಲು ಭಾಷೆಗಳಲ್ಲಿ ಹಲವು ರೀತಿಯ ವಿಧಾನಗಳು ಬಳಕೆಯಲ್ಲಿರುತ್ತವೆ. ಈ ವಿಷಯದಲ್ಲೂ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಕೆಲವು ಮುಖ್ಯವಾದ ವ್ಯತ್ಯಾಸಗಳಿವೆ.

ವಾಕ್ಯಗಳನ್ನು ಜೋಡಿಸುವುದಕ್ಕಾಗಿ ಪದಗಳನ್ನು ಬಳಸಬಹುದು, ಇಲ್ಲವೇ ಪ್ರತ್ಯಯಗಳನ್ನು ಬಳಸಬಹುದು. ಉದಾಹರಣೆಗಾಗಿ, 'ಅಥವಾ' ಎಂಬ ಅರ್ಥವನ್ನು ಕೊಡಲು ಹಳೆಗನ್ನಡದಲ್ಲಿ ಮೇಣ್ ಪದವನ್ನು ಬಳಸಲಾಗುತ್ತದೆ.

(೧ಕ) ಬಾಳ ದಿನೇಶ ಬಿಂಬದ ನೆಟಿಲ್ ಜಲದೊಳ್ ನೆಲೆಸಿತ್ತೊ ಮೇಣ್ ಫಣೀಂದ್ರಾಳಯದಿಂದಮುರ್ಚಿದ ಫಣಾಮಣಿ ಮಂಗಳ ರಶ್ಮಿ ಯೋ (೧.೯೬)
'ಬಾಲಸೂರ್ಯಮಂಡಲದ ನೆಳಲು ನೀರಲ್ಲಿ ನೆಲೆಸಿದೆಯೋ ಅಥವಾ ನಾಗಲೋಕದಿಂದ ಭೇದಿಸಿಕೊಂಡು ಬಂದ ಹೆಡೆವಣಿಗಳ ಮಂಗಳ ಕಿರಣಗಳೋ'

ಆದರೆ, 'ಮತ್ತು' ಎಂಬರ್ಥವನ್ನು ಕೊಡಲು ಉಮ್ (ಅಮ್) ಪ್ರತ್ಯಯವನ್ನು ಬಳಸಲಾಗುತ್ತದೆ.

(೧ಖ) ನಿನ್ನಂ ಕೊಲ್ವನ್ನನೊರ್ವ ಮಗನುಮಂ ವಿಕ್ರಮಾರ್ಜುನಂಗೆ ಪೆಂಡತಿಯಪ್ಪನ್ನಳೊರ್ವ ಮಗಳುಮಂ ಪಡೆದಿಲ್ಲದಿರೆನ್ (೨.೪೬ ವ)
'ನಿನ್ನನ್ನು ಕೊಲ್ಲುವಂತಹ ಒಬ್ಬ ಮಗನನ್ನೂ ಮತ್ತು ವಿಕ್ರಮಾರ್ಜುನನಿಗೆ ಹೆಂಡತಿಯಾಗುವಂತಹ ಒಬ್ಬ ಮಗಳನ್ನೂ ಪಡೆಯದಿರುವುದಿಲ್ಲ'

ಹಳೆಗನ್ನಡದಲ್ಲಿ ಸಾಮಾನ್ಯವಾಗಿ ವಾಕ್ಯಗಳನ್ನು ಜೋಡಿಸುವುದಕ್ಕಾಗಿ ಪದಗಳಿಗಿಂತಲೂ ಪ್ರತ್ಯಯಗಳನ್ನು ಬಳಸುವುದೇ ಜಾಸ್ತಿ. ಇದಲ್ಲದೆ, ಹಳೆಗನ್ನಡದ ಕ್ರಿಯಾಪದಗಳಿಗೆ ಕೆಲವು ವಿಶಿಷ್ಟವಾದ 'ಜೋಡಿಸುವ' ರೂಪಗಳಿದ್ದು, ಅವನ್ನೂ ಈ ರೀತಿ ವಾಕ್ಯಗಳನ್ನು ಜೋಡಿಸುವುದಕ್ಕಾಗಿ ಬಳಸಲಾಗುತ್ತದೆ.

(೨ಕ) ದಿವ್ಯರಥಮನೆಸಗಲ್ ದಾರುಕನೆಂಬ ಸಾರಥಿಯನೀವುದುಂ (೫. ೨೦ವ)
'ದಿವ್ಯ ರಥವನ್ನು ನಡೆಸಲು ದಾರುಕನೆಂಬ ಸಾರಥಿಯನ್ನು ಕೊಟ್ಟಾಗ'

(೨ಖ) ತಾಂ ಮುನ್ನ ತಂದ ಅರಗಿಣಿಯಂ ಕೊಟ್ಟು ಕೃತಾಂತನಂತ ರ್ಧಾನಕ್ಕೆ ಸಂದಂ (೮.೪೪ವ)
'ತಾನು ತಂದಿದ್ದ ಅರಗಿಣಿಯನ್ನು ಕೊಟ್ಟು ಯಮನು ಅದೃಶ್ಯನಾದನು'

(೨ಗ) ಒಗರವೂಗಳ ಬಂಡನೆಯ್ದೆ ಪೀರುತ್ತೆ ಮಱಿದುಂಬಿಗಳ್ ಒಡವಂದುವು (೧೧.೮೧)
'ಮಿಶ್ರಹೂಗಳ ಮಕರಂದವನ್ನು ಪೂರ್ಣವಾಗಿ ಹೀರುತ್ತಾ ಮರಿದುಂಬಿಗಳು ಜೊತೆಯಲ್ಲೇ ಬಂದುವು'

ದಿವ್ಯರಥಮನೆಸಗುವಂ ಮತ್ತು ದಾರುಕನೆಂಬ ಸಾರಥಿಯನ್ ಈವನ್ ಎಂಬ ಎರಡು ವಾಕ್ಯಗಳನ್ನು (೨ಕ)ದಲ್ಲಿ ಜೋಡಿಸಲಾಗಿದೆ, ಮತ್ತು ಇದಕ್ಕಾಗಿ ಮೊದಲನೆಯ ವಾಕ್ಯದಲ್ಲಿ ಎಸಗು ಕ್ರಿಯಾಪದದ ಜೋಡಿಸುವ ರೂಪವಾದ ಎಸಗಲ್ ಎಂಬುದನ್ನು ಬಳಸಲಾಗಿದೆ.

ಇದೇ ರೀತಿಯಲ್ಲಿ (೨ಖ)ದಲ್ಲಿ ಕುಡು ಕ್ರಿಯಾಪದದ ಜೋಡಿಸುವ ರೂಪವಾಗಿರುವ ಕೊಟ್ಟು ಎಂಬುದನ್ನೂ, (೨ಗ)ದಲ್ಲಿ ಪೀರು ಕ್ರಿಯಾಪದದ ಜೋಡಿಸುವ ರೂಪವಾಗಿರುವ ಪೀರುತ್ತೆ ಎಂಬುದನ್ನೂ ಬಳಸಲಾಗಿದೆ.

ಇಂತಹ ಜೋಡಿಸುವ ಕ್ರಿಯಾರೂಪಗಳ ಬಳಕೆಯಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಕೆಲವು ಮುಖ್ಯವಾದ ವ್ಯತ್ಯಾಸಗಳಿದ್ದು, ಅವನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

## ೧೦.೨ ಹಳೆಗನ್ನಡದ ಜೋಡಿಸುವ ಕ್ರಿಯಾರೂಪಗಳು

ವಾಕ್ಯಗಳನ್ನು ಜೋಡಿಸುವುದಕ್ಕಾಗಿ ಹಳೆಗನ್ನಡದಲ್ಲಿ ಹಲವು ರೀತಿಯ ಕ್ರಿಯಾರೂಪಗಳು ಬಳಕೆಯಾಗುತ್ತಿದ್ದು, ಅವು ಈ ವಾಕ್ಯಗಳು ತಿಳಿಸುವ ಘಟನೆಗಳ ನಡುವೆ ಕಾಣಿಸುವ ಬೇರೆ ಬೇರೆ ರೀತಿಯ ಸಂಬಂಧಗಳನ್ನು ಸೂಚಿಸುತ್ತವೆ. ಇಂತಹ ಸಂಬಂಧಗಳು ಆ ಘಟನೆಗಳ ಸಮಯಕ್ಕೆ ಸಂಬಂಧಿಸಿರಬಹುದು (೧೦.೨.೧), ಇಲ್ಲವೇ ಅವುಗಳಲ್ಲಿ ಒಂದು ನಡೆಯದೆ ಇನ್ನೊಂದು ನಡೆದಿದೆ (ಕೆಳಗೆ ಕೊಟ್ಟಿರುವ (೬ಕ-ಗ) ವಾಕ್ಯಗಳನ್ನು ನೋಡಿ), ಅಥವಾ ಒಂದು ನಡೆಯುವುದು ಇನ್ನೊಂದು ನಡೆಯುವುದಕ್ಕೆ ಷರತ್ತು (೧೦.೨.೩) ಎಂಬಂತಹ ಬೇರೆ ರೀತಿಯವೂ ಇರಬಹುದು.

### ೧೦.೨.೧ ಸಮಯದ ಸೂಚನೆ

ಮೇಲೆ (೨ಕ-ಗ) ವಾಕ್ಯಗಳಲ್ಲಿ ಎಸಗಲ್, ಕೊಟ್ಟು, ಮತ್ತು ಪೀರುತ್ತೆ ಎಂಬುದಾಗಿ ಮೂರು ರೀತಿಯ ಜೋಡಿಸುವ ರೂಪಗಳು ಬಳಕೆಯಾಗಿವೆ. ಇವು ಎರಡು ಘಟನೆಗಳ ನಡುವೆ ಕಾಣಿಸಬಲ್ಲ ಮೂರು ರೀತಿಯ ಸಮಯ ಸಂಬಂಧಗಳನ್ನು ಸೂಚಿಸುತ್ತವೆ:

(ಕ) ಒಂದು ಘಟನೆ ಇನ್ನೊಂದು ಘಟನೆಯ ಅನಂತರ ನಡೆಯುವಂತಹದಿರಬಹುದು. ಇದನ್ನು ಸೂಚಿಸುವುದಕ್ಕಾಗಿ, ಹಳೆಗನ್ನಡದಲ್ಲಿ ಮೇಲೆ (೨ಕ)ದಲ್ಲಿ ಕಾಣಿಸಿದ ಹಾಗೆ, ಕ್ರಿಯಾಪದಕ್ಕೆ ನೇರವಾಗಿ ಅಲ್ ಪ್ರತ್ಯಯವನ್ನು ಸೇರಿಸಲಾಗುತ್ತದೆ (ಮಾಡಲ್, ಉಣಲ್, ಬರಲ್, ಕೊಲಲ್, ತರಲ್ ಮೊದಲಾದವು ಇಂತಹವೇ ಬೇರೆ ಕ್ರಿಯಾರೂಪಗಳು). ಇವುಗಳ ಬಳಕೆಯನ್ನು ಕೆಳಗಿನ ಉದಾಹರಣೆಗಳಲ್ಲೂ ಕಾಣಬಹುದು:

(೩ಕ) ಕೀಚಕಂ ತಮ್ಮಕ್ಕನಂ ಕಾಣಲ್ ಪೋದಂ
'ಕೀಚಕನು ತನ್ನ ಅಕ್ಕನನ್ನು ಕಾಣಲು ಹೋದನು'

(೩ಖ) ಭೀಮನ ಮೊನೆಯಂ ಆರಯಲ್ ವನೀಪಕರನಟ್ಟಿ
'ಭೀಮನ ಯುದ್ಧರೀತಿಯನ್ನು ಕಂಡುಹಿಡಿಯಲು ಗೂಢಚಾರರನ್ನು ಕಳಿಸಿ'

(೩ಗ) ಮಂತ್ರಮನುಪದೇಶಂ ಗೆಯ್ಯಲ್ ಬಂದೆವು
'ಮಂತ್ರವನ್ನು ಉಪದೇಶ ಮಾಡಲು ಬಂದಿದ್ದೇವೆ'

(ಖ) ಒಂದು ಘಟನೆ ಇನ್ನೊಂದು ಘಟನೆಗಿಂತ ಮೊದಲೇ ನಡೆಯುವಂತಹದಿರಬಹುದು. ಇದನ್ನು ಸೂಚಿಸುವುದಕ್ಕಾಗಿ ಮೇಲೆ (೨ಖ)ದಲ್ಲಿ ಕಾಣಿಸಿದ ಹಾಗೆ, ಕ್ರಿಯಾಪದಕ್ಕೆ ನೇರವಾಗಿ ಇ ಪ್ರತ್ಯಯವನ್ನು ಸೇರಿಸಲಾಗುತ್ತದೆ (ಅಳ್ಕಿ, ಓಡಿ, ನೆಲಸಿ, ಮೆಚ್ಚಿ ಮೊದಲಾದವು ಇಂತಹವೇ ಬೇರೆ ಕ್ರಿಯಾರೂಪಗಳು).

ಕೆಲವು ಕ್ರಿಯಾಪದಗಳಲ್ಲಿ ಈ ಪ್ರತ್ಯಯದೊಂದಿಗೆ ಹಿಂದಿನ ಸಮಯವನ್ನು ಸೂಚಿಸುವ ದ್ ಪ್ರತ್ಯಯವೂ ಬರುತ್ತದೆ, ಮತ್ತು ಈ ರೀತಿ ಹಿಂದಿನ ಸಮಯವನ್ನು ಸೂಚಿಸುವ ಪ್ರತ್ಯಯ ಬಂದಿರುವಲ್ಲಿ ಜೋಡಿಸುವ ಪ್ರತ್ಯಯಕ್ಕೆ ಇ ಎಂಬುದರ ಬದಲು ಉ ಎಂಬ ರೂಪವಿದೆ (ಕೊಯ್ದು, ಗೆಯ್ದು, ತಿಂದು, ಕೊಂದು).

ಈ ನಿಯಮಕ್ಕೆ ಅಪವಾದವಾಗಿ, ಕೆಲವು ಕ್ರಿಯಾಪದಗಳೊಂದಿಗೆ ದ್ ಪ್ರತ್ಯಯ ಬಂದಿದೆಯಾದರೂ ಅದರ ಅನಂತರ ಈ ಪ್ರತ್ಯಯ ಇ ರೂಪದಲ್ಲೇ ಬರುತ್ತದೆ (ತೆರಳ್ದಿ, ನಾಂದಿ).

(೪ಕ) ಆ ಮಾತಿಂಗೆ ಮೆಚ್ಚಿ ಕುಂಭಸಂಭವಂ ಗಾಂಗೇಯನನಿಂತೆಂದಂ
'ಆ ಮಾತಿಗೆ ಮೆಚ್ಚಿ ದ್ರೋಣನು ಭೀಷ್ಮನಿಗೆ ಹೀಗೆ ಹೇಳಿದನು'

(೪ಖ) ನೀಂ ಎನ್ನ ಕಾಳೆಗಮಂ ಪೆಱಗಿರ್ದು ನೋಡಿಂ
'ನೀವು ನನ್ನ ಯುದ್ಧವನ್ನು ಹೊರಗೆ ಇದ್ದು ನೋಡಿ'

(೪ಗ) ವಿದುರಂ ರಥಾರೂಢನಾಗಿ ಪಾಂಚಳ ರಾಜಪುರಕ್ಕೆ ವಂದು ಪಾಂಡುಪುತ್ರರಂ ಕಂಡು...
'ವಿದುರನು ರಥವನ್ನೇರಿ, ದೃಪದನ ಪಟ್ಟಣಕ್ಕೆ ಬಂದು, ಪಾಂಡವರನ್ನು ಕಂಡು...'

(ಗ) ಒಂದು ಘಟನೆ ಇನ್ನೊಂದು ಘಟನೆ ನಡೆಯುವ ಸಮಯದಲ್ಲೇನೇ ನಡೆಯುವಂತಹದಿರಬಹುದು. ಇದನ್ನು ಸೂಚಿಸುವುದಕ್ಕಾಗಿ ಕ್ರಿಯಾಪದಕ್ಕೆ ನೇರವಾಗಿ ಉತ್ತೆ ಪ್ರತ್ಯಯವನ್ನು ಸೇರಿಸಲಾಗುತ್ತದೆ (ಮಾಡುತ್ತೆ, ನೋಡುತ್ತೆ, ಕೇಳುತ್ತೆ, ತೆಗಳುತ್ತೆ, ಎನುತ್ತೆ, ಇಸುತ್ತೆ).

(೫ಕ) ಒಗರವೂಗಳ ಬಂಡನೆಯ್ದೆ ಪೀರುತ್ತೆ ಮಱಿದುಂಬಿಗಳ್ ಒಡವಂದುವು
'ಮಿಶ್ರಹೂಗಳ ಜೇನನ್ನು ಚನ್ನಾಗಿ ಹೀರುತ್ತಾ ಮರಿದುಂಬಿಗಳು ಜೊತೆಯಲ್ಲೇ ಬಂದುವು'

(೫ಖ) ಪೆಱಗೆ ಕೃತಕ ಕಿರಾತಂ (ವರಾಹನಂ) ಅಟ್ಟುತ್ತುಂ ಬಂದಂ
'ಹಿಂದಿನಿಂದ ಕೃತಕ ಕಿರಾತನು (ಹಂದಿಯನ್ನು) ಅಟ್ಟುತ್ತಲೂ ಬಂದನು'

(೫ಗ) ಎಂದೊರ್ವರೊರ್ವರ್ ಒಂದೊಂದನೆ ನುಡಿಯುತ್ತುಂ ಪೋಗೆ
'ಎಂಬುದಾಗಿ ಒಬ್ಬೊಬ್ಬರು ಒಂದೊಂದನ್ನೂ ಆಡುತ್ತಾ ಹೋಗುತ್ತಿರುವಾಗ'

ಮೇಲೆ ವಿವರಿಸಿದಂತಹ ಮೂರು ಬಗೆಯ ಜೋಡಿಸುವ ಕ್ರಿಯಾರೂಪಗಳು ಮಾತ್ರವಲ್ಲದೆ, ಒಂದು ಘಟನೆ ನಡೆಯದೆ ಇನ್ನೊಂದು ಘಟನೆ ನಡೆದಿದೆ (ಇಲ್ಲವೇ ನಡೆಯಲಿದೆ) ಎಂಬುದನ್ನು

ಸೂಚಿಸುವುದಕ್ಕಾಗಿ ಕ್ರಿಯಾಪದಕ್ಕೆ ಅದೆ ಪ್ರತ್ಯಯವನ್ನು ಸೇರಿಸಿ ರಚಿಸಿರುವ ಇನ್ನೊಂದು ರೀತಿಯ (ಅಲ್ಲಗಳೆಯುವ) ಜೋಡಿಸುವ ಕ್ರಿಯಾರೂಪವೂ ಹಳೆಗನ್ನಡದಲ್ಲಿ ಬಳಕೆಯಲ್ಲಿದೆ (ಅಜುಂಯದೆ, ಪೋಗದೆ, ನಿಲ್ಲದೆ, ಉಣ್ಣದೆ, ತುಡದೆ).

(೬ಕ) ನಿಮ್ಮೊಡನೆ ಆಳೋಚಿಸದೆ ಎಮಗೆ ನೆಗಟಲ್ ಏಂ ನೆರವುಂಟೇ
'ನಿನ್ನೊಡನೆ ಆಲೋಚಿಸದೆ ಮಾಡಲು ನಮಗೆ ಸಾಧ್ಯವೆ?'

(೬ಖ) ಎತ್ತಲಣ್ಮದೆ ಕಾಲದೆಸೆಯೊಳ್ ಉಸಿರದೆ ಕುಳ್ಳಿರೆ
'ಎಬ್ಬಿಸಲು ಇಷ್ಟಪಡದೆ ಕಾಲಿನ ಹತ್ತಿರ ಮಾತನಾಡದೆ ಕುಳಿತಿರಲು'

(೬ಗ) ಎವೆಯಿಕ್ಕದೆ ನೋಟ್ಟಿ ಕಣ್
'ರೆಪ್ಪೆ ಹೊಡೆಯದೆ ನೋಡುವ ಕಣ್ಣು'

### ೧೦.೨.೨ ಬಳಕೆಗೆ ನಿರ್ಬಂಧ

ಈ ಜೋಡಿಸುವ ರೂಪಗಳ ಒಂದು ವೈಶಿಷ್ಟ್ಯವೇನೆಂದರೆ, ಇವುಗಳ ಮೂಲಕ ಜೋಡಿಸಿರುವ ವಾಕ್ಯಗಳೆರಡರಲ್ಲೂ ಸ್ವೇಚ್ಛೆಯಿಂದ ನಡೆಸುವಂತಹ ಘಟನೆಗಳನ್ನು ಸೂಚಿಸಲಾಗಿದೆಯಾದರೆ, ಆ ಎರಡು ಘಟನೆಗಳನ್ನೂ ಒಬ್ಬನೇ ವ್ಯಕ್ತಿ (ಮಾಡುಗ ಘಟಕ) ನಡೆಸುತ್ತಿರಬೇಕು ಎಂಬ ನಿರ್ಬಂಧವಿದೆ.

ಎರಡು ವಾಕ್ಯಗಳಲ್ಲಿ ಒಂದು ಇಲ್ಲವೇ ಎರಡು ವಾಕ್ಯಗಳೂ ಈ ರೀತಿ ಸ್ವೇಚ್ಛೆಯಿಂದ ನಡೆಸುವ ಘಟನೆಯನ್ನು ಸೂಚಿಸುವುದಿಲ್ಲವಾದರೆ, ಅವುಗಳ ಮೇಲೆ ಈ ನಿರ್ಬಂಧವಿಲ್ಲ.

(೭) ಪ್ರಿಯನಂ ಕಂಡು ಸುಖಮಾದುದು
'ಪ್ರಿಯನನ್ನು ನೋಡಿ (ನನಗೆ) ಸುಖವಾಯಿತು'

(೭)ನೇ ವಾಕ್ಯದಲ್ಲಿ ಮೊದಲನೆಯ ವಾಕ್ಯದ ಕರ್ತೃ ನಾನು (ಇಲ್ಲವೇ ಸುಖ ಎಂಬುದಕ್ಕಿಂತ ಭಿನ್ನವಾದ ಬೇರೊಂದು ಪದ) ಮತ್ತು ಎರಡನೆಯದರ ಕರ್ತೃ ಸುಖ. ಹೀಗಿದ್ದರೂ ಇಲ್ಲಿ ಕಂಡು ಕ್ರಿಯಾರೂಪದ ಬಳಕೆಯಾಗಿದೆ. ಎರಡನೆಯ ವಾಕ್ಯದಲ್ಲಿ ಸುಖ ಎಂಬುದು ಸ್ವೇಚ್ಛೆಯಿಂದ ಘಟನೆಯಲ್ಲಿ ತೊಡಗುವ ಮಾಡುಗನಲ್ಲ ಎಂಬುದೇ ಇಂತಹ ಬಳಕೆ ಸಾಧ್ಯವಾಗಲು ಕಾರಣ.

ಹೊಸಗನ್ನಡದಲ್ಲೂ ಇಂತಹದೇ ನಿರ್ಬಂಧವಿದೆ ಎಂಬುದನ್ನು ಭಟ್ (೨೦೦೪:೧೯೬)ರಲ್ಲಿ ವಿವರಿಸಲಾಗಿದೆ.

### ೧೦.೨.೩ ಎ ಪ್ರತ್ಯಯದ ಬಳಕೆ

ಬೇರೆ ಬೇರೆ ವ್ಯಕ್ತಿಗಳು ಸ್ವೇಚ್ಛೆಯಿಂದ ನಡೆಸುವಂತಹ ಘಟನೆಗಳನ್ನು ಸೂಚಿಸುವ ವಾಕ್ಯಗಳನ್ನು ಜೋಡಿಸುವುದಕ್ಕಾಗಿ ಹಳೆಗನ್ನಡದಲ್ಲಿ ಬೇರೆಯೇ ಒಂದು ಕ್ರಿಯಾರೂಪ ಬಳಕೆಯಲ್ಲಿದೆ. ಕ್ರಿಯಾಪದಕ್ಕೆ ಎ ಪ್ರತ್ಯಯವನ್ನು ಸೇರಿಸಿ ಈ ಕ್ರಿಯಾರೂಪವನ್ನು ತಯಾರಿಸಲಾಗುತ್ತದೆ (ಸುಡೆ, ಆಡೆ, ಆಗೆ, ಸೋಂಕೆ, ಪಿಡಿಯೆ).

ಈ ಕ್ರಿಯಾರೂಪದ ಮೂಲಕ ಸೂಚಿತವಾಗುವ ಘಟನೆ ಅದರ ಅನಂತರ ಸೂಚಿತವಾಗುವ ಘಟನೆಗಿಂತ ಮೊದಲೇ ನಡೆದಿದೆಯೆಂಬ ಅರ್ಥವೂ (ಎಂದರೆ ಇ (ಉ) ಪ್ರತ್ಯಯದ ಮೂಲಕ ರಚಿತವಾಗಿರುವ ಕ್ರಿಯಾರೂಪದ ಅರ್ಥವೂ) ಈ ಕ್ರಿಯಾರೂಪಕ್ಕಿದೆ.

(೮ಕ) ಪಾಂಡ್ಯನ್ ತೋಮರದಿಂದ ಇಡೆ ಗುರುತನೂಜಂ ಎಡೆಯೊಳ್ ಕಡಿದಂ
'ಪಾಂಡ್ಯನು ತೋಮರದಿಂದ ಹೊಡೆದಾಗ ಅಶ್ವತ್ಥಾಮನು (ಅದನ್ನು) ಮಧ್ಯಮಾರ್ಗದಲ್ಲೇ ಕಡಿದನು'

(೮ಖ) ಪಾಂಚಾಳರಾಜತನೂಜೆವೆರಸು ಪಾಂಡವರ್ ಪೊಟಲಂ ಪೊಱಮಡೆ ಪುರಜನಂಗಳೆಲ್ಲ ತಮ್ಮೊಳಿಂತೆಂದರ್
'ಪಾಂಡವರು ದ್ರೌಪದಿಯೊಡನೆ ಪಟ್ಟಣವನ್ನು ಬಿಟ್ಟು ಹೋದಾಗ ಪಟ್ಟಣದ ಜನರೆಲ್ಲ ತಮ್ಮೊಳಗೆ ಹೀಗೆ ಹೇಳಿಕೊಂಡರು'

(೮ಕ)ದಲ್ಲಿ ತೋಮರದಿಂದ ಹೊಡೆಯುವ ಘಟನೆ, ಮತ್ತು ಅದನ್ನು ಮಾರ್ಗ ಮಧ್ಯದಲ್ಲೇ ಕಡಿಯುವ ಘಟನೆ – ಇವೆರಡೂ ಸ್ವೇಚ್ಛೆಯಿಂದ ನಡೆಸುವ ಘಟನೆಗಳು. ಇವನ್ನು ಬೇರೆ ಬೇರೆ ವ್ಯಕ್ತಿಗಳು (ಪಾಂಡ್ಯ ಮತ್ತು ಅಶ್ವತ್ಥಾಮ) ನಡೆಸುತ್ತಿರುವ ಕಾರಣ, ಈ ವಾಕ್ಯಗಳನ್ನು ಜೋಡಿಸಲು (೮ಕ)ದಲ್ಲಿ ಇಡು ಕ್ರಿಯಾಪದದ ಇಟ್ಟು ರೂಪದ ಬದಲು, ಇಡೆ ರೂಪವನ್ನು ಬಳಸಲಾಗಿದೆ. (೮ಖ)ದಲ್ಲೂ ಹೀಗೆಯೇ.

ಆದರೆ, ಎ ಪ್ರತ್ಯಯದಿಂದ ರಚಿತವಾಗಿರುವ ಈ ಕ್ರಿಯಾರೂಪವನ್ನು ಒಬ್ಬನೇ ವ್ಯಕ್ತಿ ಮಾಡುಗನಾಗಿ ನಡೆಸುವ ಎರಡು ವಾಕ್ಯಗಳನ್ನು ಜೋಡಿಸುವಲ್ಲೂ ಬಳಸಲು ಸಾಧ್ಯವಿದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯವನ್ನು ಗಮನಿಸಬಹುದು:

(೯) ಅರಾತಿಕಾಳಾನಳನ್ ತಾನುಂ ಭೀಮಸೇನನುಂ ದಿವ್ಯಶರಾಸನಂಗಳಂ ಕೊಂಡು ಪೂಣೆ ಪುಗುವ ಅರಾತಿಬಲಮಂ ಮಾರ್ಕೊಂಡು ತೆಗೆ ನೆಱದಿಸೆ ತಳರ್ದತ್ತರಾತಿಬಲಂ
'ಅರ್ಜುನನು ತಾನೂ ಭೀಮನೂ ಬಿಲ್ಲುಗಳನ್ನು ತೆಗೆದುಕೊಂಡು, ಪ್ರತಿಜ್ಞೆ ಮಾಡಿ, ಪ್ರವೇಶಿಸುವ ಶತ್ರುಸೈನ್ಯವನ್ನು ಪ್ರತಿಭಟಿಸಿ, (ಬಿಲ್ಲು ಗಳನ್ನು) ದೀರ್ಘವಾಗಿ ಎಳೆದು (ಬಾಣಗಳನ್ನು) ಪ್ರಯೋಗಿಸಿದಾಗ ಶತ್ರುಸೈನ್ಯ ಹಿಮ್ಮೆಟ್ಟಿತು'

(೯)ನೇ ವಾಕ್ಯದಲ್ಲಿ ಸ್ವೇಚ್ಛೆಯಿಂದ ನಡೆಸುವ ಹಲವು ಘಟನೆಗಳನ್ನು ಒಟ್ಟಿಗೆ ಸೇರಿಸಲಾಗಿದ್ದು, ಅವುಗಳಲ್ಲಿ ಕೊನೆಯದನ್ನು ('ಶತ್ರುಸೈನ್ಯ ಹಿಮ್ಮೆಟ್ಟಿತು' ಎಂಬುದನ್ನು) ಬಿಟ್ಟು, ಉಳಿದ ಎಲ್ಲಾ ಘಟನೆಗಳನ್ನೂ ಅರ್ಜುನ ಮತ್ತು ಭೀಮ ಎಂಬವರೇ ನಡೆಸಿದ್ದಾರೆ. ಆದರೆ, ಇವುಗಳಲ್ಲಿ ಬರುವ ಜೋಡಿಸುವ ಕ್ರಿಯಾರೂಪಗಳಲ್ಲಿ ಎರಡನ್ನು (ಕೊಂಡು ಮತ್ತು ಮಾರ್ಕೊಂಡು) ಉ ಪ್ರತ್ಯಯದ ಮೂಲಕವೂ ಬೇರೆ ಎರಡನ್ನು (ಪೂಣೆ ಮತ್ತು ತೆಗೆ) ಎ ಪ್ರತ್ಯಯದ ಮೂಲಕವೂ ರಚಿಸಲಾಗಿದೆ.

### ೧೦.೨.೪ ಅಲ್ ಪ್ರತ್ಯಯದ ಬಳಕೆ

ಕ್ರಿಯಾಪದಗಳಿಗೆ ಅಲ್ ಪ್ರತ್ಯಯವನ್ನು ಸೇರಿಸಿ ರಚಿಸಿದ ಕ್ರಿಯಾರೂಪಗಳನ್ನು ಮೂರು ಅರ್ಥಗಳಲ್ಲಿ (ಮೊದಲು ನಡೆದ ಘಟನೆ, ಅನಂತರ ನಡೆದ ಘಟನೆ, ಮತ್ತು ಘಟನೆಯನ್ನು ನಡೆಸುವುದು ಬೇಡ ಎಂಬರ್ಥಗಳಲ್ಲಿ) ಬಳಸಲು ಸಾಧ್ಯವಿದೆ ಎಂಬುದನ್ನು ನಾವು ಮೇಲೆ (೯.೫.೧)ರಲ್ಲಿ ನೋಡಿರುವೆವು. ಇವುಗಳಲ್ಲಿ ಮೊದಲನೆಯ ಎರಡು ಅರ್ಥಗಳಲ್ಲಿ ಬರುವ ಕ್ರಿಯಾರೂಪಗಳನ್ನು ವಾಕ್ಯಗಳನ್ನು ಜೋಡಿಸುವುದಕ್ಕಾಗಿ ಬಳಸಲಾಗುತ್ತದೆ.

ಮೊದಲನೆಯ ಅರ್ಥದಲ್ಲಿ (ಎಂದರೆ ಮೊದಲು ನಡೆದ ಘಟನೆಯನ್ನು ಸೂಚಿಸುವ ಅರ್ಥದಲ್ಲಿ) ಈ ಕ್ರಿಯಾರೂಪವನ್ನು ಬಳಸಲಾಗಿದೆಯಾದರೆ, ಅಂತಹ ಬಳಕೆಯ ಮೇಲೆ (೧೦.೨.೨)ರಲ್ಲಿ ಸೂಚಿಸಿದ ನಿರ್ಬಂಧವಿಲ್ಲ ಎಂಬುದನ್ನು ಪಂಪಭಾರತದ ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು:

(೧೦ಕ) ಎಂದು ನುಡಿದು ಕಳುಪಲ್ ಆ ದ್ರೌಪದಿ ಸಂತಸಂಬಟ್ಟು ಅಂತೆ ಗೆಯ್ವೆನೆಂದು ಪೋಗಿ (೮.೬೨ವ)
'(ಕೀಚಕನು) ಹಾಗೆ ಹೇಳಿ ಕಳುಹಿಸಿದಾಗ ದ್ರೌಪದಿ ಸಂತೋಷಪಟ್ಟು ಹಾಗೆಯೇ ಮಾಡುತ್ತೇನೆಂದು (ಹೇಳಿ) (ಹೋದಳು); ಹೋಗಿ..'

(೧೦ಖ) ರಥಮನೇಱಲೊಡಂ ಪಾವಕನಟ್ಟು ಖಾಂಡವಮನುಂಡಪನ್ (೫.೬೭ವ–೬೮)
'(ಅರ್ಜುನನು) ರಥವನ್ನೇರಿದೊಡನೆಯೇ ಅಗ್ನಿಯು ಖಾಂಡವವನ್ನು ಸುಟ್ಟು ಉಣ್ಣುತ್ತಾನೆ'

(೧೦ಕ)ದಲ್ಲಿ ಕಳಿಸುವುದು ಮತ್ತು ಹೋಗುವುದು ಎಂಬ ಎರಡು ಸ್ವೇಚ್ಛೆಯಿಂದ ನಡೆಸುವ ಘಟನೆಗಳನ್ನು ಅಲ್ ಪ್ರತ್ಯಯದ ಮೂಲಕ ಜೋಡಿಸಲಾಗಿದೆ. ಆದರೆ, ಈ ಎರಡು ಘಟನೆಗಳನ್ನು ನಡೆಸುವವರು ಬೇರೆ ಬೇರೆ ವ್ಯಕ್ತಿಗಳು ಎಂಬುದನ್ನೂ, ಮತ್ತು ಇಲ್ಲಿ ಅಲ್ ಪ್ರತ್ಯಯಕ್ಕೆ ಮೊದಲಿನ ಘಟನೆಯನ್ನು ಸೂಚಿಸುವ ಅರ್ಥವಿದೆಯಲ್ಲದೆ ಅನಂತರದ ಘಟನೆಯನ್ನು ಸೂಚಿಸುವ ಅರ್ಥವಿಲ್ಲ ಎಂಬುದನ್ನೂ ಗಮನಿಸಬಹುದು.

ಆದರೆ, ಎರಡನೆಯ ಅರ್ಥದಲ್ಲಿ (ಎಂದರೆ ಅನಂತರ ನಡೆಯುವ ಘಟನೆಯನ್ನು ಸೂಚಿಸುವ ಅರ್ಥದಲ್ಲಿ) ಈ ಪ್ರತ್ಯಯವನ್ನು ಬಳಸಲಾಗಿದೆಯಾದರೆ, ಮೇಲೆ (೧೦.೨.೨)ರಲ್ಲಿ ಕೊಟ್ಟಿರುವ ನಿರ್ಬಂಧ ಅಂತಹ ಬಳಕೆಯ ಮೇಲೆ ಅನ್ವಯಿಸುತ್ತದೆ.

### ೧೦.೨.೫ ಷರತ್ತನ್ನು ಸೂಚಿಸುವುದು

ಷರತ್ತನ್ನು ಸೂಚಿಸುವ ಒಂದು ವಾಕ್ಯದೊಂದಿಗೆ ಆ ಷರತ್ತಿನ ಮೇಲೆ ಅವಲಂಬಿಸಿರುವ ಇನ್ನೊಂದು ವಾಕ್ಯವನ್ನು ಜೋಡಿಸಿ ಹೇಳುವುದಕ್ಕಾಗಿಯೂ ಹಳೆಗನ್ನಡದಲ್ಲಿ ಜೋಡಿಸುವ ಕ್ರಿಯಾರೂಪದ ಬಳಕೆಯಾಗುತ್ತದೆ. ಇಂತಹ ಕ್ರಿಯಾರೂಪವನ್ನು ತಯಾರಿಸಬೇಕಿದ್ದಲ್ಲಿ, ಕ್ರಿಯಾಪದದ ಸಂಬಂಧಿಸುವ ರೂಪಕ್ಕೆ ಒಡೆ ಪ್ರತ್ಯಯವನ್ನು ಸೇರಿಸಬೇಕಾಗುತ್ತದೆ.

ಕ್ರಿಯಾಪದಗಳಿಗೆ ಮುಂದಿನ ಸಮಯದ ರೂಪ, ಹಿಂದಿನ ಸಮಯದ ರೂಪ, ಮತ್ತು ಅಲ್ಲಗಳೆಯುವ ರೂಪ ಎಂಬುದಾಗಿ ಮೂರು ರೀತಿಯ ಸಂಬಂಧಿಸುವ ರೂಪಗಳಿದ್ದು, ಈ ಮೂರರೊಂದಿಗೂ ಒಡೆ ಪ್ರತ್ಯಯವನ್ನು ಬಳಸಿ ಷರತ್ತನ್ನು ಸೂಚಿಸಲು ಸಾಧ್ಯವಿದೆ. ಉದಾಹರಣೆಗಾಗಿ, ಪಂಪಭಾರತದ ಕೆಳಗಿನ ಬಳಕೆಗಳನ್ನು ಗಮನಿಸಬಹುದು:

(೧೧ಕ) ಎಮ್ಮ ಮಗಳ್ಗೆ ಪುಟ್ಟಿದಾತಂ ರಾಜ್ಯಕ್ಕೊಡೆಯನ್ ಅಪ್ಪೊಡೆ ಕುಡುವೆಂ (೧.೬೦ವ)
'ನಮ್ಮ ಮಗಳಿಗೆ ಹುಟ್ಟುವವನು ರಾಜ್ಯಕ್ಕೆ ಒಡೆಯನಾಗುವುದಾದರೆ (ಮಗಳನ್ನು) ಕೊಡುವೆವು'

(೧೧ಖ) ಎನ್ನಯ ದೂಸಱಿಂ ಪತಿ ಸತ್ತೊಡೆ ಸತ್ತ ಪಾಪಮೆನ್ನನ್ ನರಕಂಗಳೊಳ್ ಅೞ್ಗುಗುಂ (೧.೭೩)
'ನನ್ನಿಂದಾಗಿ ಪತಿ ಸತ್ತರೆ ಸತ್ತ ಪಾಪವು ನನ್ನನ್ನು ನರಕದಲ್ಲಿ ಮುಳುಗಿಸೀತು'

(೧೧ಗ) ಪೇೞದೊಡೆ ಪೋಗದಿರ್ (೧೩.೫೫)
'ಹೇಳದಿದ್ದರೆ ಹೋಗಬೇಡ'

(೧೧ಕ)ದಲ್ಲಿ ಷರತ್ತನ್ನು ಸೂಚಿಸುವ ಅಪ್ಪೊಡೆ ಕ್ರಿಯಾರೂಪವನ್ನು ಮುಂದಿನ ಸಮಯವನ್ನು ಸೂಚಿಸುವ ಅಪ್ಪ ಕ್ರಿಯಾರೂಪಕ್ಕೆ ಒಡೆ ಪ್ರತ್ಯಯವನ್ನು ಸೇರಿಸಿ ರಚಿಸಲಾಗಿದೆ; ಆದರೆ, (೧೧ಖ)ದಲ್ಲಿ ಇದೇ ಪ್ರತ್ಯಯವನ್ನು ಹಿಂದಿನ ಸಮಯವನ್ನು ಸೂಚಿಸುವ ಸತ್ತ ಕ್ರಿಯಾರೂಪಕ್ಕೂ (ಸತ್ತೊಡೆ), (೧೧ಗ)ದಲ್ಲಿ ಅಲ್ಲಗಳೆಯುವ ಪೋಗದ ಕ್ರಿಯಾರೂಪಕ್ಕೂ (ಪೋಗದೊಡೆ) ಸೇರಿಸಿ ರಚಿಸಲಾಗಿದೆ.

ಇಂತಹ ಷರತ್ತಿನ ಕ್ರಿಯಾರೂಪಗಳಲ್ಲಿ ಬರುವ ದ ಮತ್ತು ವ (ಪ) ಪ್ರತ್ಯಯಗಳಿಗೆ ಬೇರೆ ಕ್ರಿಯಾರೂಪಗಳಲ್ಲಿ ಬರುವ ಪ್ರತ್ಯಯಗಳಿಗಿಂತ ತೀರ ಭಿನ್ನವಾಗಿರುವಂತಹ ಸಮಯವನ್ನು ಸೂಚಿಸುವ ಅರ್ಥವಿದೆಯೆಂಬುದನ್ನು ಇಲ್ಲಿ ಗಮನಿಸುವುದು ಅವಶ್ಯ. ಸಾಮಾನ್ಯವಾಗಿ, ಇಂತಹ ಷರತ್ತನ್ನು ಸೂಚಿಸುವ ಕ್ರಿಯಾರೂಪಗಳಲ್ಲಿ ಈ ಎರಡು ಪ್ರತ್ಯಯಗಳೂ ಮಾತಿನ ಸಮಯದ ಅನಂತರ ನಡೆಯುವ (ಎಂದರೆ ಮುಂದಿನ ಸಮಯದಲ್ಲಿ ಅಥವಾ ಭವಿಷ್ಯತ್ ಕಾಲದಲ್ಲಿ ನಡೆಯುವ) ಘಟನೆಯನ್ನೇ ಸೂಚಿಸುತ್ತವೆ.

ಇತರ ಬಳಕೆಗಳಲ್ಲಿ ಕಾಣಿಸುವ ಹಾಗೆ, ದ ಪ್ರತ್ಯಯಕ್ಕೆ ಮಾತಿನ ಸಮಯಕ್ಕಿಂತ ಮೊದಲು (ಎಂದರೆ ಹಿಂದಿನ ಸಮಯದಲ್ಲಿ ಅಥವಾ ಭೂತಕಾಲದಲ್ಲಿ) ನಡೆಯುವ ಘಟನೆಯನ್ನು ಸೂಚಿಸುವ ಅರ್ಥ ಈ ಷರತ್ತನ್ನು ಸೂಚಿಸುವ ಕ್ರಿಯಾರೂಪಗಳಲ್ಲಿಲ್ಲ. ಉದಾಹರಣೆಗಾಗಿ, (೧೧ಖ)ದಲ್ಲಿ ಸತ್ತೊಡೆ ಕ್ರಿಯಾರೂಪ ಹಿಂದಿನ ಸಮಯದ ಘಟನೆಯನ್ನು ಸೂಚಿಸುವುದಿಲ್ಲ. ಆ ವಾಕ್ಯವನ್ನಾಡಿರುವ ಸಮಯುದ ಅನಂತರ ನಡೆಯುಬಹುದಾದ ಘಟನೆಯೊಂದನ್ನು ಮಾತ್ರವೇ ಅದು (ಷರತ್ತಾಗಿ) ಸೂಚಿಸುತ್ತದೆ.

ಇಂತಹ ಷರತ್ತಿನ ರೂಪಗಳಲ್ಲಿ ದ ಮತ್ತು ವ (ಪ) ಪ್ರತ್ಯಯಗಳ ನಡುವೆ ಬೇರೆಯೇ ಒಂದು ಅರ್ಥವ್ಯತ್ಯಾಸ ಕಾಣಿಸುತ್ತದೆ: ದ ಪ್ರತ್ಯಯ ಬಂದಿದೆಯಾದರೆ, ಅದಕ್ಕೆ ಆ ಷರತ್ತು ಸೂಚಿಸುವ ಘಟನೆ ಅದನ್ನು ಅವಲಂಬಿಸಿರುವ ಘಟನೆಗಿಂತ ಮೊದಲೇ ನಡೆದಿರಬೇಕೆಂಬ ಅರ್ಥ ಬರುತ್ತದೆ, ಮತ್ತು ವ (ಪ) ಪ್ರತ್ಯಯ ಬಂದಿದೆಯಾದರೆ, ಅದಕ್ಕೆ ಆ ಘಟನೆ ಅದರ ಮೇಲೆ ಅವಲಂಬಿಸಿರುವ ಘಟನೆಗಿಂತ ಅನಂತರ ನಡೆಯಬೇಕಾಗಿದೆಯೆಂಬ ಅರ್ಥ, ಇಲ್ಲವೇ ಅವರೆಡೂ ಒಂದೇ ಸಮಯದಲ್ಲಿ ನಡೆಯುವಂತಹವೆಂಬ ಅರ್ಥ ಬರುತ್ತದೆ.

ಉದಾಹರಣೆಗಾಗಿ, ಮೇಲೆ (೧೧ಕ) ವಾಕ್ಯದ ಷರತ್ತಿನ ಕ್ರಿಯಾರೂಪದಲ್ಲಿ ಪ ಪ್ರತ್ಯಯ ಬಂದಿದೆ (ಅಪ್ಪೊಡೆ), ಮತ್ತು ರಾಜನಾಗುವ ಷರತ್ತಿನ ಘಟನೆ ಅದನ್ನು ಅವಲಂಬಿಸಿರುವ ಕೊಡುವ ಘಟನೆಯ ಅನಂತರ ನಡೆಯುವಂತಹದೆಂಬ ಅರ್ಥ ಬರುತ್ತದೆ; ಆದರೆ, (೧೧ಖ)ದಲ್ಲಿ ದ (ತ) ಪ್ರತ್ಯಯ ಬಂದಿದೆ (ಸತ್ತೊಡೆ), ಮತ್ತು ಸಾಯುವ ಘಟನೆ (ಷರತ್ತು) ಅದನ್ನು ಅವಲಂಬಿಸಿರುವ ನರಕಕ್ಕೆ ಹೋಗುವ ಘಟನೆಗಿಂತ ಮೊದಲೇ ನಡೆಯುವಂತಹದೆಂಬ ಅರ್ಥ ಬರುತ್ತದೆ (೧೦.೪.(೧)) ನೋಡಿ).

## ೧೦.೩ ಸಂಸ್ಕೃತದಲ್ಲಿ ಜೋಡಿಸುವ ಕ್ರಿಯಾರೂಪಗಳು

ಸಂಸ್ಕೃತದಲ್ಲಿಯೂ ವಾಕ್ಯಗಳನ್ನು ಜೋಡಿಸುವುದಕ್ಕಾಗಿ ಕ್ರಿಯಾರೂಪಗಳನ್ನು ಬಳಸಲು ಸಾಧ್ಯವಿದೆ. ಇದಕ್ಕಾಗಿ ಬಳಕೆಯಾಗುವ ಕ್ರಿಯಾರೂಪಗಳು ನಾಮಪದಗಳಿರಬಹುದು, ನಾಮಪದಗಳ ವಿಭಕ್ತಿ ರೂಪಗಳಿರಬಹುದು, ಇಲ್ಲವೇ ಈ ಕೆಲಸಕ್ಕಾಗಿಯೇ ಸಿದ್ಧವಾಗಿರುವ ವಿಶಿಷ್ಟ ಕ್ರಿಯಾರೂಪಗಳಿರಬಹುದು. ಆದರೆ, ಹಳೆಗನ್ನಡದಲ್ಲಿ ಕಾಣಿಸುವಂತಹ ಅಚ್ಚುಕಟ್ಟು ಸಂಸ್ಕೃತದ ಈ ಪದರೂಪಗಳ ಬಳಕೆಯಲ್ಲಿ ಕಾಣಿಸುವುದಿಲ್ಲ.

ಇದಕ್ಕೆ ಕಾರಣವೇನೆಂದರೆ, ವಾಕ್ಯಗಳ ಜೋಡಣೆಗಾಗಿ ಈ ರೀತಿ ಕ್ರಿಯಾಪದಗಳ ಜೋಡಿಸುವ ರೂಪವನ್ನು ಬಳಸುವ ವಿಧಾನ ಸಂಸ್ಕೃತಕ್ಕೆ ದ್ರಾವಿಡ ಭಾಷೆಗಳ ಪ್ರಭಾವದಿಂದಾಗಿ ಬಂದಿರಬೇಕು. ಅದು ಇಂಡೋ-ಯುರೋಪಿಯನ್ ಮೂಲಭಾಷೆಯಿಂದ ಆನುವಂಶಿಕವಾಗಿ ಆ ಭಾಷೆ ಪಡೆದಿರುವ ವಿಧಾನವಲ್ಲ.

### ೧೦.೩.೧ ಕೃದಂತಗಳ ಬಳಕೆ

ಸಂಸ್ಕೃತದಲ್ಲಿ ಜೋಡಿಸುವ ಕೆಲಸವನ್ನು ಕ್ರಿಯಾಪದಗಳಿಂದ ರಚಿತವಾದ ಕೃದಂತಗಳೇ ನಡೆಸಬಲ್ಲುವು; ಪದಕಂತೆಗಳ ತಯಾರಿಕೆಯಲ್ಲೂ ಇವನ್ನೇ ಬಳಸಲಾಗುತ್ತದೆಯಾದ ಕಾರಣ, ಈ ವಿಷಯದಲ್ಲಿ ಸಂಸ್ಕೃತ ಹಳೆಗನ್ನಡಕ್ಕಿಂತ ತೀರ ಭಿನ್ನವಾಗಿದೆ.

(೧೨ಕ) ಅಹಂ ದಕ್ಷಿಣಾರಣ್ಯೇ ಚರನ್ ಮೃಗಮೇಕಂ ಅಪಶ್ಯಂ
'ನಾನು ದಕ್ಷಿಣಾರಣ್ಯದಲ್ಲಿ ನಡೆಯುತ್ತಾ ಒಂದು ಮೃಗವನ್ನು ನೋಡಿದೆ'
(೧೨ಖ) ಉದ್ಯಾನೇ ಕ್ರೀಡಂತೀಂ ಬಾಲಾಂ ವೀರಃ ಅಪಶ್ಯತ್
'ಉದ್ಯಾನದಲ್ಲಿ ಆಡುವ ಹುಡುಗಿಯನ್ನು ವೀರನು ನೋಡಿದನು'

(೧೨ಕ)ದಲ್ಲಿ ಚರನ್ 'ನಡೆಯುತ್ತಾ' ಎಂಬ ಕೃದಂತವನ್ನು ಎರಡು ವಾಕ್ಯಗಳನ್ನು ಜೋಡಿಸುವ ಕೆಲಸದಲ್ಲಿ ಬಳಸಲಾಗಿದೆ; ಆದರೆ, (೧೨ಖ)ದಲ್ಲಿ ಅಂತಹದೇ ಕ್ರೀಡನ್ 'ಆಡುತ್ತಾ' ಎಂಬ ಇನ್ನೊಂದು ಕೃದಂತವನ್ನು (ಅದರ ದ್ವಿತೀಯಾ-ಏಕವಚನ (ಸ್ತ್ರೀಲಿಂಗ) ರೂಪದಲ್ಲಿ) ಬಾಲಾಂ ನಾಮಪದದೊಂದಿಗೆ ಸೇರಿಸಿ ಪದಕಂತೆಯೊಂದನ್ನು ತಯಾರಿಸುವಲ್ಲಿ ಬಳಸಲಾಗಿದೆ.

ಹಳೆಗನ್ನಡದಲ್ಲಿ ಇಂತಹ ಜೋಡಿಸುವ ಕ್ರಿಯಾರೂಪಗಳು (ನಡೆಯುತ್ತೆ, ಆಡುತ್ತೆ ಎಂಬಂತಹವುಗಳು) ಪದಕಂತೆಯ ಅಂಗವಾಗಿ ಬರಬಲ್ಲ ಕ್ರಿಯಾರೂಪಗಳಿಗಿಂತ (ನಡೆವ, ಆಡುವ ಎಂಬಂತಹವುಗಳಿಗಿಂತ) ತೀರ ಭಿನ್ನವಾಗಿವೆಯೆಂಬುದನ್ನು ಇಲ್ಲಿ ಗಮನಿಸಬಹುದು.

### ೧೦.೩.೨ ತ್ವಾ ಪ್ರತ್ಯಯದ ಬಳಕೆ

ಸಂಸ್ಕೃತದಲ್ಲಿ ವಾಕ್ಯಗಳನ್ನು ಜೋಡಿಸುವ ಕೆಲಸಕ್ಕಾಗಿ ಮಾತ್ರ ಬಳಕೆಯಾಗಬಲ್ಲ ಕ್ರಿಯಾರೂಪವೊಂದಿದೆ. ಇದನ್ನು ಕ್ರಿಯಾಪದಕ್ಕೆ ತ್ವಾ ಪ್ರತ್ಯಯವನ್ನು ಸೇರಿಸುವುದರ ಮೂಲಕ ತಯಾರಿಸಲಾಗುತ್ತದೆ (ಗತ್ವಾ 'ಹೋಗಿ' ಕೃತ್ವಾ 'ಮಾಡಿ', ಶ್ರುತ್ವಾ 'ಕೇಳಿ', ಪೀತ್ವಾ 'ಕುಡಿದು'). ಈ ಕ್ರಿಯಾರೂಪಕ್ಕೆ ಅದು ಸೂಚಿಸುವ ಘಟನೆ ಅದರ ಅನಂತರದ ವಾಕ್ಯ ಸೂಚಿಸುವ ಘಟನೆಗಿಂತ ಮೊದಲೇ ನಡೆದಿದೆ ಎಂಬ ಅರ್ಥವಿದೆ.

(೧೩ಕ) ಭಾಗಂ ತ್ಯಕ್ತ್ವಾ ಸ್ವಗೃಹಂ ಯಯೌ
'ಆಡನ್ನು ತ್ಯಜಿಸಿ (ಅವನು) ತನ್ನ ಮನೆಗೆ ಹೋದ'
(೧೩ಖ) ಭೋಜನಂ ಕೃತ್ವಾ ಗ್ರಾಮಃ ಗಂತವ್ಯಃ
'ಊಟ ಮಾಡಿ ಊರಿಗೆ ಹೋಗಬೇಕು'

ಕ್ರಿಯಾಪದದಲ್ಲಿ ಉಪಸರ್ಗವೊಂದು ಸೇರಿದೆಯಾದಲ್ಲಿ ಈ ಪ್ರತ್ಯಯಕ್ಕೆ ಯ ಎಂಬ ರೂಪವಿದೆ.

(೧೪ಕ) ನರಾಃ ಶಾಸ್ತ್ರಂ ಅಧೀತ್ಯ ಪಂಡಿತಾಃ ಭವಂತಿ
'ಮಾನವರು ಶಾಸ್ತ್ರಗಳನ್ನು ಓದಿ ಪಂಡಿತರಾಗುತ್ತಾರೆ'
(೧೪ಖ) ಶತ್ರೂನ್ ನಿಗೃಹ್ಯ ಅಹಂ ಆಗಮಿಷ್ಯಾಮಿ
'ನಾನು ಶತ್ರುಗಳನ್ನು ನಿಗ್ರಹಿಸಿ ಬರುತ್ತೇನೆ'

ಆದರೆ, ಈ ಕ್ರಿಯಾರೂಪ ಸಂಸ್ಕೃತಕ್ಕೆ ಅದರ ಮೂಲಭಾಷೆಯಾದ ಇಂಡೋ-ಯುರೋಪಿಯನ್‌ದಿಂದ ಬಂದುದಲ್ಲ. ಕಾವ್ಯಗಳ ಕಾಲದಲ್ಲಿ ಜಾಸ್ತಿ ಬಳಕೆಗೆ ಬಂದಿರುವ ಈ ಕ್ರಿಯಾರೂಪ ದ್ರಾವಿಡ ಭಾಷೆಗಳ ಸಂಸರ್ಗದಿಂದಾಗಿ ಸಿದ್ಧವಾದುದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ (ಬರೋ ೧೯೫೫ ನೋಡಿ).

ಸಂಸ್ಕೃತದಲ್ಲಿ ಈ ಕ್ರಿಯಾರೂಪವನ್ನು ಬಳಸಬೇಕಿದ್ದರೆ, ಅದರ ಮೂಲಕ ಜೋಡಿಸಲಾಗಿರುವ ಎರಡು ವಾಕ್ಯಗಳಲ್ಲೂ ಕರ್ತೃ ಒಂದೇ ಆಗಿರುವ ಅವಶ್ಯಕತೆಯಿದೆ. ಈ ರೀತಿ ಕರ್ತೃ ಒಂದೇ ಆಗಿಲ್ಲವಾದಲ್ಲಿ, ಈ ಕ್ರಿಯಾರೂಪವನ್ನು ಬಳಸುವ ಬದಲು 'ಸತಿ ಸಪ್ತಮಿ' ಎಂಬ ಬೇರೊಂದು ರಚನೆಯನ್ನು ಬಳಸಬೇಕಾಗುತ್ತದೆ (೧೦.೩.೪ ನೋಡಿ).

### ೧೦.೩.೩ ತುಂ ಪ್ರತ್ಯಯದ ಬಳಕೆ

ವಾಕ್ಯಗಳನ್ನು ಜೋಡಿಸುವ ಕೆಲಸದಲ್ಲಿ ಮಾತ್ರ ಬಳಕೆಯಾಗುವ ಇನ್ನೊಂದು ಕ್ರಿಯಾರೂಪವೂ ಸಂಸ್ಕೃತದಲ್ಲಿದೆ. ಕ್ರಿಯಾಪದಕ್ಕೆ ತುಂ ಪ್ರತ್ಯಯವನ್ನು ಸೇರಿಸು ವುದರ ಮೂಲಕ ಈ ಕ್ರಿಯಾರೂಪವನ್ನು ತಯಾರಿಸಲಾಗುತ್ತದೆ (ಗಂತುಂ 'ಹೋಗಲು', ಕರ್ತುಂ 'ಮಾಡಲು', ಅಧ್ಯೇತುಂ 'ಕಲಿಯಲು').

ಚಾರಿತ್ರಿಕವಾಗಿ ಈ ಕ್ರಿಯಾರೂಪ ವಿಭಕ್ತಿ ಪ್ರತ್ಯಯವಿರುವ ಒಂದು ನಾಮಪದವಾಗಿತ್ತು; ಇದರಲ್ಲಿ ಬರುವ ತುಂ ಪ್ರತ್ಯಯ ದ್ವಿತೀಯಾ ಪ್ರತ್ಯಯದ ಪಳೆಯಳಿಕೆಯಿರಬೇಕೆಂದು ವಿದ್ವಾಂಸರ ಊಹೆ. ವೇದ ಕಾಲದ ಸಂಸ್ಕೃತದಲ್ಲಿ ಬೇರೆ ವಿಭಕ್ತಿ ಪ್ರತ್ಯಯಗಳೂ ಈ ಕ್ರಿಯಾರೂಪದೊಂದಿಗೆ ಬರಬಲ್ಲುವಾಗಿದ್ದುವು (ಹಂತವೇ 'ಕೊಲ್ಲಲು (ಚತುರ್ಥೀ)', ಅವಪದಃ (ಪಂಚಮೀ), ಇತ್ಯಾದಿ.

### ೧೦.೩.೪ ಸತಿಸಪ್ತಮಿ

ಜೋಡಿಸಬೇಕಾಗಿರುವ ಎರಡು ವಾಕ್ಯಗಳಲ್ಲಿ ಒಂದರ ಕರ್ತೃಪದ ಇನ್ನೊಂದರ ಕರ್ತೃಪದಕ್ಕಿಂತ ಭಿನ್ನವಾಗಿದ್ದಲ್ಲಿ, ಮೇಲೆ ವಿವರಿಸಿದ ಕ್ರಿಯಾರೂಪಗಳನ್ನು ಬಳಸಲು ಸಾಧ್ಯವಾಗದು. ಹಾಗಾಗಿ, ಅಂತಹ ಸಂದರ್ಭಗಳಲ್ಲಿ 'ಸತಿಸಪ್ತಮಿ' ಎಂಬ ಹೆಸರಿನ ಬೇರೆಯೇ ಒಂದು ರಚನೆಯನ್ನು

ಬಳಸಬೇಕಾಗುತ್ತದೆ. ನಿಜಕ್ಕೂ ಇಲ್ಲಿ ಸಪ್ತಮೀ ವಿಭಕ್ತಿ ಮಾತ್ರವಲ್ಲದೆ ಷಷ್ಠೀ ವಿಭಕ್ತಿಯನ್ನೂ ಬಳಸಲು ಸಾಧ್ಯವಿದೆ.

ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ವಾಕ್ಯಗಳನ್ನು ಪರಿಶೀಲಿಸಬಹುದು:

(೧೫ಕ) ತಸ್ಮಿನ್ ರಾಜ್ಞಿ ಸತಿ ಕಃ ಭೂಮಿಂ ಜಯೇತ್
'ಅವನು ರಾಜನಾಗಿರುವಾಗ ಭೂಮಂಡಲವನ್ನು ಯಾರು ಗೆದ್ದಾರು?'

(೧೫ಖ) ತಸ್ಯ ಕೀರ್ತಿಮತೋ ರಾಜ್ಞೋ ಧರ್ಮಂ ವಿದಧಾನಸ್ಯಾಪಿ ಸರ್ವಾಃ ಪ್ರಜಾಃ ದುಃಖಿನ್ಯ ಏವಾಭವನ್
'ಕೀರ್ತಿವಂತನಾದ ಆ ರಾಜನು ಧರ್ಮವನ್ನು ಸ್ಥಾಪಿಸಿರುವಾಗಲೂ ಎಲ್ಲಾ ಪ್ರಜೆಗಳೂ ದುಃಖಿಗಳಾಗಿಯೇ ಇದ್ದರು'

(೧೫ಕ)ದಲ್ಲಿ ಮೊದಲನೆಯ ವಾಕ್ಯದ ಪದ (ಇಲ್ಲವೇ ಪದಕಂತೆ)ಗಳನ್ನೆಲ್ಲ ಸಪ್ತಮೀ ವಿಭಕ್ತಿಯಲ್ಲಿರಿಸಲಾಗಿದೆ, ಮತ್ತು (೧೫ಖ)ದಲ್ಲಿ ಷಷ್ಠೀ ವಿಭಕ್ತಿಯಲ್ಲಿರಿಸಲಾಗಿದೆ. ಸಾಮಾನ್ಯವಾಗಿ ತಿರಸ್ಕಾರವನ್ನು ಸೂಚಿಸಬೇಕಾಗಿರುವಲ್ಲಿ ಷಷ್ಠೀ ವಿಭಕ್ತಿಯನ್ನು ಬಳಸಲಾಗುತ್ತದೆ.

ಈ ರಚನೆಗಳು ಮೇಲೆ ವಿವರಿಸಿದ ರಚನೆಗಳಿಗಿಂತ ಹಲವು ವಿಷಯಗಳಲ್ಲಿ ಭಿನ್ನವಾಗಿವೆ ಎಂಬುದನ್ನು ಗಮನಿಸಬಹುದು. ಇಲ್ಲಿ ಬರುವ ಎರಡು ವಾಕ್ಯಗಳ ಕರ್ತೃಗಳು ಭಿನ್ನವಾಗಿರಬೇಕು ಮಾತ್ರವಲ್ಲ, ಅವುಗಳಲ್ಲಿ ಮೊದಲನೆಯ ವಾಕ್ಯವನ್ನು ಒಂದು ಪದಕಂತೆಯನ್ನಾಗಿಯೂ ಬದಲಾಯಿಸಬೇಕಾಗುತ್ತದೆ. ಅದರ ಅಂಗಗಳಾಗಿ ಬರುವ ಪದ ಇಲ್ಲವೇ ಪದಕಂತೆಗಳೆಲ್ಲ ಒಂದೇ ವಿಭಕ್ತಿಯಲ್ಲಿರಬೇಕೆಂಬ ನಿಯಮಕ್ಕೆ ಇದೇ ಕಾರಣ.

### ೧೦.೩.೫ ಷರತ್ತನ್ನು ಸೂಚಿಸುವುದು

ಸಂಸ್ಕೃತದಲ್ಲಿ ಷರತ್ತನ್ನು ಸೂಚಿಸುವುದಕ್ಕಾಗಿ ಹಳೆಗನ್ನಡದಲ್ಲಿರುವುದಕ್ಕಿಂತ ತೀರ ಭಿನ್ನವಾದ ವ್ಯಾಕರಣತತ್ವವನ್ನು ಅನುಸರಿಸಲಾಗುತ್ತದೆ, ಮತ್ತು ಇದರಿಂದಾಗಿ, ಹಳೆಗನ್ನಡದಲ್ಲಿ ಕಾಣಿಸುವ ಸಾಧ್ಯತೆಗಳಿಗಿಂತ ಸಂಸ್ಕೃತದಲ್ಲಿ ಕಾಣಿಸುವ ಸಾಧ್ಯತೆಗಳು ತೀರ ಭಿನ್ನವಾಗಿವೆ. ಸಂಸ್ಕೃತದಲ್ಲಿ ಮುಖ್ಯವಾಗಿ ಎರಡು ವಿಧಾನಗಳ ಮೂಲಕ ಷರತ್ತನ್ನು ಸೂಚಿಸಲು ಸಾಧ್ಯವಿದೆ:

ವಾಕ್ಯವನ್ನು ಅದರ ಸಂಬಂಧಿಸುವ ರೂಪಕ್ಕೆ ಬದಲಾಯಿಸುವುದು ಒಂದು ವಿಧಾನ, ಮತ್ತು ಆ ವಾಕ್ಯದಲ್ಲಿ ಚೇತ್ ಪದವನ್ನು, ಇಲ್ಲವೇ ಯದಿ ಸರ್ವನಾಮವನ್ನು ಬಳಸುವುದು ಇನ್ನೊಂದು ವಿಧಾನ.

(೧೬ಕ) ಯದಿ ಅಹಂ ತಸ್ಕರೋಸ್ಮಿ, ಬಧ್ನೀತ ಮಾಂ
'ನಾನು ಕಳ್ಳನಾದರೆ, ನನ್ನನ್ನು ಬಂಧಿಸಿ'

(೧೬ಖ) ವೇತ್ತಿ ಚೇತ್ ಭವಾನ್ ವಕ್ತು
'(ನಿಮಗೆ) ಗೊತ್ತಿದೆಯಾದರೆ ಹೇಳಿ'

(೧೬ಗ) ಯದಿ ಸ ಮಯಾ ದೃಷ್ಟೋ ಅಭವಿಷ್ಯತ್ ತತೋ ಅಭೋಕ್ಷ್ಯತ
'ನಾನು ಅವನನ್ನು ಕಂಡಿದ್ದರೆ ನುಂಗಿಬಿಡುತ್ತಿದ್ದೆ'

ಆದರೆ, ಹಳೆಗನ್ನಡದ ಹಾಗೆ (೧೦.೨.೩ ನೋಡಿ) ಇಲ್ಲಿ ವಿಶಿಷ್ಟವಾದ ಕ್ರಿಯಾರೂಪಗಳ ಬಳಕೆಯಿಲ್ಲ ಎಂಬುದನ್ನು ಗಮನಿಸಬಹುದು.

## ೧೦.೪ ಹಳೆಗನ್ನಡ ವೈಯಾಕರಣಿಗಳ ಸಮಸ್ಯೆಗಳು

ಜೋಡಿಸುವ ಕ್ರಿಯಾರೂಪಗಳನ್ನು ವಿವರಿಸುವಲ್ಲಿ ಹಳೆಗನ್ನಡ ವೈಯಾಕರಣಿಗಳಿಗೆ ಅವುಗಳ ಹಿಂದಿರುವ ವ್ಯವಸ್ಥೆಯನ್ನು ಮತ್ತು ವ್ಯಾಕರಣ ತತ್ವಗಳನ್ನು ಸರಿಯಾಗಿ ಗ್ರಹಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ. ಮೇಲೆ (೧೦.೩(೧–೫))ರಲ್ಲಿ ವಿವರಿಸಿದ ಹಾಗೆ, ಸಂಸ್ಕೃತದಲ್ಲಿ ಬಳಕೆಯಾಗುವ ಜೋಡಿಸುವ ಕ್ರಿಯಾರೂಪಗಳ ಹಿಂದೆ ಹಳೆಗನ್ನಡದಲ್ಲಿರುವಂತಹ ವ್ಯವಸ್ಥೆ ಇಲ್ಲವೇ ಅಚ್ಚುಕಟ್ಟು ಇಲ್ಲದಿರುವುದೇ ಇದಕ್ಕೆ ಕಾರಣವಿರಬಹುದು.

(೧) ನೆಚ್ಚಿ, ಮೆಚ್ಚಿ, ನೆನೆದು ಮೊದಲಾದ ಕ್ರಿಯಾರೂಪಗಳು ಪೂರ್ವ (ಭೂತ)ಕಾಲದ ಕ್ರಿಯೆಯನ್ನೂ, ಕೆತ್ತುತ್ತೆ, ಪರಸುತ್ತೆ, ಎನುತೆ ಮೊದಲಾದವುಗಳು ವರ್ತಮಾನ ಕಾಲದ ಕ್ರಿಯೆಯನ್ನೂ ಸೂಚಿಸುತ್ತವೆಯೆಂದು ಕೇಶಿರಾಜನು (ಸೂ. ೨೪೯) ಹೇಳಿದ್ದಾನೆ.

ಆದರೆ, ಮೇಲೆ (೧೦.೨.೧)ರಲ್ಲಿ ಸೂಚಿಸಿದ ಹಾಗೆ, ನಿಜಕ್ಕೂ ಇವು ನೆಚ್ಚಿದಂ, ಮೆಚ್ಚಿದಂ ಮೊದಲಾದ ಭೂತಕಾಲದ ಕ್ರಿಯಾರೂಪಗಳಿಂದ ಮತ್ತು ನೆಚ್ಚಿದಪಂ, ಮೆಚ್ಚಿದಪಂ (ಇಲ್ಲವೇ ಮೆಚ್ಚುವಂ, ನೆಚ್ಚುವಂ) ಮೊದಲಾದ ವರ್ತಮಾನ ಕಾಲದ ಕ್ರಿಯಾರೂಪಗಳಿಂದ ಸಮಯ ಸೂಚನೆಯಲ್ಲಿ ತೀರ ಭಿನ್ನವಾಗಿವೆ.

ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯಗಳನ್ನು ಪರಿಶೀಲಿಸಬಹುದು:

(೧೬ಕ) ಅಂತು ದ್ರೋಣಾಚಾರ್ಯನ್ ಪಾಂಡವ ಕೌರವರ್ಗೆ ಉಪದೇಶಂ ಗೆಯ್ಯುತ್ತುಂ ಇರೆಯಿರೆ ನಾನಾದೇಶ ನರೇಂದ್ರರುಂ ಧನುರ್ವೇದಮನೆ ಕಲಲ್ ಬಂದಾಳಾದರ್ (೨.೫೫–೬)
'ಹಾಗೆ ದ್ರೋಣಾಚಾರ್ಯನು ಪಾಂಡವ ಕೌರವರುಗಳಿಗೆ ಉಪದೇಶ ಮಾಡುತ್ತಿರುವಾಗ, ಬೇರೆ ಬೇರೆ ದೇಶದ ರಾಜರೂ ಧನುರ್ವಿದ್ಯೆಯನ್ನು ಕಲಿಯಲು ಬಂದು ಆತನ ಶಿಶ್ಯರಾದರು'

(೧೬ಖ) ನೀಮೆನ್ನ ಕಾಳೆಗಮಂ ಪೆಱಗಿರ್ದು ನೋಡಿಂ (೩.೬೯ವ)
'ನೀವು ನನ್ನ ಯುದ್ಧವನ್ನು ಹೊರಗೆ ಇದ್ದು ನೋಡಿ'

(೧೬ಕ)ದಲ್ಲಿ ಗೆಯ್ಯುತ್ತುಂ ಎಂಬುದರಲ್ಲಿ ವರ್ತಮಾನ ಕಾಲದ ಉತ್ತೆ ಪ್ರತ್ಯಯ ಬಂದಿದೆಯಾದರೂ ಅದು ನಿಜಕ್ಕೂ 'ಭೂತ'ಕಾಲದಲ್ಲಿ (ಎಂದರೆ ಆ ವಾಕ್ಯವನ್ನು ಆಡಿರುವ (ಇಲ್ಲವೇ ಬರೆದಿರುವ) ಸಮಯಕ್ಕಿಂತ ಮೊದಲು) ನಡೆದಿರುವ ಘಟನೆಯೊಂದನ್ನು ಸೂಚಿಸುತ್ತದೆಯಲ್ಲದೆ 'ವರ್ತಮಾನ' ಕಾಲದಲ್ಲಿ ನಡೆಯುವ ಘಟನೆಯನ್ನು ಸೂಚಿಸುವುದಿಲ್ಲ. ಈ ಘಟನೆ ಅದರ ಅನಂತರ ಬಂದಿರುವ ಇರ್ದು ಕ್ರಿಯಾಪದ ಸೂಚಿಸುವ ಘಟನೆಯ ಸಮಯದಲ್ಲೇನೇ ನಡೆಯುತ್ತಿತ್ತು ಎಂಬುದನ್ನು ಆ ಜೋಡಿಸುವ ಕ್ರಿಯಾರೂಪದಲ್ಲಿರುವ ಉತ್ತೆ (+ಉಂ) ಪ್ರತ್ಯಯ ಸೂಚಿಸುತ್ತದೆ. ಎಂದರೆ, ಇಲ್ಲಿ ಉತ್ತೆ ಪ್ರತ್ಯಯಕ್ಕೆ 'ಒಂದೇ ಸಮಯ' ಎಂಬ ಅರ್ಥವಿದೆಯಲ್ಲದೆ ವರ್ತಮಾನಾರ್ಥವಿಲ್ಲ.

ಇದೇ ರೀತಿಯಲ್ಲಿ, (೧೭ಖ)ದಲ್ಲಿ ಬಂದಿರುವ ಪೆಜಗಿರ್ದು ಎಂಬುದರಲ್ಲಿ ಭೂತಕಾಲದ ದ ಪ್ರತ್ಯಯ ಬಂದಿದೆಯಾದರೂ, ಅದು ಭವಿಷ್ಯತ್ ಕಾಲದಲ್ಲಿ ನಡೆಯಬೇಕಾಗಿರುವ ಒಂದು ಘಟನೆಯನ್ನು ಸೂಚಿಸುತ್ತದೆಯಲ್ಲದೆ ಭೂತಕಾಲದಲ್ಲಿ ನಡೆದಿರುವ ಘಟನೆಯನ್ನು ಸೂಚಿಸುವುದಿಲ್ಲ. ಆ ವಾಕ್ಯವನ್ನು ಅರ್ಜುನನು ಹೇಳಿರುವ ಸಮಯದಲ್ಲಿ ಈ 'ಹೊರಗಿರುವ' ಘಟನೆಯಿನ್ನೂ ನಡೆದಿಲ್ಲ. 'ನೋಡುವ' ಘಟನೆಗಿಂತ ಮೊದಲು 'ಹೊರಗಿರುವ' ಘಟನೆ ನಡೆಯಬೇಕು ಎಂಬುದಾಗಿ ಇಲ್ಲಿ ದ್(+ಉ) ಪ್ರತ್ಯಯಕ್ಕೆ 'ಮೊದಲಿನ ಸಮಯ'ದ ಅರ್ಥವಿದೆಯಲ್ಲದೆ 'ಭೂತ' ಕಾಲದ (ಹಿಂದಿನ ಸಮಯದ) ಅರ್ಥವಿಲ್ಲ.

ಇಂತಹ ಬಳಕೆಗಳನ್ನು ವಿವರಿಸುವುದಕ್ಕಾಗಿ ಹಳೆಗನ್ನಡದಲ್ಲಿ ಎರಡು ರೀತಿಯ ಸಮಯಭೇದಗಳನ್ನು ಸೂಚಿಸುವ ಪ್ರತ್ಯಯಗಳಿವೆಯೆಂದು ಹೇಳಬೇಕಾಗುತ್ತದೆ. ಕ್ರಿಯಾರೂಪಗಳಲ್ಲಿ ಅವು ಬಂದಿರುವ ವಾಕ್ಯವನ್ನು ಆಡಿರುವ ಸಮಯಕ್ಕೂ ಅವು ತಿಳಿಸುವ ಘಟನೆಯ ಸಮಯಕ್ಕೂ ನಡುವೆ ಎಂತಹ ಸಂಬಂಧವಿದೆ ಎಂಬುದನ್ನು ತಿಳಿಸಬೇಕಾಗುತ್ತದೆ, ಮತ್ತು ಇದಕ್ಕಾಗಿ ಹಿಂದಿನ ಸಮಯ (ಭೂತಕಾಲ), ಮುಂದಿನ ಸಮಯ (ಭವಿಷ್ಯತ್ ಕಾಲ) ಮತ್ತು ಈಗಿನ ಸಮಯ (ವರ್ತಮಾನ ಕಾಲ) ಎಂಬ ಪಾರಿಭಾಷಿಕ ಪದಗಳನ್ನು ಬಳಸುವ ಅವಶ್ಯಕತೆಯಿದೆ.

ಆದರೆ, ಜೋಡಿಸುವ ಕ್ರಿಯಾರೂಪಗಳನ್ನು ಬಳಸುವ ಸಂದರ್ಭಗಳಲ್ಲಿ ಇದಕ್ಕಿಂತ ತೀರ ಭಿನ್ನವಾದ ಸಮಯಭೇದಗಳನ್ನು ಸೂಚಿಸಬೇಕಾಗುತ್ತದೆ. ಅಂತಹ ಕಡೆಗಳಲ್ಲಿ ಎರಡು (ಅಥವಾ ಜಾಸ್ತಿ) ಕ್ರಿಯಾಪದಗಳು ಬಳಕೆಯಾಗುತ್ತಿದ್ದು, ಅವು ಸೂಚಿಸುವ ಘಟನೆಗಳ ನಡುವೆ ಸಮಯದ ಮಟ್ಟಿಗೆ ಎಂತಹ ಸಂಬಂಧವಿದೆ (ಅವುಗಳಲ್ಲಿ ಒಂದು ಇನ್ನೊಂದರ 'ಮೊದಲು' ನಡೆದಿದೆಯೇ, 'ಅನಂತರ' ನಡೆದಿದೆಯೇ ಅಥವಾ ಎರಡೂ 'ಒಂದೇ ಸಮಯ'ದಲ್ಲಿ ನಡೆದಿವೆಯೇ) ಎಂಬುದನ್ನು ತಿಳಿಸಬೇಕಾಗುತ್ತದೆ.

ಈ ಮೂರು ರೀತಿಯ ಸಮಯಗಳೂ ಮಾತಿನ ಸಮಯಕ್ಕಿಂತ ಹಿಂದೆ ನಡೆದಿರಬಹುದು, ಇಲ್ಲವೇ ಅನಂತರ ನಡೆಯುವಂತಹವಿರಬಹುದು. ಹಾಗಾಗಿ, ಇವು ಮೂರೂ ಹಿಂದಿನ (ಭೂತ) ಇಲ್ಲವೇ ಮುಂದಿನ (ಭವಿಷ್ಯತ್) ಕಾಲದವಾಗಿರಲು ಸಾಧ್ಯವಿದೆ. ಈ ವ್ಯತ್ಯಾಸವನ್ನು ಜೋಡಿಸುವ ಕ್ರಿಯಾರೂಪಗಳನ್ನು ಬಳಸಿರುವ ವಾಕ್ಯಗಳ ಕೊನೆಯಲ್ಲಿ ಬರುವ ಕ್ರಿಯಾರೂಪಗಳು ತಿಳಿಸುತ್ತವಲ್ಲದೆ, ಜೋಡಿಸುವ ಕ್ರಿಯಾರೂಪಗಳು ತಿಳಿಸುವುದಿಲ್ಲ.

ಈ ಕಾರಣಕ್ಕಾಗಿ, ಜೋಡಿಸುವ ಕ್ರಿಯಾರೂಪಗಳಲ್ಲಿ ಕಂಡುಬರುವ ಸಮಯ ಸಂಬಂಧವನ್ನು ಸೂಚಿಸುವುದಕ್ಕಾಗಿ ಮೊದಲಿನ ಸಮಯ, ಅನಂತರದ ಸಮಯ ಮತ್ತು ಒಂದೇ ಸಮಯ ಎಂಬುದಾಗಿ ಬೇರೆಯೇ ಪಾರಿಭಾಷಿಕ ಪದಗಳನ್ನು ಬಳಸುವ ಅವಶ್ಯಕತೆಯಿದೆ (ವಿವರಗಳಿಗೆ ೯.೨.೩ ನೋಡಿ).

(೨) ಮಾಡೆ, ನೋಡೆ, ಪೂಜಿಮಡೆ ಮೊದಲಾದವುಗಳ ಬಳಕೆಯನ್ನು 'ಸತಿಸಪ್ತಮಿ'ಯೆಂದು ಕರೆಯಲಾಗಿದೆ (ಕೇಶಿರಾಜ ಸೂ. ೨೬೦). ಆದರೆ ಬೇರೆ ಹಲವು ವಿದ್ವಾಂಸರು ಸೂಚಿಸಿರುವ ಹಾಗೆ, ಹಳೆಗನ್ನಡದ ಈ ರಚನೆ ಸಂಸ್ಕೃತದ ಸತಿಸಪ್ತಮಿಗಿಂತ ತೀರ ಭಿನ್ನವಾಗಿದೆ (೧೦.೩.೪ ನೋಡಿ). ಕರ್ತೃಪದ ಭಿನ್ನವಾಗಿರಬಹುದೆಂಬ ಒಂದು ವಿಷಯದಲ್ಲಿ ಮಾತ್ರ ಇವೆರಡರೊಳಗೆ ಸಮಾನತೆಯಿದೆ.

ಆದರೆ, ಇಲ್ಲೂ ಕರ್ತೃಪದ ಎಂಬುದಕ್ಕಿಂತಲೂ ಮಾಡುಗ (ಸ್ವೇಚ್ಛೆಯಿಂದ ಘಟನೆಯಲ್ಲಿ ತೊಡಗಿಕೊಂಡಿರುವವನು) ಎಂಬುದೇ ಹಳೆಗನ್ನಡದ ಮಟ್ಟಿಗೆ ಯೋಗ್ಯವಾಗಿರುವ ಕಲ್ಪನೆ.

(೩) ಕರ್ತೃಪದ ಭಿನ್ನವಾಗಿರುವಲ್ಲಿ ಅಲ್ ಪ್ರತ್ಯಯವನ್ನು ಬಳಸಬಾರದು, ಅಲೊಡಂ ಎಂಬುದನ್ನು ಬಳಸಬೇಕು ಎಂಬುದಾಗಿ ಕೇಶಿರಾಜ (ಸೂ. ೨೬೦) ಹೇಳಿದ್ದಾನೆ. ಅಲ್ ಪ್ರತ್ಯಯ ಸೇರಿರುವ ಕ್ರಿಯಾರೂಪಕ್ಕೆ 'ಅನಂತರದ' ಘಟನೆಯನ್ನು ಮಾತ್ರವಲ್ಲದೆ, 'ಮೊದಲಿನ' ಘಟನೆಯನ್ನು ಸೂಚಿಸುವ ಅರ್ಥವೂ ಇದೆಯೆಂಬುದನ್ನು (ಎಂದರೆ ಹಳೆಗನ್ನಡದಲ್ಲಿ ಅಲ್ ರೂಪದ ಎರಡು ಬೇರೆ ಬೇರೆ ಪ್ರತ್ಯಯಗಳಿವೆಯೆಂಬುದನ್ನು) ಆತನು ಗಮನಿಸದಿರುವುದೇ ಆತ ಹೀಗೆ ಹೇಳಲು ಕಾರಣವಿರಬೇಕು.

ಯಾಕೆಂದರೆ, 'ಮೊದಲಿನ' ಘಟನೆಯನ್ನು ಸೂಚಿಸುವಲ್ಲಿ ಈ ಕ್ರಿಯಾರೂಪಕ್ಕೆ ಮೇಲಿನ ನಿರ್ಬಂಧವಿಲ್ಲವೆಂಬುದು ಹಲವು ಕವಿಗಳ ಪ್ರಯೋಗಗಳಿಂದ ಸ್ಪಷ್ಟವಾಗುತ್ತದೆ (೧೦.೨.೪ ನೋಡಿ). ಅಲೊಡಂ ಎಂಬುದರಲ್ಲಿ ಈ ಪ್ರತ್ಯಯದ ಮುಂದೆ ಒಡಂ 'ಒಡನೆಯೇ' ಪದ ಬಂದಿದ್ದು, ಇದರಿಂದಾಗಿ ಅದಕ್ಕೆ 'ಮೊದಲಿನ' ಘಟನೆಯನ್ನು ಸೂಚಿಸುವ ಅರ್ಥ ಬರಬಲ್ಲುದಲ್ಲದೆ, 'ಅನಂತರ'ದ ಘಟನೆಯನ್ನು ಸೂಚಿಸುವ ಅರ್ಥ ಬರಲಾರದು. ಒಡಂ ಎಂಬುದು ಈ ಪ್ರತ್ಯಯಕ್ಕಿರುವ ಮೇಲಿನ ಎರಡು ಅರ್ಥಗಳನ್ನು ಪ್ರತ್ಯೇಕಿಸಿ, ಅವುಗಳಲ್ಲಿ ಒಂದು ಮಾತ್ರ ಸೂಚಿತವಾಗುವಂತೆ ಮಾಡುತ್ತದೆ.

ಕೇಶಿರಾಜನು ಅಲೊಡಂ ಎಂಬುದರಲ್ಲೂ ಅಲ್ ಇದೆ ಎಂಬುದನ್ನು ಗಮನಿಸಿ, ಅಲ್ ಪ್ರತ್ಯಯದ ಬಳಕೆಯಲ್ಲಿ ಅರ್ಥದ ಮಟ್ಟಿಗೆ ಸಂಶಯ ಹುಟ್ಟುವ ಸಂದರ್ಭಗಳಲ್ಲಿ ಮಾತ್ರ ಅದರೊಂದಿಗೆ ಒಡಂ ಎಂಬುದನ್ನು ಸೇರಿಸಿ ಬಳಸಬೇಕು ಎಂದು ಹೇಳಿರಬೇಕಿತ್ತಲ್ಲದೆ, ಹಾಗೆ ಒಡಂ ಎಂಬುದನ್ನು ಸೇರಿಸದೆ ಕೆಲವರು ಬಳಸಿರುವುದು 'ಅಬದ್ಧ' ಎಂದು ಹೇಳುವ ಅವಶ್ಯಕತೆಯಿರಲಿಲ್ಲ.

ವೆಂಕಟಾಚಲ ಶಾಸ್ತ್ರಿಗಳು (೧೯೯೪:೧೨೧) ಹೇಳಿರುವ ಹಾಗೆ, ಆತನು ಈ ರೀತಿ ಹೇಳಿರುವುದು ಆತನ ಧೈರ್ಯ ಮತ್ತು ವಿಚಿಕಿತ್ಸಕ ಬುದ್ಧಿಗಳನ್ನು ತೋರಿಸುವುದಿಲ್ಲ; ಅದಕ್ಕೆ ಬದಲು, ಆತನ ಭಂಡ ಧೈರ್ಯ ಮತ್ತು ಅಜ್ಞಾನಗಳನ್ನು ತೋರಿಸುತ್ತದೆ.

(೪) ಪಕ್ಷಾರ್ಥವನ್ನು (ಷರತ್ತನ್ನು) ಸೂಚಿಸುವ ಒಡೆ ಪ್ರತ್ಯಯ ಧಾತುವಿನ ಕೊನೆಯಲ್ಲಿ ಬರುವುದೆಂದು ಕೇಶಿರಾಜನು ಹೇಳಿರುತ್ತಾನೆ (ಸೂ. ೨೬೧ ನೋಡಿ). ಇದು ಕಾಲತ್ರಯದಲ್ಲೂ ಬರಬಲ್ಲುದೆಂಬುದಕ್ಕೆ ಪ್ರಯೋಗಗಳನ್ನು ಮಾತ್ರ (ಪುಸಿದೊಡೆ ಬಿಟ್ಟಂ, ಪಟಂಚಿದಪೊಡೆ ಕೊಂದಪಂ, ಚಿತ್ರಿಪೊಡೆ ತೂಳಿಕೆಯಂ ತರಿಸುವಂ) ಕೊಡುತ್ತಾನೆ.

ಭಟ್ಟಾಕಳಂಕನು ಈ ಪ್ರತ್ಯಯಕ್ಕೆ ದೊಡೆ ಮತ್ತು ವೊಡೆ ರೂಪಗಳಿವೆ ಎಂದು ಹೇಳಿ, ಇವು ಭೂತ ಮತ್ತು ವರ್ತಮಾನ ಕಾಲದ ಕ್ರಿಯೆಗಳನ್ನು ಜ್ಞಾಪಿಸುವುದಕ್ಕಾಗಿ ಬರುತ್ತವೆಯೆಂದು ಹೇಳಿದ್ದಾನೆ (ಸೂ. ೫೮೯-೯೦).

ಆದರೆ, ನಿಜಕ್ಕೂ ಇವು ಭೂತ ಮತ್ತು ವರ್ತಮಾನ (ಇಲ್ಲವೇ ಭವಿಷ್ಯತ್) ಕಾಲಗಳನ್ನು ಸೂಚಿಸುವುದಕ್ಕಾಗಿ ಬಳಕೆಯಾಗುವ ಬದಲು, ಎರಡು ಘಟನೆಗಳ ನಡುವಿರುವ ಸಮಯ ಸಂಬಂಧಗಳನ್ನು ಸೂಚಿಸುವುದಕ್ಕಾಗಿ ಬಳಕೆಯಾಗುತ್ತವೆ ಎಂಬುದನ್ನು ನಾವು ಮೇಲೆ (೧೦.೨.೩)ರಲ್ಲಿ ನೋಡಿರುವೆವು.

ಇದಲ್ಲದೆ, ಹಳೆಗನ್ನಡದಲ್ಲಿ ಈ ಪ್ರತ್ಯಯಗಳನ್ನು ಕ್ರಿಯಾಪದಗಳ ಕೃದಂತ (ಸಂಬಂಧಿಸುವ) ರೂಪಕ್ಕೆ ಸೇರಿಸಲಾಗುತ್ತದಲ್ಲದೆ, ಧಾತುವಿಗೆ ಇಲ್ಲವೇ ಧಾತುವಿನ ಭೂತ ಮತ್ತು ಭವಿಷ್ಯತ್ ರೂಪಗಳಿಗಲ್ಲ. ಅಲ್ಲಿಗಳೆಯುವ ಷರತ್ತಿನ ರೂಪಗಳನ್ನು ಪರಿಶೀಲಿಸಿದಾಗ ಈ ವಿಷಯ ಸ್ಪಷ್ಟವಾಗುತ್ತದೆ.

ಉದಾಹರಣೆಗಾಗಿ, ಪೇೞ್ ಕ್ರಿಯಾಪದಕ್ಕೆ ಪೇೞಿನ್, ಪೇೞಿರ್, ಪೇೞಿರ್ ಮೊದಲಾದ

ಅಲ್ಲಗಳೆಯುವ ರೂಪಗಳಿವೆ, ಮತ್ತು ಪೇಟಿದ ಎಂಬ ಅಲ್ಲಗಳೆಯುವ ಕೃದಂತ ರೂಪವಿದೆ. ಇವುಗಳಲ್ಲಿ ಅಲ್ಲಗಳೆಯುವ ರೂಪಗಳಿಂದ ಘಟಕವನ್ನು ಸೂಚಿಸುವ ಆಖ್ಯಾತ ಪ್ರತ್ಯಯವನ್ನು ಕಳೆದಾಗ ಉಳಿಯುವುದು ಪೇಟಿ (ಇಲ್ಲವೇ ಪೇಟಿಲ್) ಎಂಬುದು.

ಆದರೆ, ಪೇಟಿದೊಡೆ ಎಂಬ ಪಕ್ಷಾರ್ಥದ ರೂಪವನ್ನು ಈ ಪೇಟಿ ಎಂಬುದರಿಂದ ಸಾಧಿಸಲು ಸಾಧ್ಯವಾಗದು. ಪೇಟಿದ ಎಂಬ ಕೃದಂತ ರೂಪದಿಂದಲೇನೇ ಅದನ್ನು ಸಾಧಿಸಬೇಕಾಗುತ್ತದೆ.

ಒಡೆ ಪ್ರತ್ಯಯ ಹಿಂದಿನ ಮತ್ತು ಮುಂದಿನ ಸಮಯದ ಸಂಬಂಧಿಸುವ ರೂಪಗಳೊಂದಿಗೆ ಮಾತ್ರವಲ್ಲದೆ, ಅಲ್ಲಗಳೆಯುವ ಸಂಬಂಧಿಸುವ ರೂಪದೊಂದಿಗೂ ಬರಬಲ್ಲುದು ಎಂಬುದನ್ನು ಹಳೆಗನ್ನಡದ ಪ್ರಾಚೀನ ವೈಯ್ಯಾಕರಣಿಗಳು ಗಮನಿಸದಿದ್ದುದೇ ಈ ರೀತಿ ಕ್ರಿಯಾಪದಗಳ ಸಂಬಂಧಿಸುವ ರೂಪದಿಂದ (ಎಂದರೆ ಕೃದಂತದಿಂದ) ಈ ರೂಪಗಳನ್ನು ಸಾಧಿಸಬೇಕಾಗುತ್ತದೆ ಎಂಬುದನ್ನು ಅವರು ಗಮನಿಸದಿರಲು ಕಾರಣವಿರಬಹುದು.

## ೧೦.೫ ಸಾರಾಂಶ

ಎರಡು ವಾಕ್ಯಗಳನ್ನು ಜೋಡಿಸುವುದಕ್ಕಾಗಿ ಹಳೆಗನ್ನಡದಲ್ಲಿ ಜೋಡಿಸುವ ಕ್ರಿಯಾರೂಪಗಳ ಬಳಕೆಯಾಗುತ್ತದೆ. ಸಂಸ್ಕೃತದಲ್ಲೂ ಇಂತಹ ಕ್ರಿಯಾರೂಪಗಳ ಬಳಕೆಯಾಗುತ್ತದೆಯಾದರೂ ಹಳೆಗನ್ನಡದಲ್ಲಿ ಕಾಣಿಸುವಂತಹ ವ್ಯವಸ್ಥೆ ಇಲ್ಲವೇ ಅಚ್ಚುಕಟ್ಟು ಸಂಸ್ಕೃತದ ಕ್ರಿಯಾರೂಪಗಳ ಬಳಕೆಯಲ್ಲಿ ಕಾಣಿಸುವುದಿಲ್ಲ.

ಸಂಸ್ಕೃತ ತನ್ನಲ್ಲಿಲ್ಲದ ಈ ವ್ಯವಸ್ಥೆಯನ್ನು ದ್ರಾವಿಡ ಭಾಷೆಗಳ ಸಂಪರ್ಕವಾದನಂತರ ತನ್ನಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿರುವುದೇ ಈ ರೀತಿ ಆ ಭಾಷೆಯಲ್ಲಿ ಹಳೆಗನ್ನಡದ ಜೋಡಿಸುವ ಕ್ರಿಯಾರೂಪಗಳ ಬಳಕೆಯಲ್ಲಿ ಕಾಣಿಸುವಂತಹ ಅಚ್ಚುಕಟ್ಟು ಕಾಣಿಸದಿರುವುದಕ್ಕೆ ಕಾರಣವಿರಬೇಕು.

ಸಂಸ್ಕೃತ ವೈಯಾಕರಣಿಗಳು ಆ ಭಾಷೆಯ ಕುರಿತಾಗಿ ಹೇಳಿರುವುದನ್ನು ಹಾಗೆಯೇ ಹಳೆಗನ್ನಡಕ್ಕೆ ಅಳವಡಿಸಲು ಪ್ರಯತ್ನಿಸಿದುದರಿಂದಾಗಿ, ಅದರ ವೈಯಾಕರಣಿಗಳಿಗೆ ಹಳೆಗನ್ನಡದ ಈ ಅತ್ಯುತ್ತಮವಾದ ವ್ಯವಸ್ಥೆಯನ್ನು ವಿವರಿಸಲು ಸಾಧ್ಯವಾಗಿಲ್ಲ.

## ಅಧ್ಯಾಯ ಹನ್ನೊಂದು

# ವಿಷಯವಾಕ್ಯಗಳು

### ೧೧.೧ ಪೀಠಿಕೆ

ಹಳೆಗನ್ನಡದಲ್ಲಿ ಮುಖ್ಯವಾಗಿ ಎರಡು ರೀತಿಯ ವಾಕ್ಯಗಳು ಬಳಕೆಯಲ್ಲಿವೆ. ಇವನ್ನು 'ಕ್ರಿಯಾವಾಕ್ಯ' ಮತ್ತು 'ವಿಷಯವಾಕ್ಯ' ಎಂದು ಕರೆಯಬಹುದು. ಇವುಗಳಲ್ಲಿ ಕ್ರಿಯಾವಾಕ್ಯಗಳು ಒಂದು ಘಟನೆಯನ್ನೂ, ವಿಷಯವಾಕ್ಯಗಳು ಒಂದು ವಿಷಯ ಇಲ್ಲವೇ ಸಂಗತಿಯನ್ನೂ ತಿಳಿಸುತ್ತವೆ.

(೧ಕ) ನೀಂ ಈಗಳ್ ಪೇೞಿಂ
'ನೀವು ಈಗ ಹೇಳಿ'

(೧ಖ) ನೀಂ ಆದಿತ್ಯನನಳಿಪ ತೇಜರಿರ್
'ನೀವು ಸೂರ್ಯನನ್ನು ತಿರಸ್ಕರಿಸುವ ತೇಜಸ್ಸುಳ್ಳವರು'

(೧ಕ) ವಾಕ್ಯ ಕೇಳುಗ ಏನು ಮಾಡಬೇಕು ಎಂಬುದಾಗಿ ಆತನು ನಡೆಸಬೇಕಾಗಿರುವ ಒಂದು ಘಟನೆಯನ್ನು ಸೂಚಿಸುವುದಾದ ಕಾರಣ, ಕ್ರಿಯಾವಾಕ್ಯ, ಮತ್ತು (೧ಖ) ವಾಕ್ಯ ಕೇಳುಗ ಎಂತಹವನು ('ಸೂರ್ಯನನ್ನು ತಿರಸ್ಕರಿಸುವ ತೇಜಸ್ಸುಳ್ಳವನು') ಎಂಬುದಾಗಿ ಒಂದು ಸಂಗತಿಯನ್ನು ಸೂಚಿಸುತ್ತಿದೆಯಾದ ಕಾರಣ, ವಿಷಯವಾಕ್ಯ.

ಹಿಂದಿನ ಅಧ್ಯಾಯಗಳಲ್ಲೆಲ್ಲ ನಾವು ಮುಖ್ಯವಾಗಿ ಹಳೆಗನ್ನಡದ ಕ್ರಿಯಾವಾಕ್ಯಗಳು ಹೇಗೆ ಸಂಸ್ಕೃತದ ಕ್ರಿಯಾವಾಕ್ಯಗಳಿಂದ ಭಿನ್ನವಾಗಿವೆ ಎಂಬುದನ್ನು ಪರಿಶೀಲಿಸಿರುವೆವು. ಇದಲ್ಲದೆ, ಹಳೆಗನ್ನಡ ವೈಯಾಕರಣಿಗಳಿಗೆ ಈ ವ್ಯತ್ಯಾಸಗಳ ಅರಿವಿರಲಿಲ್ಲವಾದ ಕಾರಣ, ಅವರು ಹೇಗೆ ಹಳೆಗನ್ನಡದ ಕ್ರಿಯಾವಾಕ್ಯಗಳನ್ನು ಸಂಸ್ಕೃತ ವಾಕ್ಯಗಳ ಮಾದರಿಯಲ್ಲೇನೇ ವರ್ಣಿಸಲು ಪ್ರಯತ್ನಿಸಿದ್ದರು, ಮತ್ತು ಇದರಿಂದಾಗಿ, ಅವರು ಹೇಗೆ ಹಲವು ಸಮಸ್ಯೆಗಳಿಗೆ ಮತ್ತು ಗೊಂದಲಗಳಿಗೆ ಒಳಗಾಗಿದ್ದರು ಎಂಬುದನ್ನೂ ಪರಿಶೀಲಿಸಿರುವೆವು.

ಈ ಅಧ್ಯಾಯದಲ್ಲಿ ಹಳೆಗನ್ನಡದ ವಿಷಯ ವಾಕ್ಯಗಳಿಗೂ ಸಂಸ್ಕೃತದ ವಿಷಯ ವಾಕ್ಯಗಳಿಗೂ ನಡುವೆ ಮುಖ್ಯವಾಗಿ ಎಂತಹ ವ್ಯತ್ಯಾಸಗಳಿವೆ ಎಂಬುದನ್ನು ವಿವರಿಸಲಾಗಿದೆ. ಇವನ್ನೂ ಹಳೆಗನ್ನಡ ವೈಯಾಕರಣಿಗಳು ಸರಿಯಾಗಿ ಗಮನಿಸಿಲ್ಲ, ಮತ್ತು ಇದರಿಂದಾಗಿ, ಹಳೆಗನ್ನಡದ ಹಲವು ವೈಶಿಷ್ಟ್ಯಗಳನ್ನು ವಿವರಿಸಲು ಅವರಿಗೆ ಸಾಧ್ಯವಾಗಿಲ್ಲ.

### ೧೧.೨ ವಿಷಯ ವಾಕ್ಯಗಳ ವಿಭಜನೆ

ಹಳೆಗನ್ನಡದ ವಿಷಯ ವಾಕ್ಯಗಳಿಗೆ ಮೂರು ಮುಖ್ಯ ಉದ್ದೇಶಗಳಿವೆ: (೧) ಒಬ್ಬ ವ್ಯಕ್ತಿ ಇಲ್ಲವೇ ವಸ್ತುವಿನ ಗುಣಧರ್ಮವನ್ನು ತಿಳಿಸುವುದು, (೨) ಆತನಿಗೂ ಇನ್ನೊಬ್ಬ ವ್ಯಕ್ತಿ ಇಲ್ಲವೇ ವಸ್ತುವಿಗೂ ನಡುವಿರುವ ಸಂಬಂಧವನ್ನು ತಿಳಿಸುವುದು, ಮತ್ತು (೩) ಒಂದು ಜಾಗದಲ್ಲಿ ಒಬ್ಬ

ವ್ಯಕ್ತಿ ಇಲ್ಲವೇ ವಸ್ತುವಿನ ಇರವನ್ನು ತಿಳಿಸುವುದು ಎಂಬುವೇ ಈ ಮೂರು ಮುಖ್ಯ ಉದ್ದೇಶಗಳು.

ಇವನ್ನವಲಂಬಿಸಿ, ಹಳೆಗನ್ನಡದ ವಿಷಯವಾಕ್ಯಗಳನ್ನು ಅನುಕ್ರಮವಾಗಿ 'ಗುಣವಾಕ್ಯಗಳು', 'ಸಂಬಂಧ ವಾಕ್ಯಗಳು' ಮತ್ತು 'ಇರುವಿಕೆಯ ವಾಕ್ಯಗಳು' ಎಂಬ ಮೂರು ಗುಂಪುಗಳಲ್ಲಿ ವಿಂಗಡಿಸಬಹುದು (ಭಟ್ ೨೦೦೪:೬೪ ನೋಡಿ).

**(ಕ) ಗುಣಧರ್ಮವನ್ನು ತಿಳಿಸುವ ವಿಷಯವಾಕ್ಯಗಳು**

(೨ಕ) ಅವರ್ ಪಿರಿಯರ್
'ಅವರು ಹಿರಿಯರು'

(೨ಖ) ಇವಳ್ ಗಂಧರ್ವ ವನಿತೆ
ಇವಳು ಗಂಧರ್ವ ಸ್ತ್ರೀ'

(೨ಗ) ಆತನೆ ವಲಂ ತಕ್ಕಂ
'ಅವನು ನಿಜವಾಗಿಯೂ ತಕ್ಕವನು'

(೨ಘ) ಈ ಬನಂ ಹಿಡಿಂಬವನಂ
'ಈ ಬನ ಹಿಡಿಂಬವನ'

**(ಖ) ಸಂಬಂಧವನ್ನು ತಿಳಿಸುವ ವಿಷಯವಾಕ್ಯಗಳು**

(೩ಕ) ಎನಗೆ ಅಯ್ವರ್ ಮಕ್ಕಳ್ ಒಳರ್
'ನನಗೆ ಐವರು ಮಕ್ಕಳು ಇದ್ದಾರೆ'

(೩ಖ) ಕಾರ್ಯಸಿದ್ಧಿ ಪ್ರಾದುರ್ಭಾವಕ್ಕೆ ವಿಘ್ನಂ ಪಲವು ಒಳವು
'ಫಲಪ್ರಾಪ್ತಿಯಾಗುವುದಕ್ಕೆ ಹಲವು ವಿಘ್ನಗಳು ಇವೆ'

(೩ಗ) ಎನಗೆ ಗಂಧರ್ವರ ಕಾಪಸದಳಂ ಉಂಟು
'ನನಗೆ ಗಂಧರ್ವರ ರಕ್ಷಕದಳ ಇದೆ'

**(ಗ) ಇರುವಿಕೆಯನ್ನು ತಿಳಿಸುವ ವಿಷಯವಾಕ್ಯಗಳು**

(೪ಕ) ಐಹಿಕದ ತೊಡರ್ಪು ಎನ್ನಿರವಿನೊಳ್ ಉಂಟು
'ಇಹಲೋಕದ ಬಂಧನ ನನ್ನ ಸ್ಥಿತಿಯಲ್ಲಿ ಇದೆ'

(೪ಖ) ಮೇರುವ ಪೊನ್ ಭಂಡಾರದೊಳ್ ಉಂಟು
'ಮೇರುಪರ್ವತದ ಚಿನ್ನ ಭಂಡಾರದಲ್ಲಿ ಇದೆ'

(೪ಗ) ಇನ್ನುಂ ಪಾಂಡವರ್ ಒಳರ್
'ಪಾಂಡವರು ಇನ್ನೂ ಇದ್ದಾರೆ'

## ೧೧.೩ ಗುಣವಾಕ್ಯಗಳ ರಚನೆ

ಗುಣಧರ್ಮವನ್ನು ಸೂಚಿಸುವ ವಿಷಯ ವಾಕ್ಯಗಳಲ್ಲಿ ಮುಖ್ಯವಾಗಿ ಒಬ್ಬ ವ್ಯಕ್ತಿ, ವಸ್ತು, ಇಲ್ಲವೇ ಸಂಗತಿಯನ್ನು ಸೂಚಿಸುವ ಒಂದು ಘಟಕವೂ, ಅದರ ಗುಣಧರ್ಮವನ್ನು ಸೂಚಿಸುವ ಒಂದು ಆಖ್ಯಾತ ಪದವೂ ಇರುತ್ತವೆ.

ಮೇಲೆ (೨ಕ)ದಲ್ಲಿ ಬಂದಿರುವ ಗುಣವಾಕ್ಯದಲ್ಲಿ ಅವರ್ ಎಂಬುದು ಒಬ್ಬ ವ್ಯಕ್ತಿಯನ್ನು ಸೂಚಿಸುವ ಘಟಕ, ಮತ್ತು ಪಿರಿಯರ್ 'ಹಿರಿಯರು' ಎಂಬುದು ಆ ವ್ಯಕ್ತಿಯ ಗುಣಧರ್ಮವನ್ನು ಸೂಚಿಸುವ ಆಖ್ಯಾತ ಪದ. (೨ಘ)ದಲ್ಲಿ ಈ ಬನಂ ಎಂಬುದು ಘಟಕ ಮತ್ತು ಹಿಡಿಂಬವನಂ ಎಂಬುದು ಆಖ್ಯಾತ ಪದ. ಘಟಕದ ಗುಣಧರ್ಮಗಳಲ್ಲೊಂದನ್ನು (ಅದರ ಹೆಸರನ್ನು) ಆಖ್ಯಾತ ಪದ ಸೂಚಿಸುತ್ತದೆ.

ಕೆಳಗಿನ ವಾಕ್ಯಗಳಲ್ಲಿ ಈ ರೀತಿ ಒಬ್ಬ ವ್ಯಕ್ತಿ ಇಲ್ಲವೇ ಒಂದು ವಸ್ತುವಿನ ಗುಣಧರ್ಮವನ್ನು ಸೂಚಿಸುವ ಬದಲು, ಒಂದು ಸಂಗತಿ ಇಲ್ಲವೇ ಘಟನೆಯ ಗುಣಧರ್ಮವನ್ನು ಸೂಚಿಸಲಾಗಿದೆ.

(೩ಕ) ಈಕೆಯಂ ಕೈಕೊಳ್ವುದೆ ಕಜ್ಜಂ
'ಈಕೆಯನ್ನು ಸ್ವೀಕರಿಸುವುದೇ (ನಿನಗೆ ಯೋಗ್ಯವಾದ) ಕಾರ್ಯ'

(೩ಖ) ಎನ್ನೊಳಾದ ಕಿಸುರ್ ಎನ್ನೊಡವೋಪುದು ಒಳ್ಳಿತು
'ನನ್ನಲ್ಲಿ ಹುಟ್ಟಿದ ಈ ಜಗಳವು ನನ್ನ ಜೊತೆಯಲ್ಲಿಯೇ ಹೋಗುವುದು ಒಳ್ಳೆಯದು'

(೩ಖ)ದಲ್ಲಿ ಈಕೆಯಂ ಕೈಕೊಳ್ವುದು ಎಂಬ ಘಟನೆಯ ಗುಣಧರ್ಮವನ್ನು ಕಜ್ಜಂ '(ನಿನಗೆ ಯೋಗ್ಯವಾದ) ಕಾರ್ಯ' ಎಂಬ ಆಖ್ಯಾತ ಪದ ಸೂಚಿಸುತ್ತದೆ.

## ೧೧.೩.೧ ಲಿಂಗ-ವಚನ ಪ್ರತ್ಯಯಗಳು

ಗುಣಪದಗಳು ಗುಣವಾಕ್ಯದ ಆಖ್ಯಾತ ಪದವಾಗಿ ಬರಬೇಕಿದ್ದಲ್ಲಿ, ಅವುಗಳೊಂದಿಗೆ ಘಟಕದ ಲಿಂಗವಚನಗಳನ್ನು ಸೂಚಿಸುವ ಪ್ರತ್ಯಯ ಬರಬೇಕು ಎಂಬದೊಂದು ನಿಯಮ ಹಳೆಗನ್ನಡದಲ್ಲಿದೆ. ಹಾಗಾಗಿ, ನಿಜಕ್ಕೂ ಗುಣಪದಗಳು ಇಲ್ಲಿ ಅವುಗಳ ನಾಮರೂಪದಲ್ಲಿ ಬಳಕೆಯಾಗುತ್ತವೆ.

ಇದಲ್ಲದೆ, ಇಂತಹ ವಾಕ್ಯಗಳಲ್ಲಿ ಗುಣಧರ್ಮವನ್ನು ಸೂಚಿಸುವುದಕ್ಕಾಗಿ ನಾಮಪದಗಳೂ ಆಖ್ಯಾತ ಪದಗಳಾಗಿ ಬರಬಲ್ಲುವು, ಮತ್ತು ಈ ಆಖ್ಯಾತ ಪದಗಳ ಕೊನೆಯಲ್ಲಿ ಲಿಂಗ-ವಚನಗಳನ್ನು ಸೂಚಿಸುವ ಪ್ರತ್ಯಯಗಳು ಬಾರದೆಯೂ ಇರಲು ಸಾಧ್ಯವಿದೆ:

(೬ಕ) ಛತ್ರವತಿಯೆಂಬುದು ದ್ರುಪದನ ಪೊಟಿಲ್
'ಛತ್ರವತಿ ಎಂಬುದು ದ್ರುಪದನ ವಾಸಸ್ಥಳ (ರಾಜಧಾನಿ)'

(೬ಖ) ಇದು ನಿನ್ನ ಕೊಟ್ಟ ತಲೆ
'ಇದು ನೀನು ಕೊಟ್ಟ (ಬದುಕಿಸಿ ಉಳಿಸಿದ) ತಲೆ'

## ೧೧.೩.೨ ಆಖ್ಯಾತ ಪ್ರತ್ಯಯಗಳು

ಹಳೆಗನ್ನಡದ ಗುಣವಾಕ್ಯಗಳಲ್ಲಿ ಅವುಗಳ ಆಡುಗ ಇಲ್ಲವೇ ಕೇಳುಗನ ಗುಣಧರ್ಮವನ್ನು ಸೂಚಿಸಲಾಗಿದೆಯಾದರೆ, ಅವುಗಳ ಆಖ್ಯಾತ ಪದದೊಂದಿಗೆ ಆ ಎರಡು ಪುರುಷಗಳನ್ನು (ಉತ್ತಮ ಮತ್ತು ಮಧ್ಯಮ ಪುರುಷಗಳನ್ನು) ಮತ್ತು ಅವುಗಳ ವಚನವನ್ನು ಸೂಚಿಸುವ ಆಖ್ಯಾತ ಪ್ರತ್ಯಯಗಳನ್ನೂ ಬಳಸಬೇಕಾಗುತ್ತದೆ. ಈ ಪ್ರತ್ಯಯಗಳು ಘಟಕದ ಲಿಂಗ-ವಚನಗಳನ್ನು ಸೂಚಿಸುವ ಪ್ರತ್ಯಯದ ಅನಂತರ ಬರುತ್ತವೆ:

(೬ಕ) ಆನ್ ವಿವಿಧ ಗಂಧಂಗಳನು ಅವಯವದೊಳ್ ಮಾಡುವ ಘಟ್ಟಿವಳ್ತಿಯೆನ್
'ನಾನು ವಿವಿಧ ಗಂಧಗಳನ್ನು ಶ್ರಮವಿಲ್ಲದೆ ತಯಾರಿಸುವ ಘಟ್ಟಿವಳ್ತಿ'

(೬ಖ) ನೀಂ ಉದಿತೋದಿತನಯ್
'ನೀನು ಅಭಿವೃದ್ಧಿಯಾಗುವವನು'

(೬ಗ) ಭರತಕುಲತಿಳಕರಿರ್, ವರಶರಾಸನವ್ಯಗ್ರಹಸ್ತರಿರ್, ಬಳಯುತರಿರ್
'(ನೀವು) ಭರತವಂಶತಿಲಕರು, ಬಿಲ್ವಿದ್ಯೆಯಲ್ಲಿ ಪರಿಣತರು, (ಮತ್ತು) ಬಲಿಷ್ಠರು'

(೬ಘ) ನಾಮೆಲ್ಲಮೊಂದೆ ಗರುಡಿಯೊಳೋದಿದ ಮಾನಸರೆವು
'ನಾವೆಲ್ಲ ಒಂದೇ ಗರಡಿಯಲ್ಲಿ ಕಲಿತ ಮನುಷ್ಯರು'

(೬ಕ) ವಾಕ್ಯದಲ್ಲಿ ಆಖ್ಯಾತ ಪದವಾಗಿ ಘಟ್ಟಿವಳ್ತಿ ಎಂಬುದು ಬಂದಿದ್ದು, ಅದರ ಕೊನೆಯ ಇಕಾರ ಘಟಕದ ಲಿಂಗ–ವಚನಗಳನ್ನು ಸೂಚಿಸುತ್ತದೆ, ಮತ್ತು ಆಡುಗನನ್ನು ಸೂಚಿಸುವ ಆಖ್ಯಾತ ಪ್ರತ್ಯಯ (ಎನ್ ಎಂಬುದು) ಈ ಇಕಾರದ ಅನಂತರ ಬಂದಿದೆ; (೬ಖ) ವಾಕ್ಯದಲ್ಲಿ ಆಖ್ಯಾತ ಪದವಾಗಿ ಉದಿತೋದಿತ ಎಂಬುದು ಬಂದಿದ್ದು, ಅದರ ಕೊನೆಯಲ್ಲಿ ಘಟಕದ ಲಿಂಗ–ವಚನಗಳನ್ನು ಸೂಚಿಸುವ ಅನ್ ಪ್ರತ್ಯಯ ಬಂದಿದೆ, ಮತ್ತು ಅದರ ಅನಂತರ ಕೇಳುಗನನ್ನು ಸೂಚಿಸುವ ಅಯ್ ಆಖ್ಯಾತ ಪ್ರತ್ಯಯ ಬಂದಿದೆ.

(೬ಗ) ವಾಕ್ಯದಲ್ಲಿ ಮೂರು ಆಖ್ಯಾತ ಪದಗಳು ಬಂದಿದ್ದು, ಆ ಮೂರು ಪದಗಳ ಕೊನೆಯಲ್ಲೂ ಘಟಕದ ಲಿಂಗ–ವಚನಗಳನ್ನು ಸೂಚಿಸುವ ಅರ್ ಪ್ರತ್ಯಯ, ಮತ್ತು ಅದರ ಅನಂತರ ಕೇಳುಗರನ್ನು ಸೂಚಿಸುವ ಬಹುವಚನದ ಇರ್ ಆಖ್ಯಾತ ಪ್ರತ್ಯಯಗಳು ಬಂದಿವೆ; (೬ಘ) ವಾಕ್ಯದ ಆಖ್ಯಾತ ಪದ ಮಾನಸರೆವು ಎಂಬುದರಲ್ಲೂ ಘಟಕದ ಲಿಂಗ–ವಚನಗಳನ್ನು ಸೂಚಿಸುವ ಅರ್ ಪ್ರತ್ಯಯದ ಅನಂತರ ಆಡುಗನೊಂದಿಗೆ ಇತರರನ್ನೂ ಸೇರಿಸಿ ಸೂಚಿಸುವ ಬಹುವಚನದ ಎವು ಆಖ್ಯಾತ ಪ್ರತ್ಯಯ ಬಂದಿದೆ.

ಆಡುಗ ಮತ್ತು ಕೇಳುಗರನ್ನು ಬಿಟ್ಟು, ಇತರ ವ್ಯಕ್ತಿಗಳು ಘಟಕಗಳಾಗಿ ಬಂದಿವೆಯಾದಲ್ಲಿ, ಈ ರೀತಿ ಆಖ್ಯಾತ ಪದದೊಂದಿಗೆ ಆಖ್ಯಾತ ಪ್ರತ್ಯಯ ಬರುವುದಿಲ್ಲ, ಲಿಂಗ–ವಚನ ಪ್ರತ್ಯಯಗಳು ಮಾತ್ರ ಬರುತ್ತವೆ (೨ಕ–ಘ ನೋಡಿ).

ಗುಣವಾಕ್ಯಗಳು ಸೂಚಿಸುವ ಸಂಗತಿಯನ್ನು (ಎಂದರೆ, ವ್ಯಕ್ತಿ, ವಸ್ತು ಮೊದಲಾದುವಕ್ಕೂ ಗುಣಧರ್ಮಕ್ಕೂ ನಡುವಿರುವ ಸಂಬಂಧವನ್ನು) ಅಲ್ಲಗಳೆಯುವ ಅಲ್ಲ ಪದ ಇಂತಹ ವಾಕ್ಯಗಳ ಕೊನೆಯಲ್ಲಿ ಬಂದಿದೆಯಾದರೆ, ಆಡುಗ ಇಲ್ಲವೇ ಕೇಳುಗನನ್ನು ಸೂಚಿಸುವ ಆಖ್ಯಾತ ಪ್ರತ್ಯಯ ಅಲ್ಲ ಪದದೊಂದಿಗೆ ಮಾತ್ರ ಬರಬಲ್ಲುದು, ಇಲ್ಲವೇ ಆಖ್ಯಾತ ಪದದೊಂದಿಗೂ ಬರಬಲ್ಲುದು. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯಗಳನ್ನು ಗಮನಿಸಬಹುದು:

(೭ಕ) ಕಣ್ಣಱಿಯದ ಬೆಳ್ಳನಲ್ಲೆನ್ (೪.೭೬)
'(ನಾನು) ದೃಷ್ಟಿಯ ಮರ್ಮವನ್ನು ತಿಳಿಯದ ಬೆಪ್ಪನಲ್ಲ'

(೭ಖ) ಆನ್ ಗಂಡವಳ್ತಿಯೆನ್ ಅಲ್ಲೆಂ (೮.೫೬)
'ನಾನು ಗಂಡನಿರುವವಳು ಅಲ್ಲ'

(೭ಕ)ದಲ್ಲಿ ವಾಕ್ಯದ ಆಡುಗನನ್ನು ಸೂಚಿಸುವ ಎನ್ ಪ್ರತ್ಯಯ ಅಲ್ಲ ಪದದೊಂದಿಗೆ ಮಾತ್ರ ಬಂದಿದೆ; ಆದರೆ, (೭ಖ)ದಲ್ಲಿ ಅದು ಗಂಡವಳ್ತಿ ಎಂಬ ಆಖ್ಯಾತ ಪದದೊಂದಿಗೂ ಬಂದಿದೆ.

ಕೆಲವೊಮ್ಮೆ ಆಡುಗ ಮತ್ತು ಕೇಳುಗರನ್ನು ಸೂಚಿಸುವ ಪ್ರತ್ಯಯಗಳು ಈ ರೀತಿ ಲಿಂಗ–ವಚನ ಪ್ರತ್ಯಯಗಳ ಅನಂತರ ಬರುವ ಬದಲು, ನೇರವಾಗಿ ಗುಣ ಪದಗಳ ಅನಂತರವೂ ಬಳಕೆಯಾಗುವುದಿದೆ. ಕೇಶಿರಾಜನು (ಸೂ. ೨೩೦) ಉತ್ತಮ ಪುರುಷ ಮತ್ತು ಮಧ್ಯಮ ಪುರುಷಗಳಲ್ಲಿ ಎರಡೆರಡು ರೂಪಗಳನ್ನು (ಪೆಜಿನೆನ್–ಪೆಜೆನ್, ಪಜೆವು–ಪೆಜಿರೆವು, ಒಳ್ಳಿದನಯ್–ಒಳ್ಳಿದಯ್, ಒಳ್ಳಿದರಿರ್–ಒಳ್ಳಿದಿರ್, ಇತ್ಯಾದಿ) ಕೊಟ್ಟಿರುವುದನ್ನು ಗಮನಿಸಬಹುದು (ವೆಂಕಟಾಚಲ ಶಾಸ್ತ್ರೀ ೧೯೯೪:೧೦೭ ನೋಡಿ).

ಇಂತಹ ಪ್ರಯೋಗಗಳು ಕೇಶಿರಾಜನನ್ನು ಮತ್ತು ಇತರ ವಿದ್ವಾಂಸರನ್ನು ದಾರಿತಪ್ಪಿಸಿರುವ ಹಾಗೆ ಕಾಣಿಸುತ್ತದೆ. ಯಾಕೆಂದರೆ, ಕೇಶಿರಾಜನು ಮೇಲೆ ವಿವರಿಸಿದಂತಹ ವಾಕ್ಯಗಳ ಆಖ್ಯಾತಗಳಾಗಿ ಬರುವ ಒಳ್ಳಿದನ್, ಒಳ್ಳಿದರ್ ಮೊದಲಾದವುಗಳಲ್ಲೂ ಆಖ್ಯಾತ(ವಿಭಕ್ತಿ) ಪ್ರತ್ಯಯಗಳು ಬಂದಿವೆಯೆಂಬುದಾಗಿ ಪ್ರಯೋಗಗಳನ್ನು ಉದಾಹರಿಸಿದ್ದಾನೆ.

ಆದರೆ, ನಿಜಕ್ಕೂ ಈ ಆಖ್ಯಾತ ಪದಗಳಲ್ಲಿ ಕಾಣಿಸುವ ಅನ್, ಅರ್ ಮೊದಲಾದ ಪ್ರತ್ಯಯಗಳು ಲಿಂಗ–ವಚನ ಪ್ರತ್ಯಯಗಳಲ್ಲದೆ, ಪ್ರಥಮ ಪುರುಷದ ಆಖ್ಯಾತ ಪ್ರತ್ಯಯಗಳಲ್ಲ. ಯಾಕೆಂದರೆ, ಅವು ಈ ಜಾಗದಲ್ಲಿ ಮಾತ್ರವಲ್ಲದೆ ಬೇರೆ ಜಾಗಗಳಲ್ಲೂ ಬರುತ್ತವೆ. ಈ ಗುಣಪದಗಳನ್ನು ನಾಮಪದಗಳ ಜಾಗದಲ್ಲಿ ಬಳಸಬೇಕಾಗಿರುವಲ್ಲೆಲ್ಲ ಅವಕ್ಕೆ ಈ ಲಿಂಗ–ವಚನ ಪ್ರತ್ಯಯಗಳನ್ನು ಸೇರಿಸಬೇಕಾಗುತ್ತದೆ (೪.೨.೧ ನೋಡಿ).

ಇದಲ್ಲದೆ, ಒಳ್ಳಿದನೆನ್, ಒಳ್ಳಿದರೆವು, ಒಳ್ಳಿದನಯ್, ಒಳ್ಳಿದರಯ್ ಮೊದಲಾದ ಉತ್ತಮ ಮತ್ತು ಮಧ್ಯಮಪುರುಷ ಆಖ್ಯಾತ ಪದಗಳಲ್ಲೂ ಈ ಪ್ರತ್ಯಯಗಳ ಬಳಕೆಯಾಗುವುದಾದ ಕಾರಣ, ಅವನ್ನು ಆಖ್ಯಾತ ಪ್ರತ್ಯಯಗಳಿಂದ ಭಿನ್ನವಾದ ಲಿಂಗ–ವಚನ ಪ್ರತ್ಯಯಗಳೆಂದು ಪರಿಗಣಿಸದೆ ಬೇರೆ ದಾರಿಯಿಲ್ಲ.

### ೧೧.೩.೩ ಕ್ರಿಯಾಪದದ ಬಳಕೆ

ಹಳೆಗನ್ನಡದ ಗುಣವಾಕ್ಯಗಳಲ್ಲಿ ಆಗು ಕ್ರಿಯಾಪದದ ಮುಂದಿನ ಸಮಯದ ರೂಪಗಳನ್ನು ಈಗಿನ ಸಮಯದ ಅರ್ಥದಲ್ಲಿ ಬಳಸಲು ಸಾಧ್ಯವಿದ್ದು, ಇದಕ್ಕೆ ವಾಕ್ಯ ತಿಳಿಸುವ ಸಂಗತಿಯನ್ನು ಒತ್ತಿ ಹೇಳುವ ಅರ್ಥವಿದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯವನ್ನು ಗಮನಿಸಬಹುದು:

(೮) ಅಖಿಳಾಸ್ತ್ರ ವಿಶಾರದನಪ್ಪನುಂ ಗೆಲಲ್ಕರಿಯನುಂ ಒಂದಿ ಬಾರದನುಂ ಅಂಕದ ಕರ್ಣನೆ (೯.೬೧)
‘ಎಲ್ಲಾ ಅಸ್ತ್ರಗಳಲ್ಲೂ ವಿಶಾರದನಾಗಿರುವವನೂ, ಜಯಿಸುವುದಕ್ಕೆ ಅಸಾಧ್ಯ(ನಾಗಿರುವವನೂ) ಮತ್ತು ನಮ್ಮ ಜೊತೆಯಲ್ಲಿ ಬಾರದವ(ನಾಗಿರುವವನೂ) ಪ್ರಸಿದ್ಧನಾದ ಕರ್ಣನೇ’

(೮)ನೇ ವಾಕ್ಯದಲ್ಲಿ ಮೂರು ಗುಣವಾಕ್ಯಗಳನ್ನು ಉಂ ಪ್ರತ್ಯಯದ ಮೂಲಕ ಒಟ್ಟಿಗೆ ಸೇರಿಸಿ ಹೇಳಲಾಗಿದೆ. ಈ ಮೂರು ಗುಣವಾಕ್ಯಗಳಲ್ಲಿ ಮೊದಲನೆಯದು ಮಾತ್ರ ಅಪ್ಪನ್ ಕ್ರಿಯಾಪದದೊಂದಿಗೆ ಬಳಕೆಯಾಗಿದೆ. ಅದಿಲ್ಲದೆಯೂ (ಅಖಿಳಾಸ್ತ್ರ ವಿಶಾರದನುಂ ಕರ್ಣನೆ ಎಂಬುದಾಗಿ) ಈ ವಾಕ್ಯವನ್ನು ತಯಾರಿಸಲು ಸಾಧ್ಯವಿದೆ ಎಂಬುದನ್ನು ಇಲ್ಲಿ ಗಮನಿಸಬಹುದು.

## ೧೧.೪ ಸಂಬಂಧ ವಾಕ್ಯಗಳ ರಚನೆ

ಹಳೆಗನ್ನಡದ ಸಂಬಂಧ ವಾಕ್ಯಗಳಲ್ಲಿ ಮುಖ್ಯವಾಗಿ ಎರಡು ಘಟಕಗಳು ಬಂದಿರುತ್ತವೆ. ಇವುಗಳಲ್ಲಿ ಒಂದು ಘಟಕ ಗೆ ಪ್ರತ್ಯಯದೊಂದಿಗೆ ಬರುತ್ತಿದ್ದು, ವ್ಯಕ್ತಿ, ವಸ್ತು ಮೊದಲಾದುವನ್ನು ಸೂಚಿಸುತ್ತದೆ, ಮತ್ತು ಇನ್ನೊಂದು ಘಟಕ ಯಾವ ಪ್ರತ್ಯಯವೂ ಇಲ್ಲದೆ ಬರುತ್ತಿದ್ದು, ಅಂತಹ ವ್ಯಕ್ತಿ, ವಸ್ತು ಮೊದಲಾದುವುಗಳಿಗೆ ಸಂಬಂಧಿಸಿರುವಂತಹ ಬೇರೊಂದು ವ್ಯಕ್ತಿ ಇಲ್ಲವೇ ವಸ್ತುವನ್ನು ಸೂಚಿಸುತ್ತದೆ.

ಇದಲ್ಲದೆ, ಇಂತಹ ಸಂಬಂಧ ವಾಕ್ಯಗಳಲ್ಲಿ ಸಾಮಾನ್ಯವಾಗಿ ಒಳ್ (ಉಳ್) ಕ್ರಿಯಾಪದದ ಒಂದು ರೂಪವೂ ಬರುತ್ತದೆ. ಈ ಕ್ರಿಯಾಪದವು ಸಂಬಂಧಿಸಿರುವ ವ್ಯಕ್ತಿಯ ಪುರುಷ-ಲಿಂಗ-ವಚನಗಳನ್ನು ಸೂಕ್ಷ್ಮವಾಗಿ ಸೂಚಿಸುತ್ತದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಸಂಬಂಧ ವಾಕ್ಯವನ್ನು ಪರಿಶೀಲಿಸಬಹುದು:

(೯ಕ) ಎನಗೆ ಅಯ್ವರ್ ಮಕ್ಕಳ್ ಒಳರ್
‘ನನಗೆ ಐವರು ಮಕ್ಕಳು ಇದ್ದಾರೆ’

(೯ಕ)ದಲ್ಲಿ ಎನಗೆ ಘಟಕ ಆಡುಗನನ್ನೂ, ಅಯ್ವರ್ ಮಕ್ಕಳ್ ಘಟಕ ಆಡುಗನೊಂದಿಗೆ ಸಂಬಂಧಿಸಿರುವ ವ್ಯಕ್ತಿಗಳನ್ನೂ ಸೂಚಿಸುತ್ತವೆ. ಇಂತಹ ವಾಕ್ಯಗಳಲ್ಲಿ ಒಳ್ ಕ್ರಿಯಾಪದ ಬಾರದಿರಲೂ ಸಾಧ್ಯವಿದೆ.

(೯ಖ) ಎನಗೆ ನೀನೆ ಪತಿ
‘ನನಗೆ ನೀನೇ ಪತಿ’

## ೧೧.೫ ಇರುವಿಕೆಯ ವಾಕ್ಯಗಳು

ಸಂಬಂಧ ವಾಕ್ಯಗಳ ಹಾಗೆ ಇರುವಿಕೆಯ ವಾಕ್ಯಗಳಲ್ಲೂ ಮುಖ್ಯವಾಗಿ ಎರಡು ಘಟಕಗಳು ಮತ್ತು ಒಳ್ (ಉಳ್) ಕ್ರಿಯಾಪದ ಬಳಕೆಯಾಗುತ್ತವೆ. ಇವುಗಳಲ್ಲಿ ಬರುವ ಎರಡು ಘಟಕಗಳಲ್ಲಿ ಒಂದು ಇರುವಿಕೆಯ ಜಾಗವನ್ನು ಸೂಚಿಸುತ್ತಿದ್ದು, ಒಳ್ ಪ್ರತ್ಯಯದೊಂದಿಗೆ ಬರುತ್ತದೆ:

(೧೦ಕ) ಮೇರುವ ಪೊನ್ ಭಂಡಾರದೊಳ್ ಉಂಟು
‘ಮೇರುಪರ್ವತದ ಚಿನ್ನ ಭಂಡಾರದಲ್ಲಿ ಇದೆ’

(೧೦ಖ) ಅಡವಿಗಳೊಳ್ ಪಣ್ಬಲಂ ಒಳವು
‘ಕಾಡುಗಳಲ್ಲಿ ಹಣ್ಣುಹಂಪಲುಗಳು ಇವೆ’

ಇಂತಹ ವಾಕ್ಯಗಳಲ್ಲಿ ಒಳ್ (ಉಳ್) ಕ್ರಿಯಾಪದವನ್ನು ಬಳಸದೆಯೂ ಇರಲು ಸಾಧ್ಯವಿದೆ ಎಂಬುದನ್ನು ಕೆಳಗೆ ಕೊಟ್ಟಿರುವ (೧೦ಗ) ವಾಕ್ಯದಲ್ಲಿ ಕಾಣಬಹುದು:

(೧೦ಗ) ಎಮ್ಮ ಮನೆಯೊಳ್ ಆನುಂ ಎಮ್ಮ ಧರ್ಮಪತ್ನಿಯುಂ ಮಗನುಂ ಮಗಳುಂ ಇಂತೀ ನಾಲ್ವರೆ ಮಾನಸರ್
‘ನಮ್ಮ ಮನೆಯಲ್ಲಿ ನಾನು, ನನ್ನ ಹೆಂಡತಿ, ಮಗ, ಮಗಳು, ಹೀಗೆ ನಾಲ್ಕು ಜನರು ಮಾತ್ರ (ಇದ್ದಾರೆ)’

ಹಳೆಗನ್ನಡದಲ್ಲಿ ಒಳ್ (ಉಳ್) ಕ್ರಿಯಾಪದದ ಅರ್ಥದಲ್ಲೇ ಬಳಕೆಯಾಗುವ ಇರ್ ಎಂಬ ಇನ್ನೊಂದು ಕ್ರಿಯಾಪದವೂ ಇದೆ. ಈ ಎರಡು ಕ್ರಿಯಾಪದಗಳ ನಡುವಿನ ಮುಖ್ಯ ವ್ಯತ್ಯಾಸವೇನೆಂದರೆ, ಒಳ್ ಕ್ರಿಯಾಪದದೊಂದಿಗೆ ಸಮಯವನ್ನು ಸೂಚಿಸುವ ಪ್ರತ್ಯಯಗಳು ಬರುವುದಿಲ್ಲ, ಆದರೆ ಇರ್ ಕ್ರಿಯಾಪದದೊದಿಗೆ ಹಿಂದಿನ ಸಮಯುವನ್ನು ಸೂಚಿಸುವ ದ್ ಪ್ರತ್ಯಯ ಮತ್ತು ಮುಂದಿನ (ಇಲ್ಲವೇ ಈಗಿನ) ಸಮಯವನ್ನು ಸೂಚಿಸುವ ಪ್ ಪ್ರತ್ಯಯ ಇವೆರಡೂ ಬರುತ್ತವೆ.

(೧೧ಕ) ಅನಿಬರುಂ ಮೌನವ್ರತದೆ ಇರ್ದರ್
‘ಅಷ್ಟು ಮಂದಿಯೂ ಮೌನವಾಗಿದ್ದರು’
(೧೧ಖ) ಕುಡಲ್ ಇರ್ಪಂ ಬಲದೇವನೆನ್ನನುಜೆಯಂ ದುರ್ಯೋಧನಂಗೆ
‘ಬಲರಾಮನು ನನ್ನ ತಂಗಿಯನ್ನು ದುರ್ಯೋಧನನಿಗೆ ಕೊಡಲಿದ್ದಾನೆ’
(೧೧ಗ) ಪಿರಿದುಂ ಪೊಟ್ತು ತಡೆದಿರ್ಪೆವು
‘ಬಹಳ ಹೊತ್ತು ತಡೆದಿದ್ದೇವೆ’

ಈ ಕಾರಣಕ್ಕಾಗಿ, ಹಳೆಗನ್ನಡದಲ್ಲಿ ಇರ್ ಕ್ರಿಯಾಪದವಿರುವ ವಾಕ್ಯಗಳನ್ನು (ಅವು ಇರುವಿಕೆಯನ್ನು ಸೂಚಿಸುತ್ತಿವೆಯಾದರೂ) ಕ್ರಿಯಾವಾಕ್ಯಗಳೆಂದು, ಮತ್ತು ಒಳ್ ಕ್ರಿಯಾಪದವಿರುವ ವಾಕ್ಯಗಳನ್ನು ವಿಷಯವಾಕ್ಯಗಳೆಂದು ಪರಿಗಣಿಸಲು ಸಾಧ್ಯವಿದೆ.

ಈ ವಿಷಯದಲ್ಲಿ ಹೊಸಗನ್ನಡ ಹಳೆಗನ್ನಡಕ್ಕಿಂತ ಭಿನ್ನವಾಗಿದೆಯೆಂಬುದನ್ನು ಗಮನಿಸಬಹುದು. ಹೊಸಗನ್ನಡದಲ್ಲಿ ಇರು ಕ್ರಿಯಾಪದವೇ ಇಂತಹ ಇರುವಿಕೆಯ ವಾಕ್ಯಗಳಲ್ಲಿ ಬಳಕೆಯಾಗುತ್ತಿದ್ದು, ಅದಕ್ಕೆ ಹಿಂದಿನ, ಮುಂದಿನ ಮತ್ತು ಈಗಿನ ಎಂಬುದಾಗಿ ಮೂರು ರೀತಿಯ ಸಮಯಗಳನ್ನು ಸೂಚಿಸುವ ಕ್ರಿಯಾರೂಪಗಳಿವೆ:

(೧೨ಕ) ನಾನು ನಿನ್ನೆ ಮನೆಯಲ್ಲೇ ಇದ್ದೆ
(೧೨ಖ) ನಾನು ನಾಳೆ ಮನೆಯಲ್ಲೇ ಇರುತ್ತೇನೆ
(೧೨ಗ) ನಾನು ಈಗ ಮನೆಯಲ್ಲೇ ಇದ್ದೇನೆ

ಆದರೆ, ಹಳೆಗನ್ನಡದಲ್ಲಿ ಇರ್ ಕ್ರಿಯಾಪದಕ್ಕೆ ಎರಡು ಸಮಯಗಳನ್ನು ಸೂಚಿಸುವ ಕ್ರಿಯಾರೂಪಗಳು ಮಾತ್ರ ಇವೆ; ಹಾಗಾಗಿ, ಮುಂದಿನ ಸಮಯವನ್ನು ಸೂಚಿಸುವ ಇರ್ಪನ್, ಇರ್ಪೆನ್ ಮೊದಲಾದ ರೂಪಗಳನ್ನೇ ಈಗಿನ ಸಮಯುವನ್ನು ಸೂಚಿಸುವುದಕ್ಕಾಗಿಯೂ ಬಳಸಲಾಗುತ್ತದೆ (೧೧ಗ ನೋಡಿ).

ಆದರೆ ಮೇಲೆ ಸೂಚಿಸಿದ ಹಾಗೆ, ಇರ್ ಎಂಬುದಕ್ಕಿಂತ ಭಿನ್ನವಾದ ಒಳ್ (ಉಳ್) ಎಂಬ ಬೇರೊಂದು ಕ್ರಿಯಾಪದವೂ ಹಳೆಗನ್ನಡದಲ್ಲಿ ಬಳಕೆಯಾಗುವುದಾದ ಕಾರಣ, ಘಟನೆ ಮತ್ತು ಸಂಗತಿಗಳ ನಡುವಿನ ವ್ಯತ್ಯಾಸವನ್ನು ಈ ಕ್ರಿಯಾಪದಗಳಲ್ಲಿನ ವ್ಯತ್ಯಾಸವೇ ಸೂಚಿತ್ತದೆಯೆಂದು ಹೇಳುವ ಸಾಧ್ಯತೆಯಿದೆ. ಆದರೆ, ಈ ವಿಷಯದಲ್ಲಿ ಹೆಚ್ಚಿನ ಸಂಶೋಧನೆ ನಡೆಸುವ ಅವಶ್ಯಕತೆಯಿದೆ.

## ೧೧.೬ ಸಂಸ್ಕೃತದ ವಿಷಯವಾಕ್ಯಗಳು

ಹಳೆಗನ್ನಡದ ಹಾಗೆ ಸಂಸ್ಕೃತದಲ್ಲೂ ಮೂರು ರೀತಿಯ ವಿಷಯವಾಕ್ಯಗಳನ್ನು ಕಾಣಲು ಸಾಧ್ಯವಿದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ವಾಕ್ಯಗಳನ್ನು ಗಮನಿಸಬಹುದು:

(೧೩ಕ) ಅಹಂ ವೃದ್ಧೋಸ್ಮಿ
'ನಾನು ಮುದುಕ'

(೧೩ಖ) ತಸ್ಯ ಭೂಪತೇಃ ಚತ್ವಾರಃ ಪುತ್ರಾಃ ಸಂತಿ
'ಆ ರಾಜನಿಗೆ ನಾಲ್ವರು ಹುಡುಗರು ಇದ್ದಾರೆ'

(೧೩ಗ) ಅಸ್ತಿ ಗಂಗಾತೀರೇ ಪಾಟಲಿಪುತ್ರ ನಾಮಧೇಯಂ ನಗರಂ
'ಗಂಗಾನದಿಯ ದಡದಲ್ಲಿ ಪಾಟಲಿಪುತ್ರವೆಂಬ ಹೆಸರಿನ ನಗರವಿದೆ'

ಸಂಬಂಧಿಸುವ ವಾಕ್ಯಗಳಲ್ಲಿ ಹಳೆಗನ್ನಡದ ಗೆ (ಚತುರ್ಥೀ) ಪ್ರತ್ಯಯದ ಬದಲು ಸಂಸ್ಕೃತದಲ್ಲಿ ಷಷ್ಠೀ ವಿಭಕ್ತಿಯ ಬಳಕೆಯಾಗುವುದೆಂಬುದನ್ನು (೧೩ಖ)ದಲ್ಲಿ ಕಾಣಬಹುದು. ಈ ವಾಕ್ಯಗಳಲ್ಲಿ ಬರುವ ಕ್ರಿಯಾಪದವನ್ನು ಬಳಸದೆಯೂ ಇರಲು ಸಾಧ್ಯವಿದೆ (೧೪ಕ–ಗ ನೋಡಿ). ಆದರೆ, ಹಳೆಗನ್ನಡದ ಹಾಗೆ ಸಂಸ್ಕೃತದ ಗುಣವಾಕ್ಯಗಳಲ್ಲಿ ಆಡುಗ ಮತ್ತು ಕೇಳುಗರನ್ನು ಸೂಚಿಸುವ ಆಖ್ಯಾತ ಪ್ರತ್ಯಯಗಳು ಬರುವುದಿಲ್ಲ:

(೧೪ಕ) ವೃದ್ಧೋಹಂ
'ನಾನು ಮುದುಕ'

(೧೪ಖ) ತಸ್ಯ ಭೂಪತೇಃ ಚತ್ವಾರಃ ಪುತ್ರಾಃ
'ಆ ರಾಜನಿಗೆ ನಾಲ್ವರು ಹುಡುಗರು'

(೧೪ಗ) ಗಂಗಾತೀರೇ ಪಾಟಲಿಪುತ್ರ ನಾಮಧೇಯಂ ನಗರಂ
'ಗಂಗಾನದಿಯ ದಡದಲ್ಲಿ ಪಾಟಲಿಪುತ್ರವೆಂಬ ಹೆಸರಿನ ನಗರ'

(೧೪ಕ) ವಾಕ್ಯದಲ್ಲಿ ಆಡುಗನನ್ನು ಸೂಚಿಸುವ ಅಹಂ 'ನಾನು' ಘಟಕ ಬಂದಿದೆಯಾದರೂ, ಗುಣಧರ್ಮವನ್ನು ಸೂಚಿಸುವ ವೃದ್ಧ ಪದದೊಂದಿಗೆ ಉತ್ತಮ ಪುರುಷದ ಆಖ್ಯಾತ ಪ್ರತ್ಯಯ ಬಂದಿಲ್ಲ ಎಂಬುದನ್ನು ಗಮನಿಸಬಹುದು.

## ೧೧.೬.೧ ಗುಣವಾಕ್ಯಗಳಲ್ಲಿ ವ್ಯತ್ಯಾಸ

ಹಳೆಗನ್ನಡದ ಗುಣವಾಕ್ಯಗಳಿಗೂ ಸಂಸ್ಕೃತದ ಗುಣವಾಕ್ಯಗಳಿಗೂ ನಡುವಿರುವ ಇನ್ನೊಂದು ವ್ಯತ್ಯಾಸವೇನೆಂದರೆ, ಸಂಸ್ಕೃತದ ಗುಣವಾಕ್ಯಗಳಲ್ಲಿ, ಹಳೆಗನ್ನಡದಲ್ಲಿರುವ ಹಾಗೆ, ಘಟಕ ಮತ್ತು ಆಖ್ಯಾತಗಳೆಂಬ ಭೇದವಿಲ್ಲ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಸಂಸ್ಕೃತ ವಾಕ್ಯಗಳನ್ನು ಗಮನಿಸಬಹುದು:

(೧೫ಕ) ಇದಂ ಮಮ ಗೃಹಂ
'ಇದು ನನ್ನ ಮನೆ'

(೧೫ಖ) ಇಯಮ್ ಗೌಃ ಶುಕ್ಲಾ
'ಈ ದನ ಬಿಳಿ'

(೧೫ಗ) ಸರ್ವಂ ಖಲ್ವಿದಂ ಬ್ರಹ್ಮ
'ಇದೆಲ್ಲವೂ ಬ್ರಹ್ಮ'

ಮೇಲೆ ಕೊಟ್ಟಿರುವ (೧೫ಕ–ಗ) ವಾಕ್ಯಗಳಲ್ಲಿ ಎರಡೆರಡು ವಾಕ್ಯಾಂಶಗಳಿದ್ದು, ಇವುಗಳಲ್ಲಿ ಯಾವುದು ಒಬ್ಬ ವ್ಯಕ್ತಿ ಇಲ್ಲವೇ ವಸ್ತುವನ್ನು ಸೂಚಿಸುವ ಘಟಕ, ಮತ್ತು ಯಾವುದು ಅದರ ಗುಣಧರ್ಮವನ್ನು ಸೂಚಿಸುವ 'ಆಖ್ಯಾತ ಪದ' ಎಂಬುದಾಗಿ ನಿರ್ಧರಿಸುವುದು ಕಷ್ಟ.

ಹಳೆಗನ್ನಡದ ಗುಣವಾಕ್ಯಗಳಲ್ಲಿ ಸಾಮಾನ್ಯವಾಗಿ ಮೊದಲು ಬರುವ ವಾಕ್ಯಾಂಶವನ್ನು ಆ ವಾಕ್ಯದ ಘಟಕವೆಂದು, ಮತ್ತು ಅದರ ಅನಂತರ ಬರುವ ವಾಕ್ಯಾಂಶವನ್ನು ಆಖ್ಯಾತ ಪದವೆಂದು ಪರಿಗಣಿಸಲು ಸಾಧ್ಯವಿದೆ. ಇದಲ್ಲದೆ, ಆಡುಗ ಮತ್ತು ಕೇಳುಗರನ್ನು ಸೂಚಿಸುವ ಆಖ್ಯಾತ ಪ್ರತ್ಯಯಗಳ ಬಳಕೆಯಾಗಿರುವಲ್ಲಿ, ಅಂತಹ ಪ್ರತ್ಯಯವಿರುವ ವಾಕ್ಯಾಂಶವೇ ಆಖ್ಯಾತ ಪದ ಎಂದು ಹೇಳಲು ಸಾಧ್ಯವಿದೆ.

ಆದರೆ, ಸಂಸ್ಕೃತದ ಗುಣವಾಕ್ಯಗಳಲ್ಲಿ ಈ ರೀತಿ ಘಟಕ ಮತ್ತು ಆಖ್ಯಾತ ಪದಗಳ ನಡುವೆ ವ್ಯತ್ಯಾಸವಿಲ್ಲ. ಈ ವಿಷಯವನ್ನು ವೇದ, ಉಪನಿಷತ್ತು ಮೊದಲಾದವುಗಳನ್ನು ಇಂಗ್ಲಿಷ್, ಫ್ರೆಂಚ್, ಜರ್ಮನ್ ಮೊದಲಾದ ಪಾಶ್ಚಾತ್ಯ ಭಾಷೆಗಳಿಗೆ ಅನುವಾದಿಸಲು ನಡೆಸಿರುವ ವಿದ್ವಾಂಸರ ಪ್ರಯತ್ನಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

ಈ ಪಾಶ್ಚಾತ್ಯ ಭಾಷೆಗಳ ಗುಣವಾಕ್ಯಗಳಲ್ಲಿ, ಹಳೆಗನ್ನಡದ ಹಾಗೆ, ಘಟಕ ಮತ್ತು ಆಖ್ಯಾತ ಪದಗಳ ನಡುವೆ ವ್ಯತ್ಯಾಸವಿದೆ. ವಾಕ್ಯದಲ್ಲಿ ಮೊದಲು ಬರುವುದು ಘಟಕ ಮತ್ತು ಅನಂತರ ಬರುವುದು ಆಖ್ಯಾತ ಪದ. ಇದಲ್ಲದೆ, ಈ ಎರಡು ವಾಕ್ಯಾಂಶಗಳ ನಡುವೆ (ಹಳೆಗನ್ನಡದಲ್ಲಿರುವ ಹಾಗೆ) ಅವುಗಳ ಸ್ವರೂಪದಲ್ಲೂ ವ್ಯತ್ಯಾಸಗಳಿವೆ.

ಆದರೆ, ಸಂಸ್ಕೃತದಲ್ಲಿ ಇಂತಹ ವ್ಯತ್ಯಾಸಗಳಿಲ್ಲ, ಮತ್ತು ಇಂತಹ ವಾಕ್ಯಗಳಲ್ಲಿ ಬರುವ ವಾಕ್ಯಾಂಶಗಳ ಜಾಗವನ್ನು ಹೇಗೆ ಬೇಕಿದ್ದರೂ ಅದಲು ಬದಲು ಮಾಡುವ ಸ್ವಾತಂತ್ರ್ಯ ಸಂಸ್ಕೃತದಲ್ಲಿದೆ. ಹಾಗಾಗಿ, ಇಂತಹ ವಾಕ್ಯಗಳ ಎರಡು ವಾಕ್ಯಾಂಶಗಳಲ್ಲಿ ಯಾವುದನ್ನು ಘಟಕವೆಂಬುದಾಗಿ ಅನುವಾದಿಸಬೇಕು, ಮತ್ತು ಯಾವುದನ್ನು ಆಖ್ಯಾತ ಪದವೆಂಬುದಾಗಿ ಅನುವಾದಿಸಬೇಕು ಎಂಬುದು ಈ ವಿದ್ವಾಂಸರಿಗೆ ಒಂದು ದೊಡ್ಡ ಸಮಸ್ಯೆಯಾಗಿದೆ.

ಸಂಸ್ಕೃತದ ಈ ವೈಶಿಷ್ಟ್ಯವನ್ನು ಗ್ರೆನ್–ಎಕ್ಲುಂಡ್ (೧೯೭೮) ಅವರು ಕೂಲಂಕಶವಾಗಿ ಚರ್ಚಿಸಿದ್ದಾರೆ. ಕೆಲವರು ಅನುವಾದಕರು ಇಂತಹ ವಾಕ್ಯಗಳಲ್ಲೆಲ್ಲ ಎರಡನೆಯ ವಾಕ್ಯಾಂಶವೇ ಆಖ್ಯಾತ ಪದವೆಂಬುದಾಗಿ ಪರಿಗಣಿಸಿರುವರಾದರೆ, ಬೇರೆ ಕೆಲವರು ಎಲ್ಲೆಡೆಯಲ್ಲೂ ಮೊದಲನೆಯ ವಾಕ್ಯಾಂಶವನ್ನೇ ಆಖ್ಯಾತ ಪದವೆಂದು ಪರಿಗಣಿಸಿದ್ದಾರೆ. ಇನ್ನು ಕೆಲವರು ತಮ್ಮ ಅನುಕೂಲಕ್ಕೆ ಸರಿಯಾಗಿ (ಎಂದರೆ ತಾವು ಪ್ರತಿಪಾದಿಸುವ ತತ್ವಜ್ಞಾನಕ್ಕೆ ಅನುಕೂಲವಾಗುವಂತೆ) ಕೆಲವು ಕಡೆಗಳಲ್ಲಿ ಮೊದಲನೆಯ ವಾಕ್ಯಾಂಶವನ್ನೂ, ಬೇರೆ ಕೆಲವು ಕಡೆಗಳಲ್ಲಿ ಎರಡನೆಯ ವಾಕ್ಯಾಂಶವನ್ನೂ ಆಖ್ಯಾತ ಪದವೆಂಬುದಾಗಿ ಪರಿಗಣಿಸಿದ್ದಾರೆ.

ಉದಾಹರಣೆಗಾಗಿ, ಮೇಲೆ (೧೫ಗ)ದಲ್ಲಿ ಕೊಟ್ಟಿರುವ ಸರ್ವಂ ಖಲ್ವಿದಂ ಬ್ರಹ್ಮ ಎಂಬ ವಾಕ್ಯವನ್ನು ಗ್ರೆನ್–ಎಕ್ಲುಂಡ್ (೧೯೭೮) ಅವರು ಪರಿಶೀಲಿಸಿದ ಹದಿನೈದು ಅನುವಾದಗಳಲ್ಲಿ ಹತ್ತು ಅನುವಾದಗಳು 'ಇದೆಲ್ಲವೂ ಬ್ರಹ್ಮ' ಎಂಬುದಾಗಿ, ಎಂದರೆ ಬ್ರಹ್ಮ ಪದವನ್ನು ಆಖ್ಯಾತ ಪದವೆಂಬುದಾಗಿ ಪರಿಗಣಿಸಿ ಅನುವಾದಿಸಿವೆ; ಆದರೆ, ಉಳಿದ ಐದು ಅನುವಾದಗಳು 'ಬ್ರಹ್ಮನೇ ಇದೆಲ್ಲ' ಎಂಬುದಾಗಿ, ಎಂದರೆ (ಸರ್ವಂ ಖಲು) ಇದಂ ಎಂಬುದನ್ನು ಆಖ್ಯಾತ ಪದವೆಂಬುದಾಗಿ ಪರಿಗಣಿಸಿ ಅನುವಾದಿಸಿವೆ.

### ೧೧.೬.೨ ಗುಣವಾಕ್ಯ ಮತ್ತು ನಾಮಪದಕಂತೆ

ಸಂಸ್ಕೃತದ ನಾಮಪದಕಂತೆಗಳಲ್ಲೂ ಇಂತಹದೇ ಸಮಸ್ಯೆಯಿದೆ. ಅವುಗಳಲ್ಲಿ ಎರಡು ಪದಗಳಿದ್ದು, ಒಂದು ಇನ್ನೊಂದರ ಗುಣಧರ್ಮವನ್ನು ಸೂಚಿಸುತ್ತಿದೆಯಾದರೆ, ಯಾವ ಪದ ಗುಣಧರ್ಮವನ್ನು ಸೂಚಿಸುವ 'ವಿಶೇಷಣ' ಪದ, ಮತ್ತು ಯಾವುದು ಅಂತಹ ಗುಣಧರ್ಮವಿರುವ ವ್ಯಕ್ತಿ, ವಸ್ತು ಮೊದಲಾದುವನ್ನು ಸೂಚಿಸುವ 'ವಿಶೇಷ್ಯ' ಪದ ಎಂಬುದಾಗಿ ನಿರ್ಧರಿಸುವುದು ಬಹಳ ಕಷ್ಟ.

ಉದಾಹರಣೆಗಾಗಿ, ಕೃಷ್ಣಃ ಸರ್ಪಃ ಎಂಬ ಪದಕಂತೆಯನ್ನು 'ಕಪ್ಪಾಗಿರುವ ಸರ್ಪ' ಎಂದಾಗಲಿ, ಇಲ್ಲವೇ 'ಸರ್ಪವಾಗಿರುವ ಕಪ್ಪು (ಪ್ರಾಣಿ)' ಎಂದಾಗಲಿ ಅನುವಾದಿಸಲು ಸಾಧ್ಯವಿದ್ದು, ಆ ಎರಡು ಪದಗಳಲ್ಲಿ ಯಾವುದು ವಿಶೇಷ್ಯ, ಮತ್ತು ಯಾವುದು ವಿಶೇಷಣ ಎಂಬುದನ್ನು ನಿರ್ಧರಿಸುವುದು ಕಷ್ಟ (ಜೋಶಿ ೧೯೬೭ ನೋಡಿ). ಈ ಪದಕಂತೆಯನ್ನು ಸರ್ಪಃ ಕೃಷ್ಣಃ ಎಂಬುದಾಗಿಯೂ ಬದಲಾಯಿಸಲು ಸಾಧ್ಯವಿದ್ದು, ಹೀಗೆ ಮಾಡುವುದರಿಂದ ಈ ಪದಕಂತೆಯ ಅರ್ಥದಲ್ಲಿ ಬದಲಾವಣೆಯಾಗಬೇಕೆಂದೇನೂ ಇಲ್ಲ. ಇಂತಹ ಪದಕಂತೆಗಳ ಎರಡು ಅಂಗಗಳ ನಡುವೆ ಯಾವ ವ್ಯತ್ಯಾಸವೂ ಇಲ್ಲದಿರುವುದು, ಮತ್ತು ಅವುಗಳನ್ನು ಯಾವ ಅನುಕ್ರಮದಲ್ಲೂ ಬಳಸಲು ಸಾಧ್ಯ ಎಂಬುದೇ ಇಲ್ಲಿ ಸಮಸ್ಯೆಯಾಗಿದೆ.

ಇದಲ್ಲದೆ, ಸಂಸ್ಕೃತದಲ್ಲಿ ಒಂದು ಪದಕಂತೆಯ ಎರಡು ಅಂಗಗಳ ನಡುವೆ ಆ ಪದಕಂತೆಗೆ ಸಂಬಂಧಿಸದ ಬೇರೆ ಪದಗಳನ್ನು ಇರಿಸಿ ಹೇಳಲು ಸಾಧ್ಯವಿದೆ. ಉದಾಹರಣೆಗಾಗಿ, ಸರ್ಪಃ ಮೃತಃ ಕೃಷ್ಣಃ ಎಂಬುದು 'ಕಪ್ಪು ಹಾವು ಸತ್ತಿತು' ಎಂಬ ಅರ್ಥದ ಒಂದು ವಾಕ್ಯವಾಗಿರಲು ಸಾಧ್ಯವಿದ್ದು, ಕೃಷ್ಣಃ ಸರ್ಪಃ ಎಂಬ ಪದಕಂತೆಯ ಹೊರಗಿರಬೇಕಾದ ಮೃತಃ ಪದ ಅದರೊಳಗೆ ಬಂದಿರಲು ಸಾಧ್ಯವಾಗಿದೆ.

ಹಳೆಗನ್ನಡಕ್ಕೂ ಸಂಸ್ಕೃತಕ್ಕೂ ನಡುವೆ ಇಂತಹ ವಾಕ್ಯಗಳ ರಚನೆಯಲ್ಲಿ ಕಾಣಿಸುವ ಇನ್ನೊಂದು ವ್ಯತ್ಯಾಸವೇನೆಂದರೆ, ಹಳೆಗನ್ನಡದಲ್ಲಿ ಪದಕಂತೆ ಮತ್ತು ಗುಣವಾಕ್ಯಗಳ ನಡುವೆ ವ್ಯತ್ಯಾಸವಿದೆ, ಆದರೆ ಸಂಸ್ಕೃತದಲ್ಲಿ ಇಲ್ಲ. ಕ್ರಿಯಾಪದಗಳ ಸಂಬಂಧಿಸುವ ರೂಪಗಳನ್ನು ಬಳಸುವಲ್ಲಿ ಈ ವ್ಯತ್ಯಾಸ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತದೆ:

(೧೬ಕ) ಮಹಾಗ್ರಹಾರಂಗಳ ಮಹಾಜನಂಗಳ ಕೊಟ್ಟ ಪೊನ್ನ ಜನ್ನವಿರಂಗಳ್
'ಶ್ರೇಷ್ಠವಾದ ಅಗ್ರಹಾರಗಳ ಮಹಾಜನಗಳು ಕೊಟ್ಟಂತಹ ಚಿನ್ನದ ಯಜ್ಞೋಪವೀತಗಳು'

(೧೬ಖ) ತಿರಸಮಿದು ಧರಣೇಂದ್ರನ ಕೊಟ್ಟುದು
'ಈ ಮೂರೆಳೆಯ ಹಾರ ಧರಣೇಂದ್ರನೆಂಬ (ಸರ್ಪರಾಜನು) ಕೊಟ್ಟುದು'

(೧೬ಕ) ಒಂದು ಪದಕಂತೆ ಮತ್ತು (೧೬ಖ) ಒಂದು ವಿಷಯ ವಾಕ್ಯ (ಗುಣವಾಕ್ಯ). (೧೬ಕ)ದಲ್ಲಿ ಕುಡು ಕ್ರಿಯಾಪದದ ಸಂಬಂಧಿಸುವ ರೂಪ(ಕೃದಂತ)ವಾದ ಕೊಟ್ಟ ಬಂದಿದೆ, ಮತ್ತು (೧೬ಖ)ದಲ್ಲಿ ಅದೇ ಕ್ರಿಯಾಪದದ ನಾಮರೂಪವಾದ ಕೊಟ್ಟುದು ಬಂದಿದೆ.

ಆದರೆ, ಸಂಸ್ಕೃತದಲ್ಲಿ ಈ ರೀತಿ ಪದಕಂತೆ ಮತ್ತು ಗುಣವಾಕ್ಯಗಳ ನಡುವೆ ವ್ಯತ್ಯಾಸವನ್ನು ಸಾಧಿಸಲು ಸಾಧ್ಯವಾಗದು. ಮೇಲೆ ಗುಣವಾಕ್ಯಗಳಿಗೆ ಉದಾಹರಣೆಗಳಾಗಿ ಕೊಟ್ಟಿರುವ ವಾಕ್ಯಗಳೆಲ್ಲ ಪದಕಂತೆಗಳಾಗಿರಲೂ ಸಾಧ್ಯವಿದೆ.

(೧೭ಕ) ಸರ್ಪಃ ಮೃತಃ
'ಸರ್ಪ ಸತ್ತುದು'

(೧೭ಖ) ಸರ್ಪಃ ಮೃತಃ ಅತ್ರಾಸ್ತಿ
'ಸತ್ತ ಸರ್ಪ ಇಲ್ಲಿದೆ'

(೧೭ಕ)ದಲ್ಲಿ ಸರ್ಪಃ ಮೃತಃ ಎಂಬುದು ಒಂದು ಗುಣವಾಕ್ಯವಾಗಿ ಬಳಕೆಯಾಗಿದೆ; ಆದರೆ (೧೭ಖ)ದಲ್ಲಿ ಅದೇ ಬೇರೊಂದು ವಿಷಯವಾಕ್ಯದ ವಾಕ್ಯಾಂಶವಾಗಿ, ಎಂದರೆ ಪದಕಂತೆಯಾಗಿ ಬಳಕೆಯಾಗಿದೆ. ಮೇಲೆ (೪.೨.೨)ರಲ್ಲಿ ಸೂಚಿಸಿದ ಹಾಗೆ, ಹಳೆಗನ್ನಡದಲ್ಲಿ ಕೃದಂತಗಳಿಗೂ ಕೃಲ್ಲಿಂಗಗಳಿಗೂ ನಡುವೆ ವ್ಯತ್ಯಾಸವಿದೆ, ಆದರೆ ಸಂಸ್ಕೃತದಲ್ಲಿ ಅಂತಹ ವ್ಯತ್ಯಾಸವಿಲ್ಲ ಎಂಬುದೇ ಈ ರೀತಿ ಗುಣವಾಕ್ಯ ಮತ್ತು ಪದಕಂತೆಗಳು ಹಳೆಗನ್ನಡದಲ್ಲಿ ಭಿನ್ನವಾಗಿದ್ದು ಸಂಸ್ಕೃತದಲ್ಲಿ ಭಿನ್ನವಾಗಿಲ್ಲದಿರುವುದಕ್ಕೆ ಮುಖ್ಯ ಕಾರಣ.

## ೧೧.೭ ಸಾರಾಂಶ

ವಿಷಯ ವಾಕ್ಯಗಳ ರಚನೆಯಲ್ಲಿ ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಹಲವು ಮೂಲಭೂತವಾದ ವ್ಯತ್ಯಾಸಗಳಿವೆ. ಇವನ್ನು ಗಮನಿಸದ ಕಾರಣ, ಹಳೆಗನ್ನಡದ ವೈಯಾಕರಣಿಗಳಿಗೆ ಹಳೆಗನ್ನಡದ ವಿಷಯವಾಕ್ಯಗಳನ್ನು ಸ್ಪಷ್ಟವಾಗಿ ವರ್ಣಿಸಲು ಸಾಧ್ಯವಾಗಿಲ್ಲ. ನಿಜಕ್ಕೂ ಹಳೆಗನ್ನಡದ ವಿಷಯ ವಾಕ್ಯಗಳು ಎಂತಹವು ಎಂಬುದನ್ನು ಸರಿಯಾಗಿ ತಿಳಿದುಕೊಳ್ಳಬೇಕಿದ್ದಲ್ಲಿ ಇನ್ನೂ ಬಹಳಷ್ಟು ಸಂಶೋಧನೆಗಳನ್ನು ನಡೆಸುವ ಅವಶ್ಯಕತೆಯಿದೆ.

ಅಧ್ಯಾಯ ಹನ್ನೆರಡು

# ಮುಕ್ತಾಯ

## ೧೨.೧ ಹಳೆಗನ್ನಡ ವ್ಯಾಕರಣಗಳ ವಿಮರ್ಶೆಗಳು

ಹಳೆಗನ್ನಡದ ಮೇಲೆ ಕೇಶಿರಾಜನೇ ಮೊದಲಾದ ಪ್ರಾಚೀನ ವೈಯಾಕರಣಿಗಳು ಬರೆದಿರುವ ವ್ಯಾಕರಣಗಳು ನಿಜಕ್ಕೂ ಆ ಭಾಷೆಯ ವ್ಯಾಕರಣವೆಂತಹದು ಎಂಬುದನ್ನು ವಿವರಿಸಿ ಹೇಳಲು ಶಕ್ತವಾಗಿವೆಯೇ ಎಂಬುದನ್ನು ಪರಿಶೀಲಿಸುವುದೇ ಈ ಪುಸ್ತಕದ ಉದ್ದೇಶವಾಗಿದೆ. ಹಳೆಗನ್ನಡದ ಈ ಪ್ರಾಚೀನ ವ್ಯಾಕರಣಗಳನ್ನು ಹಿಂದೆಯೂ ಹಲವು ಮಂದಿ ವಿದ್ವಾಂಸರು ಪರಿಶೀಲಿಸಿದ್ದರು (ಕಿಟ್ಟೆಲ್ ೧೯೦೩, ಬಿಳಿಗಿರಿ ೧೯೬೯, ಕುಳ್ಳಿ ೧೯೭೬, ಸೀತಾರಾಮಯ್ಯ ೧೯೭೯, ವೆಂಕಟಾಚಲ ಶಾಸ್ತ್ರೀ ೧೯೯೪).

ಆದರೆ, ಹಿಂದಿನವರ ಪರಿಶೀಲನೆಗಳಿಗೂ, ಈ ಪುಸ್ತಕದಲ್ಲಿ ನಡೆಸಿರುವ ಪರಿಶೀಲನೆಗೂ ನಡುವೆ ಒಂದು ಮುಖ್ಯವಾದ ವ್ಯತ್ಯಾಸವಿದೆ: ಹಿಂದಿನ ಪರಿಶೀಲನೆಗಳನ್ನು ನಡೆಸಿದವರು ಪ್ರಾಚೀನ ವ್ಯಾಕರಣಗಳು, ಅದರಲ್ಲೂ ಕೇಶಿರಾಜನ ಶಬ್ದಮಣಿದರ್ಪಣ, ಹಳೆಗನ್ನಡಕ್ಕೆ ತಕ್ಕುದಾದ ವ್ಯಾಕರಣ ಎಂದು ಭಾವಿಸಿದ್ದರು. ಹಾಗಾಗಿ, ಆ ವ್ಯಾಕರಣದ ನಿಯಮಗಳಲ್ಲಿ ಕಾಣಿಸುವ ಅವ್ಯಾಪ್ತಿ, ಅತಿವ್ಯಾಪ್ತಿ ಮೊದಲಾದ ಕೆಲವು ದೋಷಗಳನ್ನು ತೋರಿಸಿಕೊಡುವುದಷ್ಟೇ ಅವರ ಪರಿಶೀಲನೆಯ ಉದ್ದೇಶವಾಗಿತ್ತು.

ಇಂತಹ ಹಲಕೆಲವು ದೋಷಗಳನ್ನು ನಿವಾರಿಸಿದಲ್ಲಿ ಕೇಶಿರಾಜನ ಶಬ್ದಮಣಿದರ್ಪಣವೇ ಹಳೆಗನ್ನಡಕ್ಕೆ ಬೇಕಾಗಿರುವ ಒಂದು ಅತ್ಯುತ್ತಮ ವ್ಯಾಕರಣವಾಗಬಲ್ಲುದು ಎಂಬುದು ಆ ವಿದ್ವಾಂಸರ ಅಭಿಪ್ರಾಯವಿದ್ದ ಹಾಗೆ ಕಾಣಿಸುತ್ತದೆ.

ನನ್ನ ಪುಸ್ತಕದ ಉದ್ದೇಶ ಇದಕ್ಕಿಂತ ತೀರ ಭಿನ್ನವಾದುದು. ನಿಜಕ್ಕೂ ಹಳೆಗನ್ನಡಕ್ಕೆ ಕೇಶಿರಾಜನೇ ಮೊದಲಾದವರು ರಚಿಸಿರುವ ವ್ಯಾಕರಣಗಳು ತಕ್ಕುವಾದವುಗಳಲ್ಲ ಎಂಬ ಅಭಿಪ್ರಾಯ ನನ್ನಲ್ಲಿದೆಯಾದ ಕಾರಣ, ಅವು ಯಾಕೆ ಹಳೆಗನ್ನಡಕ್ಕೆ ತಕ್ಕುವಲ್ಲ ಎಂಬುದನ್ನು ತೋರಿಸಿಕೊಡುವುದೇ ಈ ಪುಸ್ತಕದ ಮುಖ್ಯ ಉದ್ದೇಶವಾಗಿದೆ. ಹಳೆಗನ್ನಡದವಲ್ಲದ ಹಲವಾರು ವ್ಯಾಕರಣದ ಮೂಲತತ್ವಗಳನ್ನು ಈ ವ್ಯಾಕರಣಗಳಲ್ಲಿ ಹಳೆಗನ್ನಡದವೆಂದು ಭ್ರಮಿಸಿ ಬಳಸಲಾಗಿದೆ. ಹಾಗಾಗಿ, ಅವು ನಿಜವಾದ ಹಳೆಗನ್ನಡ ವ್ಯಾಕರಣಗಳಾಗಲಾರವು ಎಂಬುದನ್ನು ಈ ಪುಸ್ತಕದಲ್ಲಿ ತೋರಿಸಿಕೊಟ್ಟಿದ್ದೇನೆ.

ಕೇಶಿರಾಜನೇ ಮೊದಲಾದ ಹಳೆಗನ್ನಡದ ಪ್ರಾಚೀನ ವೈಯಾಕರಣಿಗಳಿಗೆ ಸಂಸ್ಕೃತ ವ್ಯಾಕರಣವೇ ಮಾದರಿಯಾಗಿತ್ತು. ಆಗಿನ ಕಾಲದಲ್ಲಿ ವಿದ್ವಾಂಸರೆಲ್ಲರೂ ಸಂಸ್ಕೃತದಲ್ಲಿ ಪರಿಣತರಾಗಿರುವುದು ಅವಶ್ಯವಾಗಿದ್ದುದು ಇದಕ್ಕೆ ಒಂದು ಕಾರಣ; ಯಾವ ಭಾಷೆಗೆ ವ್ಯಾಕರಣ ಬರೆಯುವುದಿದ್ದರೂ ಮೊದಲಿಗೆ ಸಂಸ್ಕೃತ ವ್ಯಾಕರಣವನ್ನು ಅರ್ಥಮಾಡಿಕೊಳ್ಳುವುದು ಅವಶ್ಯವಾಗಿದ್ದುದು ಇನ್ನೊಂದು ಕಾರಣ.

ಆದರೆ, ನಿಜಕ್ಕೂ ಹಳೆಗನ್ನಡಕ್ಕೆ ಸಂಸ್ಕೃತ ವ್ಯಾಕರಣ ಉತ್ತಮವಾದ ಮಾದರಿಯಲ್ಲ. ಯಾಕೆಂದರೆ, ಹಳೆಗನ್ನಡ ಮತ್ತು ಸಂಸ್ಕೃತ ಭಾಷೆಗಳು ಬೇರೆ ಬೇರೆ ಭಾಷಾಮೂಲಗಳಿಂದ ಬೆಳೆದು ಬಂದಿದ್ದು, ಆ ಮೂಲಗಳಿಂದ ಅವೆರಡೂ ತೀರ ಭಿನ್ನವಾದ ವ್ಯಾಕರಣ ತತ್ವಗಳನ್ನು ಪಡೆದುಕೊಂಡಿವೆ. ಈ ಎರಡು ಭಾಷೆಗಳಲ್ಲಿ ಪದಗಳು, ಪದರೂಪಗಳು, ಪದಕಂತೆಗಳು ಮತ್ತು ವಾಕ್ಯಗಳು ಹೇಗೆ ರಚಿತವಾಗುತ್ತವೆ ಎಂಬುದನ್ನು ಪರಿಶೀಲಿಸಿದಾಗ, ಅವೆರಡರ ನಡುವಿರುವ ವ್ಯತ್ಯಾಸ ಈ ರೀತಿ ಮೂಲಭೂತವಾದುದು ಎಂಬ ವಿಷಯ ಸ್ಪಷ್ಟವಾಗುತ್ತದೆ.

ಉದಾಹರಣೆಗಾಗಿ, ಸಂಸ್ಕೃತಕ್ಕೆ ಅವಶ್ಯವಿರುವ ವರ್ಣಗಳಲ್ಲಿ ಹಲವು (ಮಹಾಪ್ರಾಣಾಕ್ಷರಗಳು, ಋಕಾರ, ಶ, ಷ ಮೊದಲಾದವುಗಳು) ಹಳೆಗನ್ನಡಕ್ಕೆ ಬೇಕಾಗಿಲ್ಲ, ಮತ್ತು ಸಂಸ್ಕೃತದಲ್ಲಿ ಇಲ್ಲದಿರುವ ಕೆಲವು ವರ್ಣಗಳು (ೞಕಾರ–ಱಕಾರಗಳು, ಎಕಾರ–ಒಕಾರಗಳು) ಹಳೆಗನ್ನಡಕ್ಕೆ ಬೇಕಾಗುತ್ತವೆ. ಈ ವಿಷಯವನ್ನು ಹಲವರು ವಿದ್ವಾಂಸರು ಗಮನಿಸಿದ್ದಾರೆ. ಕೇಶಿರಾಜನೇ ಮೊದಲಾದವರೂ ಇದನ್ನು ಕಂಡುಕೊಂಡಿದ್ದಾರೆ.

ಆದರೆ, ವರ್ಣಗಳ ಬಳಕೆಯಲ್ಲಿ ಇದಕ್ಕಿಂತಲೂ ಮುಖ್ಯವಾದ, ಮತ್ತು ಮೂಲಭೂತವಾದ ವ್ಯತ್ಯಾಸ ಈ ಎರಡು ಭಾಷೆಗಳ ನಡುವೆ ಇದೆ. ಹಾಗಾಗಿ, ಪಾಣಿನಿಗೆ ಶಿವನೇ ತೋರಿಸಿಕೊಟ್ಟವೆಂದು ಹೇಳಲಾಗುವ ಮಾಹೇಶ್ವರ ಸೂತ್ರಗಳು ಸಂಸ್ಕೃತ ವ್ಯಾಕರಣಕ್ಕೆ ತಕ್ಕುವಾಗಿವೆಯಾದರೂ, ಹಳೆಗನ್ನಡ ವ್ಯಾಕರಣಕ್ಕೆ ತಕ್ಕುವಾಗಿಲ್ಲ. ಯಾಕೆಂದರೆ, ಅವುಗಳ ಮೂಲಕ ಸಿದ್ಧವಾಗುವ ಸ್ವರ ಮತ್ತು ವ್ಯಂಜನಗಳ ಪಾಠಕ್ರಮ ಸಂಸ್ಕೃತ ವ್ಯಾಕರಣಕ್ಕೆ ಅನುಕೂಲವಾಗಿದೆಯಲ್ಲದೆ, ಹಳೆಗನ್ನಡ ವ್ಯಾಕರಣಕ್ಕೆ ಅನುಕೂಲವಾಗಿಲ್ಲ. ಅದು 'ಅರ್ಣವವೃತ ಧಾತ್ರಿಯೊಳ್ ಪ್ರಸಿದ್ಧ'ವಾದುದಾಗಿ ಇದ್ದರೂ (ಕೇಶಿರಾಜ, ಸೂ. ೧೪) ಹಳೆಗನ್ನಡ ವ್ಯಾಕರಣ ಅದನ್ನು ಬಿಟ್ಟುಕೊಟ್ಟು ತನ್ನದೇ ಆದ ಪಾಠಕ್ರಮವನ್ನು ಸೃಷ್ಟಿಸಿಕೊಳ್ಳುವ ಅವಶ್ಯಕತೆಯಿದೆ.

ಪ್ರಾಚೀನ ವೈಯಾಕರಣಿಗಳು ಕೊಟ್ಟಿರುವ ವಿಭಕ್ತಿಪ್ರತ್ಯಯಗಳ ವರ್ಣನೆಯಲ್ಲಿಯೂ ಇದೇ ರೀತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿದರೆ ಸಾಕಾಗುವುದಿಲ್ಲ, ಮೂಲಭೂತವಾದ ಬದಲಾವಣೆಗಳನ್ನೇ ಮಾಡಬೇಕಾಗುತ್ತದೆ. ನಾಮಪದ ಮತ್ತು ಕ್ರಿಯಾಪದಗಳ ನಡುವೆ ಹಲವಾರು ರೀತಿಯ ಸಂಬಂಧಗಳಿರಲು ಸಾಧ್ಯವಿದ್ದು, ಪ್ರತ್ಯಯಗಳ ಮೂಲಕ ಸೂಚಿಸುವುದಕ್ಕಾಗಿ ಇವನ್ನು ಕೆಲವೇ ಕೆಲವು ಗುಂಪುಗಳಲ್ಲಿ ವಿಭಜಿಸುವ ಅವಶ್ಯಕತೆಯಿದೆ. ಈ ವಿಭಜನೆ ಎಲ್ಲಾ ಭಾಷೆಗಳಲ್ಲೂ ಒಂದೇ ತೆರನಾಗಿರುವುದಿಲ್ಲ.

ಸಂಸ್ಕೃತದಲ್ಲಿ ಈ ಸಂಬಂಧಗಳನ್ನು ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ ಮತ್ತು ಅಧಿಕರಣಗಳೆಂಬ ಆರು ಗುಂಪು(ಕಾರಕ)ಗಳಲ್ಲಿ ವಿಭಜಿಸಲಾಗಿದೆಯಾದರೆ, ಹಳೆಗನ್ನಡದಲ್ಲಿ ಆಗುಗ, ಮಾಡುಗ, ಸುರು, ಕೊನೆ ಮತ್ತು ಜಾಗಗಳೆಂಬ ಐದು ಗುಂಪುಗಳಲ್ಲಿ ವಿಭಜಿಸಲಾಗಿದೆ. ಇವೆರಡು ತೀರ ಭಿನ್ನವಾದ ವಿಭಜನೆಗಳಾದ ಕಾರಣ, ಸಂಸ್ಕೃತದ ಕಾರಕಗಳ ಮೂಲಕ ಹಳೆಗನ್ನಡ ವಾಕ್ಯಗಳನ್ನು ತೃಪ್ತಿಕರವಾಗಿ ವರ್ಣಿಸಲು ಸಾಧ್ಯವಾಗದು.

ಉದಾಹರಣೆಗಾಗಿ, ಹಳೆಗನ್ನಡದಲ್ಲಿ ವಾಕ್ಯಗಳನ್ನು ಜೋಡಿಸುವುದಕ್ಕಾಗಿ ಬಳಕೆಯಾಗುವ ಮಾಡಿ, ಕಂಡು ಮೊದಲಾದ ಕ್ರಿಯಾರೂಪಗಳ ಬಳಕೆಯನ್ನು 'ಏಕಕರ್ತೃಕ' ಎಂಬ ಕಲ್ಪನೆಯ ಸಹಾಯದಿಂದ ವಿವರಿಸುವ ಹಳೆಗನ್ನಡ ವೈಯಾಕರಣಿಗಳ ಪ್ರಯತ್ನ ಸಫಲವಾಗಿಲ್ಲ. ಅದಕ್ಕೆ ಬದಲು, ಕ್ರಿಯಾಪದಗಳನ್ನು ಐಚ್ಛಿಕ (ಮಾಡುಗ ಇರುವ ಕ್ರಿಯಾಪದ) ಮತ್ತು ಅನೈಚ್ಛಿಕ (ಮಾಡುಗ ಇಲ್ಲದ ಕ್ರಿಯಾಪದ) ಎಂಬುದಾಗಿ ವಿಂಗಡಿಸುವ ಅವಶ್ಯಕತೆಯಿದೆ. ಹೀಗೆ ಮಾಡಿದಲ್ಲಿ, ಅಂತಹ

ವಿಂಗಡಣೆಯ ಆಧಾರದ ಮೇಲೆ, ಜೋಡಿಸುವ ವಾಕ್ಯಗಳಲ್ಲಿ ಈ ಕ್ರಿಯಾಪದಗಳು ಹೇಗೆ ಬಳಕೆಯಾಗುತ್ತವೆ ಎಂಬುದನ್ನು ಸುಲಭವಾಗಿ ವಿವರಿಸಲು ಸಾಧ್ಯವಾಗುತ್ತದೆ (೧೦.೪ ನೋಡಿ).

ಸಂಸ್ಕೃತದಲ್ಲಿ ನಾಮಪದ ಮತ್ತು ಕ್ರಿಯಾಪದಗಳೆಂಬ ಎರಡು ಮುಖ್ಯ ಪದವರ್ಗಗಳು ಮಾತ್ರ ಇವೆ; ಆದರೆ, ಹಳೆಗನ್ನಡದಲ್ಲಿ ನಾಮಪದ, ಗುಣಪದ, ಮತ್ತು ಕ್ರಿಯಾಪದ ಎಂಬುದಾಗಿ ಮೂರು ಮುಖ್ಯ ಪದವರ್ಗಗಳಿವೆ. ಇದು ಈ ಎರಡು ಭಾಷೆಗಳ ನಡುವಿರುವ ಇನ್ನೊಂದು ಮೂಲಭೂತವಾದ ವ್ಯತ್ಯಾಸ. ಈ ವ್ಯತ್ಯಾಸದ ಪರಿಣಾಮವನ್ನು ಸಂಸ್ಕೃತ ಮತ್ತು ಹಳೆಗನ್ನಡ ವ್ಯಾಕರಣಗಳ ಹಲವಾರು ನಿಯಮಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

ಇದೇ ರೀತಿಯಲ್ಲಿ, ಈ ಎರಡು ಭಾಷೆಗಳು ಕ್ರಿಯಾಪದಗಳ ಮೂಲಕ ಘಟನೆಯ ಸಮಯವನ್ನು ಸೂಚಿಸುವುದಕ್ಕಾಗಿ ಯಾವ ದೃಷ್ಟಿಕೋನವನ್ನು ಅವಲಂಬಿಸಿವೆ ಎಂಬುದರಲ್ಲೂ ಮೂಲಭೂತವಾದ ವ್ಯತ್ಯಾಸವಿದೆ. ಹಳೆಗನ್ನಡ ಸಮಯ ಸಂಬಂಧಕ್ಕೆ ಮಹತ್ವವನ್ನು ಕೊಡುವುದಾದರೆ, ಸಂಸ್ಕೃತ ಸಮಯ ವ್ಯವಸ್ಥೆಗೆ ಮಹತ್ವವನ್ನು ಕೊಡುತ್ತದೆ. ಈ ವ್ಯತ್ಯಾಸದ ಪರಿಣಾಮವನ್ನೂ ವ್ಯಾಕರಣದ ಹಲವು ಭಾಗಗಳಲ್ಲಿ ಕಾಣಬಹುದು.

ಈ ರೀತಿ, ವ್ಯಾಕರಣದ ಮೂಲ ತತ್ವಗಳಲ್ಲೇನೇ ಹಳೆಗನ್ನಡ ಸಂಸ್ಕೃತಕ್ಕಿಂತ ಭಿನ್ನವಾಗಿದೆಯಾದ ಕಾರಣ, ಸಂಸ್ಕೃತ ವ್ಯಾಕರಣದ ನಿಯಮಗಳನ್ನು ಹಾಗೆಯೇ ಕನ್ನಡಕ್ಕೆ ಅಳವಡಿಸಲು ಪ್ರಯತ್ನಿಸಿರುವ ಕೇಶಿರಾಜನೇ ಮೊದಲಾದವರ ವ್ಯಾಕರಣಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡುವುದರ ಮೂಲಕ ಅವನ್ನು ಹಳೆಗನ್ನಡದ ಸರಿಯಾದ ವ್ಯಾಕರಣಗಳನ್ನಾಗಿ ಮಾಡಲು ಸಾಧ್ಯವಾಗದು.

ಈ ವ್ಯಾಕರಣಗಳನ್ನು ಒಂದು ಕಟ್ಟಡಕ್ಕೆ ಹೋಲಿಸಿದೆವಾದರೆ, ಮೇಲೆ ಸೂಚಿಸಿರುವ ದೋಷಗಳು ಅದರ ತಳಪಾಯದಲ್ಲೇನೇ ಕಾಣಿಸುವಂತಹ ದೋಷಗಳು ಎಂದು ಹೇಳಬಹುದು. ಹಾಗಾಗಿ, ಇವನ್ನು ನಿವಾರಿಸಬೇಕಿದ್ದಲ್ಲಿ, ಆ ಕಟ್ಟಡವನ್ನು ಸಂಪೂರ್ಣವಾಗಿ ಮುರಿದು, ತಳಪಾಯವನ್ನೇ ಬದಲಾಯಿಸಿ, ಬೇರೊಂದು ಹೊಸ ಕಟ್ಟಡವನ್ನು ಕಟ್ಟುವ ಅವಶ್ಯಕತೆಯಿದೆ.

## ೧೨.೨ ವ್ಯಾಕರಣದ ಸಂಕೀರ್ಣತೆ

ಒಂದು ಭಾಷೆಯ ವ್ಯಾಕರಣವೆಂಬುದು ಬಹಳ ಸಂಕೀರ್ಣವಾದ ವಿಷಯ. ಅದನ್ನು ಪರಿಶೀಲಿಸಿದಷ್ಟೂ ಅದರ ಕುರಿತಾಗಿ ಹೊಸ ಹೊಸ ಸಂಗತಿಗಳು ಗಮನಕ್ಕೆ ಬರುತ್ತಲೇ ಇರುತ್ತವೆ. ಇದಕ್ಕೆ ಕೊನೆಯೇ ಇಲ್ಲವೆಂದೂ ತೋರುತ್ತದೆ.

ಉದಾಹರಣೆಗಾಗಿ, ಇಂಗ್ಲಿಷ್ ಭಾಷೆಯ ವ್ಯಾಕರಣದ ಮೇಲೆ ಸುಮಾರು ಇನ್ನೂರು ವರ್ಷಗಳಿಂದಲೂ ನೂರಾರು ಮಂದಿ ವಿದ್ವಾಂಸರು ಸಂಶೋಧನೆಗಳನ್ನು ನಡೆಸುತ್ತಲೇ ಬಂದಿದ್ದಾರೆ. ಅದರ ಮೇಲೆ ನೂರಾರು ಗ್ರಂಥಗಳೂ ಪ್ರಕಟವಾಗಿವೆ. ಹೀಗಿದ್ದರೂ, ಅದರ ವ್ಯಾಕರಣದ ವೈಶಿಷ್ಟ್ಯಗಳೆಲ್ಲ ಸಂಪೂರ್ಣವಾಗಿ ಮತ್ತು ಸರಿಯಾಗಿ ನಮ್ಮ ಗಮನಕ್ಕೆ ಬಂದಿವೆಯೆಂದು ಇವತ್ತಿಗೂ ಹೇಳಲು ಸಾಧ್ಯವಾಗದು.

ಯಾಕೆಂದರೆ, ಅದರ ವ್ಯಾಕರಣದ ಕುರಿತಾಗಿ ಇವತ್ತಿಗೂ ಹೊಸ ಹೊಸ ಸಂಗತಿಗಳನ್ನು ಸಂಶೋಧಕರು ಹೊರಗೆಡಹುತ್ತಲೇ ಇದ್ದಾರೆ, ಮತ್ತು ಹಿಂದಿನವರ ವ್ಯಾಕರಣಗಳಲ್ಲಿ ಉಳಿದುಕೊಂಡಿರುವ ತಪ್ಪುಗಳನ್ನೂ ತೋರಿಸಿಕೊಡುತ್ತಿದ್ದಾರೆ. ಇದಕ್ಕೆ ನಾನೇ ನಡೆಸಿರುವ ಸಂಶೋಧನೆಯ ಒಂದು ಉದಾಹರಣೆಯನ್ನು ಕೊಡಬಲ್ಲೆ:

ಸರ್ವನಾಮಗಳ ಕುರಿತಾಗಿ ನಾನು ಇತ್ತೀಚೆಗೆ ಇಂಗ್ಲಿಷ್‌ನಲ್ಲಿ ಒಂದು ಪುಸ್ತಕವನ್ನು ಬರೆದಿದ್ದು, ಅದನ್ನು ಇಂಗ್ಲೆಂಡಿನ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ಪ್ರಕಟಿಸಿದೆ (ಭಟ್ ೨೦೦೪ಕ). ಈ ಪುಸ್ತಕವನ್ನು ಬರೆಯುವುದಕ್ಕಾಗಿ, ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಬಳಕೆಯಲ್ಲಿರುವ ನಾನ್ನೂರಕ್ಕಿಂತಲೂ ಹೆಚ್ಚು ಭಾಷೆಗಳ ವ್ಯಾಕರಣಗಳನ್ನು ಪರಿಶೀಲಿಸಿದ್ದೆ. ಈ ಭಾಷೆಗಳಲ್ಲಿ ಎಂತಹ ಸರ್ವನಾಮಗಳೆಲ್ಲ ಬಳಕೆಯಲ್ಲಿವೆ, ಅವುಗಳ ಮೇಲೆ ಯಾವ ರೀತಿಯ ನಿರ್ಬಂಧಗಳನ್ನೆಲ್ಲ ಹೇರಲಾಗುತ್ತದೆ, ಮತ್ತು ಸರ್ವನಾಮಗಳ ಮಟ್ಟಿಗೆ ಪ್ರಪಂಚದ ಭಾಷೆಗಳು ಯಾವ ರೀತಿಯಲ್ಲೆಲ್ಲ ಭಿನ್ನವಾಗಿರಲು ಸಾಧ್ಯ ಎಂಬುದನ್ನು ಈ ಪುಸ್ತಕದಲ್ಲಿ ವಿವರಿಸಲಾಗಿದೆ.

ಈ ಸಂಶೋಧನೆಯ ಆಧಾರದ ಮೇಲೆ, ಇಂಗ್ಲಿಷ್ ವ್ಯಾಕರಣಗಳಲ್ಲಿ ಕಾಣಿಸುವ ಕೆಲವು ದೋಷಗಳನ್ನು ಮತ್ತು ಸಮಸ್ಯೆಗಳನ್ನೂ ತೋರಿಸಿಕೊಡಲು ನನಗೆ ಸಾಧ್ಯವಾಗಿದೆ. ಉದಾಹರಣೆಗಾಗಿ, ಅನಿರ್ದಿಷ್ಟ ಮತ್ತು ಅನಿಶ್ಚಿತ ಎಂಬ ಎರಡು ತೀರ ಭಿನ್ನವಾದ ಬಳಕೆಗಳನ್ನು ಈ ವ್ಯಾಕರಣಗಳಲ್ಲಿ indefinite ಎಂಬ ಒಂದೇ ತತ್ವದ (ಪಾರಿಭಾಷಿಕ ಪದದ) ಮೂಲಕ ವಿವರಿಸುವ ಪ್ರಯತ್ನ ನಡೆದಿದೆ, ಮತ್ತು ಇದರಿಂದಾಗಿ ಇಂಗ್ಲಿಷ್ ವ್ಯಾಕರಣಗಳಲ್ಲಿ ಹಲವು ಸಮಸ್ಯೆಗಳು ಮತ್ತು ಗೊಂದಲಗಳು ಸೃಷ್ಟಿಯಾಗಿವೆ.

ಇಂಗ್ಲಿಷ್‌ನ a book ಎಂಬುದೊಂದು ಅನಿರ್ದಿಷ್ಟ ಪದಕಂತೆ, ಮತ್ತು any book ಎಂಬುದೊಂದು ಅನಿಶ್ಚಿತ ಪದಕಂತೆ. ಈ ಎರಡು ಪದಕಂತೆಗಳ ನಡುವೆ ಬಳಕೆಯಲ್ಲಿ ಹಲವು ವ್ಯತ್ಯಾಸಗಳಿವೆ. ಇಂಗ್ಲಿಷ್ ವೈಯಾಕರಣಿಗಳು ಇವೆರಡನ್ನೂ indefinite ಪದಕಂತೆಗಳೆಂದು ಪರಿಗಣಿಸಿದುದರಿಂದಾಗಿ ಹಲವು ಸಮಸ್ಯೆಗಳನ್ನೆದುರಿಸಬೇಕಾಗಿದೆ. ಅನಿರ್ದಿಷ್ಟ ಮತ್ತು ಅನಿಶ್ಚಿತ ಪದಕಂತೆಗಳ ನಡುವಿನ ವ್ಯತ್ಯಾಸಗಳನ್ನು ಸರಿಯಾಗಿ ಗಣನೆಗೆ ತೆಗೆದುಕೊಂಡಲ್ಲಿ, ಈ ಸಮಸ್ಯೆಗಳೆಲ್ಲ ಮಾಯವಾಗಿಬಿಡುತ್ತವೆ ಎಂಬುದನ್ನು ನಾನು ಮೇಲಿನ ಪುಸ್ತಕದಲ್ಲಿ ತೋರಿಸಿಕೊಟ್ಟಿದ್ದೇನೆ.

ಇದಲ್ಲದೆ, ಪ್ರಶ್ನಾರ್ಥಕಗಳೆಂದು ಹೇಳಲಾಗುವ who, what, when ಮೊದಲಾದ ಸರ್ವನಾಮಗಳು ನಿಜಕ್ಕೂ ಅನಿಶ್ಚಿತಾರ್ಥಗಳು ಮಾತ್ರ; ಅವನ್ನು ಪ್ರಶ್ನಾರ್ಥಕ ಸರ್ವನಾಮಗಳೆಂದು ಪರಿಗಣಿಸಿದಲ್ಲಿ ಹಲವು ಸಮಸ್ಯೆಗಳು ಮೂಡಿಬರುತ್ತವೆ; ಆದರೆ, ಅನಿಶ್ಚಿತ ಪದಗಳೆಂದು ಪರಿಗಣಿಸಿದಲ್ಲಿ ಅಂತಹ ಸಮಸ್ಯೆಗಳು ಉದ್ಭವಿಸುವುದಿಲ್ಲ. ಇಂತಹ ಬೇರೆಯೂ ಹಲವು ಹೊಸ ವ್ಯಾಕರಣ ವಿಷಯಗಳನ್ನು ನಾನು ಆ ಪುಸ್ತಕದಲ್ಲಿ ಪ್ರಸ್ತಾಪಿಸಿದ್ದು, ಅವು ಇಂಗ್ಲಿಷ್ ವ್ಯಾಕರಣಕ್ಕೂ ಸಂಬಂಧಿಸಿದವುಗಳಾಗಿವೆ.

ಇಂಗ್ಲಿಷ್‌ನ ಮೇಲೆ ನಡೆದಿರುವ ವ್ಯಾಕರಣಾಭ್ಯಾಸಗಳಿಗೆ ಹೋಲಿಸಿದೆವಾದರೆ, ಹಳೆಗನ್ನಡದ (ಇಲ್ಲವೇ ಹೊಸಗನ್ನಡದ) ವ್ಯಾಕರಣದ ಮೇಲೆ ಇದುವರೆಗೆ ನಡೆದಿರುವ ಸಂಶೋಧನೆ ಅತ್ಯಲ್ಪ ಎಂದು ಯಾರಿಗೂ ಅನಿಸದಿರದು. ಆ ವ್ಯಾಕರಣದ ನಿಜವಾದ ಸ್ವರೂಪ ಎಂತಹದು ಎಂಬುದನ್ನು ತಿಳಿಯಲು ನಾವು ಇನ್ನೂ ಬಹಳಷ್ಟು ಸಂಶೋಧನೆಗಳನ್ನು ನಡೆಸುವ ಅವಶ್ಯಕತೆಯಿದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಕೇಶಿರಾಜನ ವ್ಯಾಕರಣದಲ್ಲಿ ಹಳೆಗನ್ನಡದ ವ್ಯಾಕರಣವೆಂತಹದು ಎಂಬುದನ್ನು ತಿಳಿಯಲು ನಮಗೆ ಬೇಕಾಗುವ ವಿಷಯಗಳೆಲ್ಲವೂ ಇವೆ; ಆ ವ್ಯಾಕರಣವನ್ನು ಅರ್ಥಮಾಡಿಕೊಳ್ಳುವುದಷ್ಟೇ ಇವತ್ತು (ಅಥವಾ ಇನ್ನು ಮುಂದೆ) ನಾವು ಮಾಡಬೇಕಾಗಿರುವ ಕೆಲಸ ಎಂದು ಯಾರಾದರೂ ಭಾವಿಸುವುದಿದ್ದಲ್ಲಿ ಅದು ಎಂತಹ ಹುಂಬತನವಾಗಬಲ್ಲುದು ಎಂಬುದು ಈ ಮೇಲಿನ ಉದಾಹರಣೆಯಿಂದ ಸ್ಪಷ್ಟವಾಗದಿರದು.

## ೧೨.೩ ವ್ಯಾಕರಣದ ವೈವಿಧ್ಯ

ಒಂದು ಭಾಷೆಯ ವ್ಯಾಕರಣವನ್ನು ಮಾದರಿಯಾಗಿರಿಸಿಕೊಂಡು ಇನ್ನೊಂದು ಭಾಷೆಯ ವ್ಯಾಕರಣವನ್ನು ಬರೆಯ ಹೊರಡುವವರೆಲ್ಲರೂ ಎದುರಿಸಬೇಕಾಗಿರುವ ಸಮಸ್ಯೆಯೊಂದಿದೆ. ಮಾದರಿಯಾಗಿರುವ ಭಾಷೆಯ ವ್ಯಾಕರಣ ತಾವು ವಿವರಿಸಬೇಕಾಗಿರುವ ಭಾಷೆಯ ವ್ಯಾಕರಣಕ್ಕಿಂತ ತೀರ ಭಿನ್ನವಾಗಿದೆಯಾದರೆ, ಆ ಭಿನ್ನತೆಯೆಂತಹದು ಎಂಬುದನ್ನು ಕಂಡುಹಿಡಿಯುವುದೇ ಈ ಸಮಸ್ಯೆ. ಹೆಚ್ಚಿನವರಿಗೂ ಇದು ಬಿಡಿಸಲಾಗದ ಸಮಸ್ಯೆಯಾಗಿರುತ್ತದೆ.

ಸಂಸ್ಕೃತಕ್ಕೆ ವ್ಯಾಕರಣವನ್ನು ಬರೆದಿರುವ ಪಾಣಿನಿಯೇ ಮೊದಲಾದ ಸಂಸ್ಕೃತ ವೈಯಾಕರಣಿಗಳಿಗಾಗಲಿ, ಇಲ್ಲವೇ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಿಗೆ ವ್ಯಾಕರಣಗಳನ್ನು ಬರೆದ ಪಾಶ್ಚಾತ್ಯ ವಿದ್ವಾಂಸರಿಗಾಗಲಿ ಈ ಸಮಸ್ಯೆಯಿರಲಿಲ್ಲ. ಯಾಕೆಂದರೆ, ಅವರಿಗೆ ವ್ಯಾಕರಣವನ್ನು ಬರೆಯಲು ಬೇರೊಂದು ಭಾಷೆಯ ಮಾದರಿಯಿರಲಿಲ್ಲ. ಎಲ್ಲವನ್ನೂ ಅವರು ವರ್ಣಿಸಬೇಕಾಗಿರುವ ಭಾಷೆಯ ಸ್ವರೂಪವನ್ನು ಪರಿಶೀಲಿಸುವುದರ ಮೂಲಕ ಹೊಸತಾಗಿ ಕಂಡುಹಿಡಿಯಬೇಕಾಗಿತ್ತು.

ಮೊನ್ನೆ ಮೊನ್ನೆವರೆಗೂ ಈ ಸಮಸ್ಯೆ ಒಂದು ಸಮಸ್ಯೆಯೆಂಬುದೇ ವಿದ್ವಾಂಸರ ಅರಿವಿಗೆ ಬಂದಿರಲಿಲ್ಲ. ಮಾದರಿಯಾಗಿರುವ ಭಾಷೆಯ ವ್ಯಾಕರಣಕ್ಕಿಂತ ತಮ್ಮ ಕಲ್ಪನೆಗೂ ಮೀರಿದಂತಹ ಭಿನ್ನತೆಯನ್ನು ತೋರಿಸುವ ನವಹೋ, ಹೋಪಿ, ಮೊದಲಾದ ಅಮೆರಿಕಾದ ಮೂಲನಿವಾಸಿಗಳ ಭಾಷೆಗಳನ್ನು ವರ್ಣಿಸಹೊರಟಾಗ, ಮತ್ತು ಆಫ್ರಿಕಾದ ಬಂಟು, ದ್ಸುಲು, ಆಸ್ಟ್ರೇಲಿಯಾದ ದ್ಯಿರ್ಬಲ್, ಫಿಲಿಪ್ಪೈನ್ಸ್‌ನ ತಗಲೋಗ್ ಮೊದಲಾದ ಜಗತ್ತಿನ ಇತರ ರಾಷ್ಟ್ರಗಳಲ್ಲಿ ಬಳಕೆಯಲ್ಲಿರುವ ಭಾಷೆಗಳನ್ನು ವರ್ಣಿಸಹೊರಟಾಗ, ಈ ಸಮಸ್ಯೆ ಎಷ್ಟು ದೊಡ್ಡದು ಎಂಬ ವಿಷಯ ವಿದ್ವಾಂಸರ ಗಮನಕ್ಕೆ ಬಂತು.

ಬೇರೆ ಬೇರೆ ಭಾಷೆಗಳ ನಡುವೆ ವ್ಯಾಕರಣದಲ್ಲಿ ಎಂತಹ ವೈವಿಧ್ಯತೆಗಳೆಲ್ಲ ಇರಲು ಸಾಧ್ಯ ಎಂಬುದನ್ನು ಕಂಡುಹಿಡಿಯುವುದಕ್ಕಾಗಿ ಭಾಷಾವಿಜ್ಞಾನದಲ್ಲಿ ಈಗ language typology ಎಂಬ ಒಂದು ಹೊಸ ಶಾಖೆಯೇ ಬೆಳೆದು ಬಂದಿದೆ. ಇದು ಇಂತಹ ಒಂದಕ್ಕಿಂತ ಒಂದು ತೀರ ಭಿನ್ನವಾಗಿರುವ ಭಾಷೆಗಳ ಅಭ್ಯಾಸದ ಫಲವಾಗಿ ಹುಟ್ಟಿಕೊಂಡಿದೆ. ಈ ಶಾಖೆಯಲ್ಲಿ ನಾನು ಕಳೆದ ನಲುವತ್ತು ವರ್ಷಗಳಿಂದ ಸಂಶೋಧನೆ ನಡೆಸುತ್ತಿದ್ದೇನೆ. ಹಳೆಗನ್ನಡ ವ್ಯಾಕರಣದ ನಿಜವಾದ ಸ್ವರೂಪ ಕೇಶಿರಾಜನೇ ಮೊದಲಾದ ಪ್ರಾಚೀನ ವೈಯಾಕರಣಿಗಳು ಹೇಳಿರುವುದಕ್ಕಿಂತ ತೀರ ಭಿನ್ನವಾದುದು ಎಂಬ ವಿಷಯ ನನ್ನ ಗಮನಕ್ಕೆ ಬರಲು ಈ ಸಂಶೋಧನೆಯೇ ಮುಖ್ಯ ಕಾರಣ.

ಹಳೆಗನ್ನಡದಲ್ಲಿ ನಿಜಕ್ಕೂ ಪದಗಳ, ಪದರೂಪಗಳ, ಪದಕಂತೆಗಳ ಮತ್ತು ವಾಕ್ಯಗಳ ರಚನೆ ಹೇಗೆ ನಡೆಯುತ್ತದೆ ಎಂಬುದನ್ನು ಆಳವಾಗಿ ಅಭ್ಯಾಸಮಾಡುವ ಅವಶ್ಯಕತೆಯಿದೆ ಎಂಬ ವಿಷಯ ಈ ಪುಸ್ತಕದಿಂದ ಸ್ಪಷ್ಟವಾಗಿರಬಹುದು. ಇಂತಹ ಅಭ್ಯಾಸಕ್ಕೆ ಕೇಶಿರಾಜನ ವ್ಯಾಕರಣ ಮಾದರಿಯಾಗಲಾರದು. ನೇರವಾಗಿ ಪಂಪ, ರನ್ನ ಮೊದಲಾದವರ ಬರಹಗಳಲ್ಲಿ ಪದ, ಪದರೂಪ, ವಾಕ್ಯ ಮೊದಲಾದುವನ್ನು ಹೇಗೆ ರಚಿಸಲಾಗಿದೆ ಎಂಬುದನ್ನು ಪರಿಶೀಲಿಸುವುದೊಂದೇ ನಮಗಿರುವ ಮಾರ್ಗ.

ಹಳೆಗನ್ನಡ ವ್ಯಾಕರಣದ ಮೇಲೆ ಇಂತಹ ಹಲವಾರು ಆಳವಾದ ಸಂಶೋಧನೆಗಳನ್ನು ನಡೆಸುವ ಅವಶ್ಯಕತೆಯಿದೆ. ಇವುಗಳ ಮೂಲಕ ಹಳೆಗನ್ನಡ ವ್ಯಾಕರಣದ ಸ್ವರೂಪವೆಂತಹದು ಎಂಬುದನ್ನು ತಿಳಿಯಲು ಸಾಧ್ಯವಾಗುತ್ತದೆ. ಇದಲ್ಲದೆ, ಹೊಸಗನ್ನಡ ವ್ಯಾಕರಣವನ್ನು ಸರಿಯಾಗಿ ತಿಳಿದುಕೊಳ್ಳುವಲ್ಲಿಯೂ ಇಂತಹ ಹಳೆಗನ್ನಡ ವ್ಯಾಕರಣದ ಮೇಲೆ ನಡೆಸುವ ಸಂಶೋಧನೆಗಳು ಸಹಾಯಕವಾಗಬಲ್ಲುವು. ಯಾಕೆಂದರೆ, ಹೊಸಗನ್ನಡ ವ್ಯಾಕರಣ ನಿಯಮಗಳ ಮೂಲ ಹಳೆಗನ್ನಡ ವ್ಯಾಕರಣದಲ್ಲಿದೆ.

# ಆಕರಸೂಚಿ


ಅನಂತರಂಗಾಚಾರ್, ಎನ್. (ಗದ್ಯಾನುವಾದ). ೧೯೭೭. ಪಂಪಕವಿ ವಿರಚಿತ ಪಂಪಭಾರತಂ (ವಿಕ್ರಮಾರ್ಜುನ ವಿಜಯಂ). ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.

ಅಯ್ಯಂಗಾರ್, ಚೆನ್ನಕೇಶವ ಎಚ್. (ಸಂ.). ೧೯೩೮. ಕೇಶಿರಾಜನ ಶಬ್ದಮಣಿದರ್ಪಣ (ಲಿಂಗಣಾರಾಧ್ಯನ ವೃತ್ತಿ ಸಹಿತ). ಚೆನ್ನೈ: ಮದ್ರಾಸ್ ವಿಶ್ವವಿದ್ಯಾನಿಲಯ.

ಅಯ್ಯಂಗಾರ್. ವಿ. ಕೃಷ್ಣಸ್ವಾಮಿ ೧೯೬೫. 'ಸತಿಸಪ್ತಮೀ'. ಕನ್ನಡ ನುಡಿ, ೨೮-೭.

ಕಾಲ್ಡ್‌ವೆಲ್, ಆರ್. ೧೯೧೩. *A Comparative grammar of the Dravidian or South Indian languages.* London: Kegan, Paul, Trench, Trubner and Co. Ltd.

ಕಿಟ್ಟೆಲ್, ಎಫ್. ೧೯೦೩. *A Grammar of the Kannada language* (comparing the three dialects of the language). Mangalore: Basel Mission Book and Tract Depository.

ಕೀಲ್‌ಹೋರ್ನ್, ಎಫ್. ೧೯೭೦. *A Grammar of the Sanskrit language* (6th Edition). Varanasi: The Chowkhamba Sanskrit Series Office.

ಕುಶಾಲಪ್ಪ ಗೌಡ, ಕೆ. ೧೯೭೦. *Gowda Kannada. Annamalainagar:* Annamalai University.

ಕುಳ್ಳಿ, ಜೆ. ಎಸ್. ೧೯೭೬. *Kesiraja's Sabdamanidarpana*. Dharwar: Karnataka University.

ಕೃಷ್ಣಮೂರ್ತಿ, ಭ. ೨೦೦೩. *The Dravidian languages*. Cambridge: University Press.

ಗಾಯ್, ಜಿ. ಎಸ್. ೧೯೫೫. '*Pronouns in Vaddaradhane*'. Indian Linguistics 16, 250-1.

ಗ್ರೆನ್-ಎಕ್ಲುಂಡ್, ಜಿ. ೧೯೭೮. *A study of nominal sentences in the oldest Upanishads.* Sweden: Almqvist and Wiksell International.

ಜೋಶಿ, ಎಸ್. ಡಿ. ೧೯೬೭. '*Adjectives and substantives as a single class in the parts of speech*'. Journal of the University of Poona, Humanities section 25, 19-30.

ದೊಡ್ಡಸ್ವಾಮಿ ೧೯೮೦. ಹಳೆಗನ್ನಡ ವ್ಯಾಕರಣಗಳ ತೌಲನಿಕ ವಿಶ್ಲೇಷಣೆ. ಮಂಡ್ಯ: ಶ್ರೀಮತಿ ದೊಡ್ಡಸ್ವಾಮಿ.

ನರಸಿಂಹಾಚಾರ್, ಡಿ. ಎಲ್. ೧೯೭೧. ಪೀಠಿಕೆಗಳು, ಲೇಖನಗಳು. ಮೈಸೂರು: ಡಿ. ವಿ. ಕೆ. ಮೂರ್ತಿ.

ನರಸಿಂಹಾಚಾರ್, ಆರ್. ೧೯೬೯. *History of Kannada language.* (ಎರಡನೇ ಆವೃತ್ತಿ). Mysore: Mysore University.

ನರಸಿಂಹಾಚಾರ್, ಆರ್. (ಸಂ.). ೧೯೦೨. ನಾಗವರ್ಮ ವಿರಚಿತಂ ಕಾವ್ಯಾವಲೋಕನಂ. ಮೈಸೂರು: ಮೈಸೂರು ವಿಶ್ವವಿದ್ಯಾನಿಲಯ.

ಪದ್ಮನಾಭಶರ್ಮ, ಡಿ. (ಸಂ.). ೧೯೬೮. ಭಟ್ಟಾಕಲಂಕದೇವಕೃತ ಕರ್ಣಾಟಕ ಶಬ್ದಾನುಶಾಸನಂ (ನಲ್ನುಡಿಗನ್ನಡಿ ಎಂಬ ವ್ಯಾಖ್ಯಾನದ ಸಹಿತ). ಬೆಂಗಳೂರು: ರಾಜ್‌ಕಮಲ್ ಪ್ರಕಾಶನ.

ಬರೋ, ಟಿ. ೧೯೫೫. *The Sanskrit language.* London: Faber and Faber.

ಬರೋ, ಟಿ. ಮತ್ತು ಎಮೆನೋ, ಎಮ್. ಬಿ. ೧೯೬೧. *The Dravidian etymological dictionary.* Oxford: The Clarendon Press.

ಬಿಳಿಗಿರಿ, ಎಚ್. ಎಸ್. ೧೯೬೯. ಆಲೋಕ (ಕೇಶಿರಾಜನ 'ಶಬ್ದಮಣಿದರ್ಪಣ'ದ ವ್ಯಾಖ್ಯಾನ), ಭಾಗ ೧ (ಪೀಠಿಕೆ, ಸಂಧಿಪ್ರಕರಣ). ಸಾಗರ: ಅಕ್ಷರ ಪ್ರಕಾಶನ.

ಭಟ್, ಡಿ. ಎನ್. ಎಸ್. ೧೯೭೮. ಕನ್ನಡ ವಾಕ್ಯಗಳು: ಆಂತರಿಕ ರಚನೆ ಮತ್ತು ಅರ್ಥವ್ಯವಸ್ಥೆ. ಮೈಸೂರು: ಗೀತಾ ಬುಕ್ ಹೌಸ್.

---- ೧೯೯೧. *Grammatical relations.* London: Routledge.

---- ೧೯೯೪. *The adjectival category.* Amsterdam: John Benjamins.

---- ೧೯೯೯. *The prominence of tense, aspect and mood. Amsterdam:* John Benjamins.

---- ೨೦೦೧. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ. ಮೈಸೂರು: ಭಾಷಾಪ್ರಕಾಶನ.

---- ೨೦೦೨. ಕನ್ನಡ ಪದಗಳ ಒಳರಚನೆ. ಮೈಸೂರು: ಭಾಷಾಪ್ರಕಾಶನ.

---- ೨೦೦೩. ಕನ್ನಡದ ಸರ್ವನಾಮಗಳು. ಮೈಸೂರು: ಭಾಷಾಪ್ರಕಾಶನ.

---- ೨೦೦೪ಕ. *Pronouns: A cross-linguistic study.* Oxford: University Press.

---- ೨೦೦೪ಖ. ಕನ್ನಡ ವಾಕ್ಯಗಳ ಒಳರಚನೆ. ಮೈಸೂರು: ಭಾಷಾಪ್ರಕಾಶನ.

---- ೨೦೦೭. ಕನ್ನಡ ನುಡಿ ನಡೆದು ಬಂದ ದಾರಿ. ಹೆಗ್ಗೋಡು: ಭಾಷಾಪ್ರಕಾಶನ.

ಭಟ್ಟೋಜಿ ದೀಕ್ಷಿತ, ೧೯೦೬. ಸಿದ್ಧಾಂತ ಕೌಮುದೀ (ಶ್ರೀಶಚಂದ್ರ ವಾಸು ಅವರ ಇಂಗ್ಲಿಷ್ ಅನುವಾದದೊಂದಿಗೆ). ಡೆಲ್ಲಿ: ಮೋತಿಲಾಲ್ ಬನಾರಸೀದಾಸ್.

ಮೌರರ್, ವಾಲ್ಟರ್ ಹಾರ್ಡಿಂಗ್ ೧೯೫೫. *The Sanskrit language: An introductiory grammar and reader:* Surrey: Curzon.

ರಂಗನಾಥ ಶರ್ಮಾ, ಎನ್. ೨೦೦೨. ವ್ಯಾಕರಣಶಾಸ್ತ್ರದ ಪರಿವಾರ (ಕನ್ನಡ ವ್ಯಾಕರಣ ವಿಚಾರಗಳು). ಉಡುಪಿ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ.

ರಾಮಚಂದ್ರರಾವ್, ಬಿ. ೧೯೭೨. *A descriptive grammar of Pampa Bharata.* Mysore: University of Mysore.

ವರದಾಚಾರ್ಯ, ಎಂ. ಆರ್. ೧೯೭೭. 'ಭಟ್ಟಾಕಳಂಕನ ಶಬ್ದಾನುಶಾಸನ'. ವಿ. ಸೀತಾರಾಮಯ್ಯ (ಸಂಪಾದಿತ)ದಲ್ಲಿ, ಪುಟ ೬೫–೧೧೭.

ವಿಟ್ನೀ, ಡಬ್ಲ್ಯು. ಡಿ. ೧೮೮೮. *Sanskrit grammar.* ಹೊಸ ಮುದ್ರಣ: ಡಿಲ್ಲಿ: ಮೋತಿಲಾಲ್ ಬನಾರಸೀದಾಸ್.

ವಿಲ್ಸನ್, ಹೆಚ್. ಹೆಚ್. ೧೮೪೭. *An Introduction to the grammar of the Sanskrit language.* London: J. Madden and Co. (೧೯೬೧ರಲ್ಲಿ Chowkhamba Sanskrit Series office, Varanasi ಇವರಿಂದ ಪುನಃ ಪ್ರಕಟಿತವಾಗಿದೆ).

ವೆಂಕಟಾಚಲ ಶಾಸ್ತ್ರೀ, ಟಿ. ವಿ. ೧೯೯೪. 'ಉಪೋದ್ಘಾತ'. ವೆಂಕಟಾಚಲ ಶಾಸ್ತ್ರೀ (ಸಂ.) ಕೇಶಿರಾಜ ವಿರಚಿತ ಶಬ್ದಮಣಿ ದರ್ಪಣಂದಲ್ಲಿ ಪುಟ ೧–೧೪೨. ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ.

ಶಿವಾನಂದ, ವಿ. ೧೯೭೨. ಶಬ್ದಮಣಿದರ್ಪಣ ವಿಳಾಸ (ಹೊಸಗನ್ನಡ ವ್ಯಾಖ್ಯಾನ ಗದ್ಯ). ಗದಗ: ವಿಜಯ ಪುಸ್ತಕ ಭಂಡಾರ ಮತ್ತು ಪ್ರಕಾಶನ.

ಸೀತಾರಾಮಯ್ಯ, ವಿ. ೧೯೭೯. ಪ್ರಾಚೀನ ಕನ್ನಡ ವ್ಯಾಕರಣಗಳು. ಮೈಸೂರು: ಮೈಸೂರು ವಿಶ್ವವಿದ್ಯಾನಿಲಯ.

ಸೀತಾರಾಮಯ್ಯ, ವಿ. (ಸಂ.). ೧೯೭೭. ವ್ಯಾಕರಣಗಳು. ಬೆಂಗಳೂರು: ಐಬಿಎಚ್ ಪ್ರಕಾಶನ.

ಸ್ಪೀಜರ್, ಜೆ. ಎಸ್. ೧೮೮೬. *Sanskrit Syntax. Leyden: E.J.Brill.*

# ವಿಷಯಸೂಚಿ

## ನಾಡೋಜ ಮತ್ತು ಪಂಪಪ್ರಶಸ್ತಿ ಪಡೆದ
## ಡಿ.ಎನ್. ಶಂಕರ ಭಟ್
## ಬರೆದ ಇತರೆ ಕನ್ನಡ ಪುಸ್ತಕಗಳು

೧. ಕನ್ನಡ ವ್ಯಾಕರಣ ಯಾಕೆ ಬೇಕು? ೨೦೦೯, ೨೦೧೫ ಪು. ೨೬೦, ರೂ. ೧೭೦.

೨. ಇಂಗ್ಲಿಶ್ ಪದಗಳಿಗೆ ಕನ್ನಡದ್ದೇ ಪದಗಳು, ೨೦೦೮, ೨೦೧೧, ಪು. ೩೩೬, ರೂ. ೨೦೦.

೩. ಮಾತಿನ ಒಳಗುಟ್ಟು , ೨೦೦೮, ಪು. ೨೦೮, ರೂ. ೧೨೦.

೪. ಕನ್ನಡ ನುಡಿ ನಡೆದು ಬಂದ ದಾರಿ, ೨೦೦೭, ೨೦೦೯, ಪು. ೩೪೮, ರೂ. ೧೯೦.

೫. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ೨೦೦೦, ೨೦೦೧, ೨೦೦೬, ೨೦೦೯, ೨೦೧೧, ಪು. ೨೪೮, ರೂ. ೧೫೦.

೬. ಕನ್ನಡ ಪದಗಳ ಒಳರಚನೆ, ೧೯೯೯, ೨೦೦೨, ೨೦೧೦, ಪು. ೨೪೦, ರೂ. ೧೬೦.

೭. ಕನ್ನಡ ವಾಕ್ಯಗಳ ಒಳರಚನೆ, ೨೦೦೪, ೨೦೦೬, ೨೦೧೨, ಪು. ೨೮೦, ರೂ. ೧೮೦.

೮. ಕನ್ನಡ ಬರಹವನ್ನು ಸರಿಪಡಿಸೋಣ, ೨೦೦೬, ೨೦೦೯, ಪು. ೩೦೪, ರೂ. ೧೬೦.

೯. ಭಾಷೆಯ ಬಗೆಗೆ ನೀವೇನು ಬಲ್ಲಿರಿ? ೧೯೭೦, ೧೯೯೮, ೨೦೦೨, ೨೦೧೦, ಪು. ೨೦೬, ರೂ. ೧೪೦.

೧೦. ಕನ್ನಡ ಬರಹದ ಸೊಲ್ಲರಿಮೆ–೧, ೨೦೧೦, ಪು. ೩೨೮, ರೂ. ೨೨೦.

೧೧. ಕನ್ನಡ ಬರಹದ ಸೊಲ್ಲರಿಮೆ–೨, ೨೦೧೧, ಪು. ೩೧೨, ರೂ. ೨೦೦.

೧೨. ಕನ್ನಡ ಬರಹದ ಸೊಲ್ಲರಿಮೆ–೩, ೨೦೧೨, ಪು. ೩೬೦, ರೂ. ೨೪೦.

೧೩. ಕನ್ನಡ ಬರಹದ ಸೊಲ್ಲರಿಮೆ–೪, ೨೦೧೩, ಪು. ೩೨೦, ರೂ. ೨೨೦.

೧೪. ಮಾತು ಮತ್ತು ಬರಹದ ನಡುವಿನ ಗೊಂದಲ, ೨೦೧೨, ಪು. ೨೧೬, ರೂ. ೧೫೦.

೧೫. ಕನ್ನಡದಲ್ಲೇ ಹೊಸಪದಗಳನ್ನು ಕಟ್ಟುವ ಬಗೆ, ೨೦೧೪, ಪು. ೨೪೮, ರೂ. ೧೯೦.

೧೬. ಕನ್ನಡ ನುಡಿಯರಿಮೆಯ ಇಣುಕುನೋಟ, ೨೦೧೩, ಪು. ೧೨೪, ರೂ. ೧೦೦.

೧೭. ಕನ್ನಡ ವಾಕ್ಯಗಳು, ೧೯೭೮, ಪು. ೬೧೪, ಅಚ್ಚಿನಲ್ಲಿಲ್ಲ.

೧೮. ಕನ್ನಡದ ಸರ್ವನಾಮಗಳು, ೨೦೦೩, ಪು. ೧೯೨, ಅಚ್ಚಿನಲ್ಲಿಲ್ಲ.

೧೯. ಕನ್ನಡ ಭಾಷೆಯ ಕಲ್ಪಿತ ಚರಿತ್ರೆ, ೧೯೯೫, ಪು. ೧೧೨, ಅಚ್ಚಿನಲ್ಲಿಲ್ಲ.

# ರವೀಂದ್ರ ಪುಸ್ತಕಾಲಯ

ಚಾಮರಾಜಪೇಟೆ, ಸಾಗರ - 577 401 ಶಿವಮೊಗ್ಗ ಜಿಲ್ಲೆ, ಕರ್ನಾಟಕ
ದೂರವಾಣಿ: 08183-228616 (ಕಛೇರಿ) 221064 (ಮನೆ)

## ನಮ್ಮ ಕೆಲವು ಪ್ರಕಟಣೆಗಳು

**ನಿನ್ನುದ್ಧಾರ ಎಷ್ಟಾಯಿತು?*** / ಕಥಾಸಂಕಲನ / ನಾ. ಡಿಸೋಜ

**ಮಂಜಿನಕಾನು*** / ಕಾದಂಬರಿ / ನಾ. ಡಿಸೋಜ

**ನೆಲೆ*** / ಕಾದಂಬರಿ / ನಾ. ಡಿಸೋಜ/

**ಮಾನವ*** / ಕಾದಂಬರಿ / ನಾ. ಡಿಸೋಜ

**ಕುಂಜಾಲ ಕಣಿವೆಯ ಕೆಂಪುಹೂ** / ಕಾದಂಬರಿ / ನಾ. ಡಿಸೋಜ (ಎರಡನೆ ಮುದ್ರಣ) 80-00

**ಮುಳುಗಡೆ** / ಕಾದಂಬರಿ / ನಾ. ಡಿಸೋಜ 100-00

**ದೇವರಿಗೆ ದಿಕ್ಕು** (ಎರಡನೆ ಮು.) / ನಾಟಕ/ ನಾ. ಡಿಸೋಜ

**ತಬ್ಬಲಿ*** / ನಾಟಕ / ನಾ. ಡಿಸೋಜ

**ಭರತಪ್ಪನ ಸಂಸಾರ*** / ನಾಟಕ / ನಾ. ಡಿಸೋಜ

**ಭೂತ*** / ಮಕ್ಕಳ ನಾಟಕ / ನಾ. ಡಿಸೋಜ

**ಮುಂದೇನು?*** / ನಾಟಕ / ನಾ. ಡಿಸೋಜ

**ಹೂವಚೆಲ್ಲುತ ಬಾ** / (ಜಾನಪದ ಗೀತೆಗಳ ಸಂಗ್ರಹ)/ ನಾ. ಡಿಸೋಜ

**ಸುವರ್ಣೆ ಗ್ರೀನ್ ರೂಂ*** / ಕಥಾಸಂಕಲನ / ಗೀತಾಕುಲಕರ್ಣಿ

**ಅಪ್ಪ–ಕೊಡೆಗಳು*** / ನಾಟಕ / ಚಂದ್ರಶೇಖರ ಪಾಟೀಲ

**ತೆರೆಗಳು*** / ನಾಟಕ / ಪಿ. ಲಂಕೇಶ್

**ನನ್ನ ತಂಗಿಗೊಂದು ಗಂಡುಕೊಡಿ*** / ನಾಟಕ / ಪಿ. ಲಂಕೇಶ್

**ಟಿ. ಪ್ರಸನ್ನನ ಗೃಹಸ್ಥಾಶ್ರಮ*** / ನಾಟಕ / ಪಿ. ಲಂಕೇಶ್

**ಅಂತಃಸ್ಸರಿತೆ*** / ಕಾದಂಬರಿ / ನೀಳಾದೇವಿ

**ನಮಸ್ಕಾರ ಗರುಡಮ್ಮನವರೇ ಏನ್ಸಮಾಚಾರ*** / ಕಾದಂಬರಿ / ಎನ್. ಪಂಕಜ

**ಮೋಹದ ಮಡಿಲಲ್ಲಿ*** / ಕಾದಂಬರಿ / ಎ. ಪಂಕಜ

**ತಾರಾಮಂಡಲ*** / ನಾಟಕ / ಎ.ಎಸ್. ಮೂರ್ತಿ

**ನಾದಪ್ರೇಮಿ*** / ನಾಟಕ / ಎ.ಎಸ್. ಮೂರ್ತಿ

**ಸದಾಶಿವನ ಸ್ವಯಂವಧು** / ನಾಟಕ / ಪಿ. ಸುನಂದಮ್ಮ

**ಯಾರು ಹಿತವರು?*** / ಕಾದಂಬರಿ / ಎಂ.ಕೆ. ಇಂದಿರಾ

**ಪೂರ್ವಾಪರ** (ಮೂರನೇ ಮು.) / ಕಾದಂಬರಿ / ಎಂ.ಕೆ. ಇಂದಿರಾ 60-00

**ಭಾಷಾಂತರ ಕಲೆ*** / (ಭಾಷಾಂತರ ಬಗ್ಗೆ) / ಮಹೇಶ್ವರಪ್ಪ

**ಪ್ರತಿಭೆ*** / ಪ್ರಬಂಧ ಸಂಕಲನ / ಬಿ.ಎಚ್. ಶ್ರೀಧರ್

**ವಿಚಾರ ವಿಜಯ** / ರಾಜ್ಯಶಾಸ್ತ್ರ / ಬಿ.ಎಚ್. ಶ್ರೀಧರ್ 5-00

**ಒಲಿದು ಬಂದವಳು*** / ಕಾದಂಬರಿ / ಶ್ರೀನಿವಾಸ ಉಡುಪ

| | |
|---|---|
| **ತೆರೆದ ಮನಸ್ಸು*** / ಕಾದಂಬರಿ / ಶ್ರೀನಿವಾಸ ಉಡುಪ | |
| **ಭವಾನಿ*** / ಕಾದಂಬರಿ/ ಶ್ರೀನಿವಾಸ ಉಡುಪ | |
| **ತೆರೆಗಳು*** / ಕವನ ಸಂಕಲನ / ವೆಂಕಟಗಿರಿ | |
| **ಏನು ಬೇಡಲಿ ನಿನ್ನ ಬಳಿ ಬಂದು** / ನಾಟಕ / ಶ್ರೀರಂಗ | |
| **ಪ್ರಾಣಿ ಪ್ರಪಂಚದ ವಿಸ್ಮಯಗಳು*** / ವಿಜ್ಞಾನ / ಡಾ. ಶಿವರಾಮ ಕಾರಂತ | |
| **ಸಂಸ್ಕೃತ ಸುದರ್ಶಿನಿ** / ಪಠ್ಯಪುಸ್ತಕ / ಡಾ. ಗುರುಪಾದ ಹೆಗಡೆ | 45-00 |
| **ಕಾವ್ಯದಲ್ಲಿ ಧ್ವನಿ** / ವಿಮರ್ಶೆ / ಡಾ. ಗುರುಪಾದ ಹೆಗಡೆ | 25-00 |
| **ಯಥಾ ಪ್ರಸ್ತಾವಿತ** / ಕಾದಂಬರಿ / ಡಾ. ಹೆಚ್. ಶಿವಲಿಂಗಪ್ಪ | 33-00 |
| **ಗುಲಾಬಿ*** / ಕೃಷಿಕುಂಡ / ಡಾ. ಕೆ.ಎಸ್.ಪೈ | 60-00 |
| **ಮುಂಗಾರಿನ ಹುಡುಗಿ** / ಕಾದಂಬರಿ / ಸಾಯಿಸುತೆ | 80-00 |
| **ಮಾನಸವೀಣಾ** / ಕಾದಂಬರಿ / ಸಾಯಿಸುತೆ | 80-00 |
| **ದ್ವೀಪ** / ಕಾದಂಬರಿ / ನಾ. ಡಿಸೋಜಾ | 90-00 |
| **ವಸುಧೈವ ಕುಟುಂಬ*** / ಕಾದಂಬರಿ / ಸಾಯಿಸುತೆ | 200-00 |
| **ಬದುಕು–ಭರವಸೆ** / ವ್ಯಕ್ತಿಚಿತ್ರಣಗಳು / ವಿಲಿಯಂ | 75-00 |
| **ಎಚ್ಚರದ ಕನಸು** / ಕಥಾಸಂಕಲನ / ವೀಣಾಬನ್ನಂಜೆ | 40-00 |
| **ಮೂರನೇ ಸಾಕ್ಷಿದಾರ ಮತ್ತು ಹಳದಿಹೂ** / ಕಾದಂಬರಿ ಅನು: ಡಿ.ಎನ್. ಶ್ರೀನಾಥ್ | 90-00 |
| (2007ರ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಬಹುಮಾನಿತ ಕೃತಿ) | |
| **ಮಕ್ಕಳಿಗಾಗಿ ವಿವಿಧ ದೇಶದ ಜಾನಪದ ಕಥೆಗಳು** / ಅನು: ಡಿ.ಎನ್. ಶ್ರೀನಾಥ್ | 40-00 |
| **ಸುಣ್ಣ ಬಳಿದ ಸಮಾಧಿಗಳು** / ಕಾದಂಬರಿ / ನಾ. ಡಿಸೋಜ | 100-00 |
| **ಜೋಕ್ಸ್ ಸಾಗರ** / ನಗೆಹನಿಗಳು / ಎಸ್. ವಿಶ್ವನಾಥ್ | 175-00 |
| **ನಲ್ಲನಲ್ಲೆಯರ–ಕಿಸ್ ಜೋಕ್ಸ್** / ನಗೆಹನಿಗಳು / ಎಸ್. ವಿಶ್ವನಾಥ್ | 100-00 |
| **ಯಕ್ಷಗಾನ ಬಯಲಾಟ** / ಡಾ. ಶಿವರಾಮ ಕಾರಂತ | 175-00 |
| **ಜನಸಂಸ್ಕೃತಿ ಶೋಧ** / ಡಾ. ಗುರುರಾವ್ ಬಾಪಟ್ | 75-00 |
| **ಆವಿಗೆ** / ಚಿತ್ರಾ ಮುದಗಲ್ / ಅನುವಾದ: ಆರ್.ಪಿ. ಹೆಗಡೆ | 350-00 |
| **ಹುಲಿಯ ಹಾಲಿನ ಮೇವು** / ಕಾದಂಬರಿ / ಭಾರತೀಸುತ | 150-00 |
| **ಎಡಕಲ್ಲು ಗುಡ್ಡದ ಮೇಲೆ** / ಕಾದಂಬರಿ / ಭಾರತೀಸುತ | 100-00 |
| **ಕಾಡಿನ ಬೆಂಕಿ** / ಕಾದಂಬರಿ / ನಾ. ಡಿಸೋಜಾ | 130-00 |
| **ಹರಿವ ನದಿ** / ಕಾದಂಬರಿ / ನಾ. ಡಿಸೋಜಾ | 95-00 |
| **ಧರ್ಮರಾಯನ ಸಂಸಾರ** / ಕಾದಂಬರಿ / ಡಾ. ಶಿವರಾಮ ಕಾರಂತ | 180-00 |
| **ಇದ್ದರೂ ಚಿಂತೆ** / ಕಾದಂಬರಿ / ಡಾ. ಶಿವರಾಮ ಕಾರಂತ | 160-00 |
| **ಚಂದ್ರಕಾಂತಾ ಮತ್ತು ಸಂತತಿ** (ಆರು ಸಂಪುಟಗಳಲ್ಲಿ) – (ಸಂಪುಟ-1ಕ್ಕೆ) | 180-00 |
| **ಕ್ರಿಸ್ತಕಾವ್ಯ** / ಸಂ. ವಿಲಿಯಂ | 250-00 |
| **ಗಿಳಿಗಳು** / ಚಿತ್ರಾ ಮುದಗಲ್ / ಅನುವಾದ: ಆರ್.ಪಿ. ಹೆಗಡೆ | 70-00 |
| **ಗಿರಿಕನ್ನಿಕೆ** / ಕಾದಂಬರಿ / ಭಾರತೀಸುತ | 170-00 |

| | |
|---|---|
| ಹಾವು-ಮಂತ್ರ / ಅಬಿದ್ ಸುರತಿ/ ಅನುವಾದ: ಡಿ.ಎನ್. ಶ್ರೀನಾಥ್ | 60-00 |
| ಸುಳಿ / ಅಬಿದ್ ಸುರತಿ/ ಅನುವಾದ: ಡಿ.ಎನ್. ಶ್ರೀನಾಥ್ | 90-00 |
| ಅಕ್ಕನ ಹಾದಿ / ವೀಣಾ ಬನ್ನಂಜೆ | 40-00 |
| ಬಯಲುದಾರಿ / ಕಾದಂಬರಿ / ಭಾರತೀಸುತ | 190-00 |
| ನಮಾಮಿ ಕಲ್ಯಾಣ ಸುಂದರಮ್-1 / ಮೂಲ: ಹಮರಾಹಿ/ ಕನ್ನಡಕ್ಕೆ: ಆರ್.ಪಿ.ಹೆಗಡೆ | 130-00 |
| ನಮಾಮಿ ಕಲ್ಯಾಣ ಸುಂದರಮ್-2 / ಮೂಲ: ಹಮರಾಹಿ/ ಕನ್ನಡಕ್ಕೆ: ಆರ್.ಪಿ.ಹೆಗಡೆ | 140-00 |
| ಹಕ್ಕಿಗೊಂದು ಗೂಡು ಕೊಡಿ / ಮೂಲ: ನಾ. ಡಿಸೋಜ / ನಾಟಕ ರೂಪ: ಮಾಲತಿ ಸಾಗರ | 40-00 |
| ಅಂತರರಾಷ್ಟ್ರೀಯ ಅರ್ಥಶಾಸ್ತ್ರ / ಡಾ. ಶ್ಯಾಮಸುಂದರ್ | 150-00 |
| ದಡ್ಡತನದಲ್ಲಿ ಜಾಣತನ / ಸಂ: ಶಿರೋಮಣಿ ದೇವಿ/ ಕನ್ನಡಕ್ಕೆ: ಆರ್.ಪಿ.ಹೆಗಡೆ | 80-00 |
| ಕಣ್ಬೆಳಕು / ವಿನಾಯಕ ಶಿ. ಅರಳೆಲಿಮಠ | 50-00 |
| ಅಕ್ಕಮಹಾದೇವಿಯ ದ್ವೈತ / ವೀಣಾ ಬನ್ನಂಜೆ | 90-00 |
| ನಿತ್ಯನೂತನ ಪುರಂದರದಾಸರ ಜನಪ್ರಿಯ ಕೀರ್ತನೆಗಳು / ಅರಳುಮಲ್ಲಿಗೆ ಪಾರ್ಥಸಾರಥಿ | 100-00 |
| ಅಜ್ಞಾತ / ಕಾದಂಬರಿ / ನಾ. ಡಿಸೋಜ | 70-00 |
| ತ್ರಿಕೋನ / ಕಾದಂಬರಿ / ನಾ. ಡಿಸೋಜ | 90-00 |
| ಚಿತ್ತಾರ / ನಾ. ಡಿಸೋಜ | 60-00 |
| ಭಾರತೀಯ ಇತಿಹಾಸಕಾರರು / ಡಾ. ಕೆ. ಪ್ರಭಾಕರ ರಾವ್ | 225-00 |

### ನಮ್ಮ ಏಜೆನ್ಸಿ ಪುಸ್ತಕಗಳು

| | |
|---|---|
| ಅಮ್ಮ / ಅನುವಾದ: ಆರ್.ಪಿ. ಹೆಗಡೆ | 60-00 |
| ಆಹಿರನ ದಂಡೆಯ ಮೇಲೆ / ಅನುವಾದ: ಆರ್.ಪಿ. ಹೆಗಡೆ | 75-00 |
| ಆಷಾಢ / ವಿ.ಎಂ. ಶರ್ಮಾ ಹುಳೇಗಾರು | 80-00 |

---

* ಈ ಗುರುತಿನ ಪ್ರಕಟಣೆಗಳ ಪ್ರತಿಗಳು ಮುಗಿದಿವೆ

## ಉದಯಭಾನು ಕಲಾಸಂಘ (ನೋಂ.)

ಗವಿಪುರ ಸಾಲುಛತ್ರಗಳ ಎದುರು, ರಾಮಕೃಷ್ಣ ಮಠ ಬಡಾವಣೆ,
ಕೆಂಪೇಗೌಡನಗರ, ಬೆಂಗಳೂರು-560 019

## ಗ್ರಂಥ ಭಂಡಾರ

ಈ ಪುಸ್ತಕವನ್ನು ನಿಗಧಿತ ದಿನಾಂಕದೊಳಗೆ ಹಿಂತಿರುಗಿಸಬೇಕು. ಆ ನಂತರ ತಡವಾದ ಪ್ರತಿದಿನಕ್ಕೆ ರೂ. 2/-ಗಳ ಶುಲ್ಕವನ್ನು ವಿಧಿಸಲಾಗುವುದು.

| ಗುರುತಿನ ಕಾರ್ಡ್‌ಸಂಖ್ಯೆ | ಹಿಂತಿರುಗಿಸಬೇಕಾದ ದಿನಾಂಕ | ಗ್ರಂಥಪಾಲಕರ ಸಹಿ |
|---|---|---|
| 23/03/2023 | | |
| | | |
| | | |
| | | |
| | | |
| | | |
| | | |
| | | |
| | | |
| | | |
| | | |

ಪು.ತಿ.ನೋ...



**ನಾಡೋಜ ಮತ್ತು ಪಂಪಪ್ರಶಸ್ತಿ ಪಡೆದ**
**ಡಿ.ಎನ್. ಶಂಕರ ಭಟ್**
**ಬರೆದ ಬೇರೆ ಕನ್ನಡ ಪುಸ್ತಕಗಳು**

| | | | | |
|---|---|---|---|---|
| ೧. | ಕನ್ನಡ ವ್ಯಾಕರಣ ಯಾಕೆ ಬೇಕು? | ೨೦೦೯, ೨೦೧೫ | ಪು. ೨೬೦ | ರೂ. ೧೭೦ |
| ೨. | ಇಂಗ್ಲಿಶ್ ಪದಗಳಿಗೆ ಕನ್ನಡದ್ದೇ ಪದಗಳು | ೨೦೦೮, ೨೦೧೧ | ಪು. ೩೩೬ | ರೂ. ೨೦೦ |
| ೩. | ಮಾತಿನ ಒಳಗುಟ್ಟು | ೨೦೦೮ | ಪು. ೨೦೮ | ರೂ. ೧೨೦ |
| ೪. | ಕನ್ನಡ ನುಡಿ ನಡೆದು ಬಂದ ದಾರಿ | ೨೦೦೭, ೨೦೦೯ | ಪು. ೩೪೮ | ರೂ. ೧೯೦ |
| ೫. | ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ | ೨೦೦೦, ೨೦೦೧, ೨೦೦೬, ೨೦೦೯, ೨೦೧೧ | ಪು. ೨೪೮ | ರೂ. ೧೫೦ |
| ೬. | ಕನ್ನಡ ಪದಗಳ ಒಳರಚನೆ | ೧೯೯೯, ೨೦೦೨, ೨೦೧೦ | ಪು. ೨೪೦ | ರೂ. ೧೬೦ |
| ೭. | ಕನ್ನಡ ವಾಕ್ಯಗಳ ಒಳರಚನೆ | ೨೦೦೪, ೨೦೦೬, ೨೦೧೨ | ಪು. ೨೮೦ | ರೂ. ೧೮೦ |
| ೮. | ಕನ್ನಡ ಬರಹವನ್ನು ಸರಿಪಡಿಸೋಣ | ೨೦೦೬, ೨೦೦೯ | ಪು. ೩೦೪ | ರೂ. ೧೬೦ |
| ೯. | ಭಾಷೆಯ ಬಗೆಗೆ ನೀವೇನು ಬಲ್ಲಿರಿ? | ೧೯೭೦, ೧೯೯೮, ೨೦೦೨, ೨೦೧೦ | ಪು. ೨೦೬ | ರೂ. ೧೪೦ |
| ೧೦. | ಕನ್ನಡ ಬರಹದ ಸೊಲ್ಲರಿಮೆ–೧ | ೨೦೧೦ | ಪು. ೩೨೮ | ರೂ. ೨೨೦ |
| ೧೧. | ಕನ್ನಡ ಬರಹದ ಸೊಲ್ಲರಿಮೆ–೨ | ೨೦೧೧ | ಪು. ೩೧೨ | ರೂ. ೨೦೦ |
| ೧೨. | ಕನ್ನಡ ಬರಹದ ಸೊಲ್ಲರಿಮೆ–೩ | ೨೦೧೨ | ಪು. ೩೬೦ | ರೂ. ೨೪೦ |
| ೧೩. | ಕನ್ನಡ ಬರಹದ ಸೊಲ್ಲರಿಮೆ–೪ | ೨೦೧೩ | ಪು. ೩೨೦ | ರೂ. ೨೨೦ |
| ೧೪. | ಮಾತು ಮತ್ತು ಬರಹದ ನಡುವಿನ ಗೊಂದಲ | ೨೦೧೨ | ಪು. ೨೧೬ | ರೂ. ೧೫೦ |
| ೧೫. | ಕನ್ನಡದಲ್ಲೇ ಹೊಸಪದಗಳನ್ನು ಕಟ್ಟುವ ಬಗೆ | ೨೦೧೪ | ಪು. ೨೪೮ | ರೂ. ೧೯೦ |
| ೧೬. | ಕನ್ನಡ ನುಡಿಯರಿಮೆಯ ಇಣುಕುನೋಟ | ೨೦೧೩ | ಪು. ೧೨೪ | ರೂ. ೧೦೦ |
| ೧೭. | ಕನ್ನಡ ವಾಕ್ಯಗಳು | ೧೯೭೮ | ಪು. ೬೧೪ | ಅಚ್ಚಿನಲ್ಲಿಲ್ಲ |
| ೧೮. | ಕನ್ನಡದ ಸರ್ವನಾಮಗಳು | ೨೦೦೩ | ಪು. ೧೯೨ | ಅಚ್ಚಿನಲ್ಲಿಲ್ಲ |
| ೧೯. | ಕನ್ನಡ ಭಾಷೆಯ ಕಲ್ಪಿತ ಚರಿತ್ರೆ | ೧೯೯೫ | ಪು. ೧೧೨ | ಅಚ್ಚಿನಲ್ಲಿಲ್ಲ |

ಸುವರ್ಣ ಸಂಭ್ರಮ


ರವೀಂದ್ರ ಪುಸ್ತಕಾಲಯ
ಚಾಮರಾಜಪೇಟೆ
ಸಾಗರ-577401
[ಶಿವಮೊಗ್ಗ ಜಿಲ್ಲೆ]

ISBN: 978-81-925238-7-3


ಬೆಲೆ : ₹ 200/-